ಶ್ರೀಯುತ ಕಡಿದಾಳ್ ಮಂಜಪ್ಪನವರು (೧೯೦೮-೧೯೯೨) ವೃತ್ತಿಯಲ್ಲಿ ವಕೀಲರು. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ 'ಹಾರೋಗೊಳಿಗೆ' ಎಂಬ ಗ್ರಾಮ ಇವರ ಹುಟ್ಟೂರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಸೆರೆಮನೆ ವಾಸವನ್ನು ಅನುಭವಿಸಿದ್ದವರು. ಹಿಂದಿನ ಮೈಸೂರು ರಾಜ್ಯದ ಪ್ರಜಾಪ್ರತಿನಿಧಿ ಸಭೆ ಮತ್ತು ವಿಧಾನ ಪರಿಷತ್ತುಗಳ ಸದಸ್ಯರಾಗಿದ್ದು, ನಂತರ ವಿವಿಧ ಮಂತ್ರಿಮಂಡಲಗಳಲ್ಲಿ ಮಂತ್ರಿಯಾಗಿಯೂ ಸೇವೆ ಸಲ್ಲಿಸಿದ್ದಲ್ಲದೆ, ೧೯೫೬ರ ಆಗಸ್ಟ್ ತಿಂಗಳಲ್ಲಿ ರಾಜ್ಯದ ಮುಖ್ಯಮಂತ್ರಿಯಾಗಿಯೂ ಆಯ್ಕೆ ಹೊಂದಿದ್ದರು. ತಮ್ಮ ಆತ್ಮಚರಿತ್ರೆ "ನನಸಾಗದ ಕನಸು" ಗ್ರಂಥವನ್ನಲ್ಲದೆ "ಪಂಜರವಳ್ಳಿಯ ಪಂಜು", "ನಾಳೆಯ ನೆಳಲು" ಮತ್ತು "ಕ್ರಾಂತಿಕೂಟ" ಎಂಬ ಮೂರು ರಾಜಕೀಯ ಕಾದಂಬರಿಗಳನ್ನು ಬರೆದು ಸಾಹಿತ್ಯ ಕ್ಷೇತ್ರದಲ್ಲೂ ತಮ್ಮನ್ನು ಗುರುತಿಸಿಕೊಂಡವರು.

ಕಡಿದಾಳ್ ಮಂಜಪ್ಪ ಜನ್ಮಶತಮಾನೋತ್ಸವ ಸಂಸ್ಮರಣೆ

# ಪಂಜರವಳ್ಳಿಯ ಪಂಜು

ಕಡಿದಾಳ್ ಮಂಜಪ್ಪ



ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಬೆಂಗಳೂರು

**PANJARAVALLIYA PANJU** : Written by Kadidal Manjappa, Published by : **Manu Baligar**, Director, Department of Kannada & Culture, Kannada Bhavana, J.C. Road, Bengalooru - 560 002.



ಪ್ರಕಟಣಾ ವರ್ಷ : ೨೦೦೮

ಪುಟಗಳು : xiv + ೧೭೦

ಪ್ರತಿಗಳು : ೧೦೦೦

ರಕ್ಷಾಪುಟ : ಪ.ಸ. ಕುಮಾರ್

ಬೆಲೆ : **ರೂ. ೬೫/–**

Price : **Rs. 65/-**

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

## ಪ್ರಕಾಶಕರ ನುಡಿ

ದಿವಂಗತ ಕಡಿದಾಳ್ ಮಂಜಪ್ಪನವರು ಸ್ವಾತಂತ್ರ್ಯ ಹೋರಾಟಗಾರರು, ದಕ್ಷ ರಾಜಕಾರಣಿ, ಪರಿಶುದ್ಧ ಜೀವನ ನಡೆಸಿದ ಧೀಮಂತ ಪುರುಷ. ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಪ್ರಥಮ ಸಚಿವ ಸಂಪುಟದಲ್ಲಿ ಶ್ರೀ ಕಡಿದಾಳ್ ಮಂಜಪ್ಪನವರು ಕಂದಾಯ ಮತ್ತು ಕಾಮಗಾರಿ ಸಚಿವರಾಗಿದ್ದರು. ಕಂದಾಯ ಸಚಿವರಾಗಿ ಭೂ ಸುಧಾರಣೆಗೆ ಭದ್ರ ಬುನಾದಿ ಹಾಕಿ 'ಭೂ ಸುಧಾರಣೆಯ ರೂವಾರಿ' ಎಂಬ ಕೀರ್ತಿಗೆ ಪಾತ್ರರಾದವರು ಹಾಗೂ ಇನಾಂ ಜಹಗೀರಿ, ಜೋಡಿ ಗ್ರಾಮ ಪದ್ಧತಿ ಮುಂತಾದ ರೂಢಿಗತ ಪದ್ಧತಿಗಳನ್ನು ರದ್ದುಪಡಿಸಿ ಪರಿವರ್ತನಶೀಲ ಸಮಾಜ ನಿರ್ಮಾಣಕ್ಕೆ ಪ್ರವರ್ತಕರಾದವರು.

ನಂತರ ಶ್ರೀ ಕಡಿದಾಳ್ ಮಂಜಪ್ಪನವರು ರಾಜ್ಯದ ಮುಖ್ಯಮಂತ್ರಿಯಾದರು. ಹೀಗೆ ಶಾಸಕ, ಮಂತ್ರಿ, ಮುಖ್ಯಮಂತ್ರಿ ಆಗಿ ನಾಡು ನುಡಿಗೆ ಅನನ್ಯ ಸೇವೆ ಸಲ್ಲಿಸಿರುವ ಶ್ರೀ ಕಡಿದಾಳರ ಜೀವನ ಪಥ ; ಸುವರ್ಣ ಪಥ. ಶ್ರೀ ಕಡಿದಾಳ್ ಮಂಜಪ್ಪನವರು ಶ್ರೇಷ್ಠ ಸಂಸದೀಯ ಪಟು, ರಾಜಕಾರಣಿಯೇ ಅಲ್ಲದೆ ಸಾಹಿತಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಮೂರು ಕಾದಂಬರಿ ಮತ್ತು ಒಂದು ಆತ್ಮಕಥನವನ್ನು ಬರೆದಿದ್ದಾರೆ. ದಿವಂಗತ ಕಡಿದಾಳ್ ಮಂಜಪ್ಪನವರ ಜನ್ಮಶತಮಾನೋತ್ಸವದ ಅಂಗವಾಗಿ ರಾಜ್ಯ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದೆ. ಅವುಗಳಲ್ಲಿ ಅವರು ರಚಿಸಿದ ಪುಸ್ತಕಗಳನ್ನು ಪ್ರಕಟಿಸಿ ಜನಸಾಮಾನ್ಯರಿಗೆ ಸುಲಭ ಬೆಲೆಯಲ್ಲಿ ನೀಡಬೇಕೆಂಬುದು ಒಂದಾಗಿರುತ್ತದೆ.

ಅದರಂತೆ ಶ್ರೀ ಕಡಿದಾಳ್ ಮಂಜಪ್ಪನವರ ಪುಸ್ತಕಗಳನ್ನು ಪ್ರಕಟಿಸಲಾಗುತ್ತಿದ್ದು, ಪ್ರಕಟಿಸಲು ಒಪ್ಪಿಗೆ ನೀಡಿದ ಅವರ ಮಗಳು ಶ್ರೀಮತಿ ಶ್ರೀಕಲಾ ಅವರಿಗೆ ನನ್ನ ಕೃತಜ್ಞತೆಗಳು. ಈ ಪುಸ್ತಕಗಳ ಕರಡಚ್ಚು ತಿದ್ದುವ ಜವಾಬ್ದಾರಿಯನ್ನು ಡಾ॥ ಶ್ರೀಕಂಠಕೂಡಿಗೆ ಅವರು ವಹಿಸಿಕೊಂಡು ನೆರವಾಗಿದ್ದಾರೆ. ಈ ಪುಸ್ತಕಗಳನ್ನು ಹೊರತರಲು ನೆರವಾದ 'ಕಡಿದಾಳು' ಸಂಸ್ಮರಣ ಗ್ರಂಥದ ಸಂಪಾದಕರು ಹಾಗೂ ಸಂಪಾದಕ ಮಂಡಳಿಯ ಎಲ್ಲ ಸದಸ್ಯರಿಗೆ ನನ್ನ ಕೃತಜ್ಞತೆಗಳು.

ಶ್ರೀ ಕಡಿದಾಳ್ ಮಂಜಪ್ಪನವರ ಪುಸ್ತಕಗಳ ಪ್ರಕಟಣೆಯನ್ನು ಹೊರತರಲು ಸಹಕರಿಸಿದ ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ, ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು, ಪ್ರಕಟಣ ಶಾಖೆ ಹಾಗೂ ಸಿಬ್ಬಂದಿ ವರ್ಗದವರಿಗೆ ಹಾಗೂ ಈ ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್ ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು.

ಶ್ರೀ ಕಡಿದಾಳ್ ಮಂಜಪ್ಪನವರ ಪುಸ್ತಕಗಳನ್ನು ಓದಿ, ಅವರ ಜೀವನಾದರ್ಶಗಳನ್ನು ನಮ್ಮ ಯುವಜನಾಂಗ ರೂಢಿಸಿಕೊಳ್ಳುವ ಮೂಲಕ ಈ ಪುಸ್ತಕಗಳ ಸದುಪಯೋಗ ಮಾಡಿಕೊಳ್ಳುತ್ತಾರೆಂದು ನಾನು ನಂಬಿದ್ದೇನೆ.

**ಮನು ಬಳಿಗಾರ್**
ನಿರ್ದೇಶಕರು

# ಪ್ರಸ್ತಾವನೆ

ಕೆಲವು ವರ್ಷಗಳಿಂದೀಚೆಗೆ ಈ ರಾಜ್ಯದ ಕೆಲವು ಕಡೆಗಳಲ್ಲಿ ಸಂಭವಿಸಿದ ಕೆಲವು ಘಟನೆಗಳು ನನ್ನ ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟು ಮಾಡಿದ್ದವು. ಈ ಪರಿಣಾಮವೇ ಈ ಕಾದಂಬರಿಯನ್ನು ಬರೆಯಲು ಕಾರಣವಾಯಿತೆಂದರೆ ತಪ್ಪಾಗಲಾರದು. ಕಳೆದ ಮಹಾ ಚುನಾವಣೆಗಳ ಕಾಲದಲ್ಲಿ, ನನ್ನ ಚುನಾವಣಾ ಕ್ಷೇತ್ರದಲ್ಲಿ ಚುನಾವಣೆಯ ಹೋರಾಟ ನಡೆಯುತ್ತಿದ್ದಾಗ, ರಾಜಕಾರಣಕ್ಕೆ ಸಂಬಂಧಪಟ್ಟಂತೆ ಒಂದು ಕಾದಂಬರಿಯನ್ನು ಬರೆಯಬೇಕೆಂದು ಸಂಕಲ್ಪ ಮಾಡಿದೆ. ಚುನಾವಣೆ ಮುಗಿದ ತರುವಾಯ ನನಗೆ ದೊರಕಿದ ವಿರಾಮವನ್ನು ಉಪಯೋಗಿಸಿಕೊಂಡು ಈ ಕೃತಿ ರಚನೆಗೆ ಕೈಹಾಕಿದೆ. ಸಾಹಿತಿ ಆಗಬೇಕೆಂಬ ಆಕಾಂಕ್ಷೆಯಿಂದ ಈ ಕಾರ್ಯಕ್ಕೆ ಕೈ ಹಾಕಲಿಲ್ಲ; ನಾನಾ ಕಾರಣಗಳ ದೆಶೆಯಿಂದ ಬರೆಯಬೇಕೆಂಬ ಒತ್ತಡ ಮನಸಿನಲ್ಲಿ ಹೆಚ್ಚಾದ್ದರಿಂದ ಬರೆದಿದ್ದೇನೆ.

ಈ ದೇಶದ ರಾಜಕಾರಣದಲ್ಲಿ ಗಾಂಧೀತತ್ವಗಳ ಅನುಷ್ಠಾನ ಅಗತ್ಯವೆಂಬುದೇ ಈ ಕಾದಂಬರಿಯ ಮುಖ್ಯಭಾವ. ಪ್ರಜಾಪ್ರಭುತ್ವದ ಹಿರಿಮೆಯನ್ನೂ ಸಮಾಜವಾದದ ಅವಶ್ಯಕತೆಯನ್ನೂ, ಕಾದಂಬರಿಯಲ್ಲಿ ಪ್ರಸ್ತಾಪಿಸಲಾಗಿದೆ. ಹಳೆಯ ಕಾಂಗ್ರೆಸ್ ಕೆಲಸಗಾರನಾಗಿ ಕಾಂಗ್ರೆಸ್ಸಿನ ಧ್ಯೇಯಧೋರಣೆಗಳನ್ನೂ, ಸಾಧನೆಗಳನ್ನೂ ಯಥೇಚ್ಛವಾಗಿ ಹೊಗಳಿದ್ದೇನೆ. ಅಷ್ಟೇ ಯಥೇಚ್ಛವಾಗಿ ಅಲ್ಲಲ್ಲಿ ಕಾಂಗ್ರೆಸ್ಸಿಗೆ ಸೇರಿಕೊಂಡಿರುವ ದುಷ್ಟ ಶಕ್ತಿಗಳನ್ನು ಖಂಡಿಸಿದ್ದೇನೆ. ರಾಜಕಾರಣಕ್ಕೆ ಸಂಬಂಧಪಟ್ಟ ವಿಷಯಗಳನ್ನು, ಇಂದು ರಾಜಕಾರಣದಲ್ಲಿರುವ ಯಾರನ್ನು ಕುರಿತು ಬರೆದಿರುವುದಿಲ್ಲ, ಕಾದಂಬರಿಯಲ್ಲಿ ಬರುವ ವ್ಯಕ್ತಿಗಳು ಕೇವಲ ಕಲ್ಪನಾವ್ಯಕ್ತಿಗಳು.

ಕೇವಲ ನಾಲ್ಕು ತಿಂಗಳೊಳಗಾಗಿ ನನ್ನ ಕಾದಂಬರಿಯ ಮೊದಲನೆಯ ಮುದ್ರಣದ ಪ್ರತಿಗಳು ಖರ್ಚಾಗಿರುವುದು ಹೆಮ್ಮೆಯ ವಿಷಯ. ಕಾದಂಬರಿಯ ವಿಚಾರದಲ್ಲಿ ಮೆಚ್ಚುಗೆಯನ್ನು ವ್ಯಕ್ತಪಡಿಸಿ ನನಗೆ ಪ್ರೋತ್ಸಾಹ ನೀಡಿದ ಓದುಗರಿಗೂ, ಸಾಹಿತಿಗಳಿಗೂ ಮತ್ತು ಪತ್ರಿಕೆಗಳಿಗೂ ನಾನು ಋಣಿಯಾಗಿದ್ದೇನೆ.

ಕಾದಂಬರಿಯ ಪ್ರತಿಗಳನ್ನು ರಾಜ್ಯದ ಮೂಲೆ ಮೂಲೆಗಳಿಗೆ ಮುಟ್ಟಿಸಲು ನನಗೆ ಸಹಾಯಕರಾಗಿ, ಬಹಳ ಶ್ರದ್ಧೆ, ಶ್ರಮ ಮತ್ತು ಉತ್ಸಾಹಗಳಿಂದ ಮಾರಾಟ ಮಾಡಿ,

ಓದುಗರ ಅಭಿರುಚಿ ಮತ್ತು ಕುತೂಹಲಗಳನ್ನು ಕೆರಳಿಸಿ, ಆ ಭಯಂಕರ ಮಳೆಗಾಲದಲ್ಲೂ ಮತ್ತು ಸುಡುಬಿಸಿಲಿನಲ್ಲೂ ಎಷ್ಟು ತೊಂದರೆ ಕೊಟ್ಟರೂ ತಲೆಯೊಗೆಯದ, ನಗು ಮುಖದ ನನ್ನ ಪ್ರಿಯ ತರುಣ ಮಿತ್ರರಾದ ಶ್ರೀ ಎಚ್. ಪಿ. ಮೂಡ್ಲಪ್ಪ, ಬಿ.ಎ., ಅವರಿಗೆ ನನ್ನ ಧನ್ಯವಾದಗಳು.

ಎರಡನೇ ಮುದ್ರಣದ ಪ್ರತಿಗಳನ್ನು ಮುದ್ರಿಸಿ ಕೊಟ್ಟಿರುವ ನೃಪತುಂಗ ಮುದ್ರಣಾಲಯದವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

**–ಕಡಿದಾಳ್ ಮಂಜಪ್ಪ**

# ಮುನ್ನುಡಿ

ಶ್ರೀಮಾನ್ ಕಡಿದಾಳ್ ಮಂಜಪ್ಪನವರ ಹೆಸರನ್ನು ಕೇಳದವರು ಕರ್ನಾಟಕದಲ್ಲಾರು? ಅವರ ಸಾಹಿತ್ಯ ಪ್ರೇಮ, ಸಾಮಾಜಿಕ ಸೇವಾಸಕ್ತಿ ಹಳೆಯ ಮಾತು. ಅವರು ಸಾಹಿತಿಗಳಾಗಿ ಪ್ರಥಮ ದರ್ಶನಕ್ಕೇ ಸುಂದರವಾದ ಕಾದಂಬರಿಯನ್ನು ಇತ್ತಿರುವುದು ಅಭೂತಪೂರ್ವವಾದ ಕೌತುಕದ ಮಾತು. ರಾಜಕೀಯದ ವಿರಾಮಕಾಲದಲ್ಲಿ ಅವರ ಸುಪ್ತ ಸಂಸ್ಕಾರಗಳು ಅವರನ್ನು ಕೃತಿರಚನೆಗೆ ಪ್ರಚೋದಿಸಿವೆ– ಇದೂ ಶುಭವೇ.

'ಪಂಜರವಳ್ಳಿಯ ಪಂಜು' ಮೂರು ತಲೆಮಾರಿನ ಕತೆ. ಗಿರಿಯಪ್ಪ ಗೌಡರು, ಅವರ ಮಗ ಸಿದ್ದಣ್ಣ, ಅವನ ಮಗ ಮೋಹನ – ಇವರೊಡನೆ ಮೋಹನನ ತಾಯಿ ಚನ್ನಮ್ಮ ಆಕೆಯ ಅತ್ತೆ ಈರಮ್ಮ ಇವರ ಜೀವನದ–ಸಫಲ ಜೀವನದ ಸಂಘರ್ಷಣೆಯ ಕಥೆ! ಸಂಘರ್ಷಣೆಯ ಕಾರಣವು ಸುತ್ತಲಿನ ಸಮಾಜದ ತದ್ವಿರೋಧಿ ಶಕ್ತಿಗಳು, ಇದು ಮಲೆನಾಡಿನ ಏಳುಬೀಳಿನ ಚರಿತ್ರೆಯ ದರ್ಶನವನ್ನೂ ಮಾಡಿಸುವುದು.

ಭೂಮಾಲಿಕ ಗಿರಿಯಪ್ಪಗೌಡರು ಗೇಣಿದಾರರ ಬಾಳಿಗೆ ಇಳಿದರೂ, ತನ್ನ ಮಗ ಪುಟ್ಟನಿಗಾಗಿ ಹುಲಿಯ ಬೇಟೆಯಲ್ಲಿ ಆತ್ಮಾರ್ಪಣಮಾಡಿದ್ದು ಗೌಡರ ಸಾತ್ತ್ವಿಕದ ಕೆಚ್ಚನ್ನು ಎತ್ತಿ ತೋರಿಸುವುದು. ಅವರ ಮಗ ಸಿದ್ದಣ್ಣನು ಗೇಣಿದಾರರಲ್ಲಿ ಗೌರವವಂತನಾಗಿ ತಲೆಯೆತ್ತಲಿರುವಾಗ ಅವನ ಸತ್ತ್ವ ಪರೀಕ್ಷೆಯಲ್ಲಿಯೇ ಅವನಿಗೆ ಸಾವು ಬರುವುದು. ಮಣ್ಣಿನ ಮಗ ಕಣ್ಮರೆಗೆ ಮಣ್ಣು ಪಾಲಾದ ಕತೆ ರೊಚ್ಚುಂಟುಮಾಡುವುದು. ಆದರೆ ಸಾವಿನ ಕಾಲದಲ್ಲಿ ದೈವವಾಣಿ ಅವನ ಕಿವಿಗೆ ಬಿದ್ದು ಜೀವನಕ್ಕೆ ಸಾರ್ಥಕತೆಯನ್ನು ತಂದಿದೆ. ಗಿರಿಯಪ್ಪ ಗೌಡರ ಕತೆ ಮೊದಲ ಮೂವತ್ತನಾಲ್ಕು ಪುಟದಲ್ಲಿ ಮುಗಿದು, ಸಿದ್ದಣ್ಣನ ಕತೆಯು ಎಂಬತ್ತೈದನೆ ಪುಟದಲ್ಲಿ ಕೊನೆಗಂಡಿದೆ. ಅರೆ ಹುಚ್ಚಿ ಈರಮ್ಮ, ಚನ್ನಮ್ಮ, ಮೋಹನ (ಗಿಡ್ಡಣ್ಣ– ಸಿದ್ದಣ್ಣನ ಮಗ) ಇವರ ಕತೆ ಮುಂದೆ ಒಂದುವರೆ ನೂರು ಪುಟಗಳನ್ನು ವ್ಯಾಪಿಸಿದೆ.

ಗಿರಿಯಪ್ಪಗೌಡರು ದಾಯಾದಿತನಕ್ಕೆ ಬಲಿ, ಸಿದ್ದಣ್ಣ ಸಾಮಾಜಿಕ ರಾಜಕೀಯಕ್ಕೆ ಬಲಿಯಾದ; ಮೋಹನ ರಾಜಕೀಯದ ತಾಮಸಕ್ಕೆ ಬಲಿ ತೆತ್ತ. ಈ ಕತೆಯಲ್ಲಿ ಅಂಥ ಯಾವ ಅಸ್ವಾಭಾವಿಕತೆಯೂ ಇಲ್ಲ; ಇದು ನಿಜವಾಗಿರಬಹುದಾದ ಕಾಲ್ಪನಿಕ ಕತೆ–

ಕಾದಂಬರಿ. ಮಲೆನಾಡಿನ ಗೌಡರ ದಾಯಾದಿ ಮಾತ್ಸರ್ಯ; ಶ್ರೀಮಂತರು ಹೆಚ್ಚು ಶ್ರೀಮಂತರಾಗುತ್ತ ಕಠಿಣ ಹೃದಯರಾಗುವುದೂ; ಬಡವರು ಸಾಯಲಾರದೆ ಬದುಕಲಾರದೆ ಒದ್ದಾಡುವುದೂ; ಮಧ್ಯಮರು ಪುಢಾರಿತನದ ಯಜ್ಞದಲ್ಲಿ ಯಾರನ್ನೋ ದೂಗಿಸಿ ಕಪಟ ಸಾಕ್ಷಿತ್ತ್ವದ ತಾಟಸ್ಥ್ಯದಿಂದ ಅವರು ಮೈಮರೆಸಿಕೊಳ್ಳುವುದು–ಕರ್ಣಾಟಕದಲ್ಲೇ ಏಕೆ? ಸುತ್ತಲಿನ ಆಂಧ್ರ, ಮಹಾರಾಷ್ಟ್ರ, ದ್ರಾವಿಡ, ಕೇರಳ ರಾಜ್ಯಗಳಲ್ಲಿಯೂ ವಾಡಿಕೆಯದೇ ಆಗಿದೆ. ಇದು ಶ್ರೀಮಂತಿಕೆ–ದಾರಿದ್ರ್ಯಗಳ ಕಚ್ಚಾಟವಲ್ಲ. ಇದು ಮಾನವೀಯ ಸಾತ್ತ್ವಿಕತೆಗೂ, ಅದರ ತಾಮಸಿಕ ರಾಜಕೀಯತೆಗೂ ಪರಸ್ಪರ ಸಂಹಾರದಲ್ಲಿ ತೊಡಗಿಸಿರುವ ಹುಚ್ಚಾಟ! ಇಂಥ ಒಂದು ಕಾದಂಬರಿಯನ್ನೇಕೆ, ಹತ್ತುನೂರು ಬರೆಯುವಷ್ಟು ವಸ್ತುವಿದೆ. ಈ ದೇಶದಲ್ಲಿ ಅಧಿಕಾರಲಾಲಸೆಯ ಮಲ್ಲಾಮಲ್ಲಿಯಲ್ಲಿ ಶಿಷ್ಟರಾರು? ದುಷ್ಟರಾರು? ಪ್ರಜಾ ಸಾಮಾನ್ಯಕ್ಕೆ ಈ ವಿವೇಕ ಬರುವುದೆಂದು ? ರಾಮ ರಾವಣರ ಕತೆ, ಕೌರವ–ಪಾಂಡವರ ಕತೆ, ತ್ರೇತಾಯುಗ–ದ್ವಾಪರಯುಗದ ಕತೆಗಳಾದರೂ ತಾತ್ಪರ್ಯದಲ್ಲಿ ನಮ್ಮ ಕತೆಗಳೇ ಸರಿ. ದೇವರು ಇದ್ದೇ ಇದ್ದಾನೆ. ಮಾನವರ ದಾಯಾದಿ ಮಾತ್ಸರ್ಯದಲ್ಲಿ ಅವನು ಮಧ್ಯಸ್ಥನಾಗುವುದು ಕಷ್ಟ; ತಟಸ್ಥನಾಗುವುದು ಇದ್ದೂ ಇಲ್ಲದಂತೆಯೆ! ನಿರ್ದಿಷ್ಟ ಸತ್ತ್ವವು ನವನೀತದಂತೆ ಪಿಂಡಗೊಂಡು ಮೂರ್ತಿಯಾಗಿ ರಾಜಸಿಕದ 'ತಾನೇ ಈಶ್ವರ' ನೆಂಬ ಅಹಂಭಾವಕ್ಕೆ ಮದ್ದಾಗುವವರೆಗೆ ಮಲೆನಾಡಿನ ಕತೆಯೇನು? ಬಯಲ ನಾಡಿನ ವ್ಯಥೆಯೇನು? ನರಕ ಕೂಗಿಕೊಂಡಂತೆ! ಸದ್ಗುಣ–ದುರ್ಗುಣಗಳು 'ಪಾರ್ಟಿ' ಗುಣಗಳೋ ಎಂಬಂತೆ ಕುರುಡತನಕ್ಕೆ ಮಾರುಹೋಗಿವೆ. ಇಂಥ ಹಂಡ– ಬಂಡ ಸಮಾಜದಲ್ಲಿ ಈರಮ್ಮ, ಚನ್ನಮ್ಮ, ಹೂವಿ ಇವರ ಆರ್ತನಾದವು ವ್ಯರ್ಥವಲ್ಲದಿದ್ದರೂ, ಇಷ್ಟ ಫಲವು ತಲೆದೋರಬೇಕಾದರೆ ಇಷ್ಟೇ ತಪಸ್ಸು ಸಾಲದೇನೋ ಎಂದು ಭಾಸವಾಗುವುದು. ಕಾದಂಬರಿಕಾರರು ಇಂದಿನ ರಾಜಕೀಯದ ಕರ್ತಾರರಲ್ಲೊಬ್ಬರು ಎಂಬುದನ್ನು ಕ್ಷಣ ಮಾತ್ರ ಮರೆಯಬೇಕು ಮಾತ್ರ. ನಿಜವಾದ ಮಜ್ಜಿಗೆ ಕಡೆದರೆ ಬೆಣ್ಣೆ ಬಂದೀತು; ಸುಣ್ಣದ ನೀರನ್ನು ಕಡೆಯುವುದು ಕಣ್ಣಿಗೆ ಹಿತವಲ್ಲ. ಕರ್ಣಾಟಕ ಸಮಾಜವು ಸಾತ್ತ್ವಿಕಾವಲಂಬನದ ಏಕಸಮಾಜವಾಗಲು ತುಂಬಾ ಕಾಲಬೇಕು, ವಿವೇಕ ಬೇಕು, ಶ್ರಮಬೇಕು, ಶ್ರದ್ಧೆಯ ವೀರ್ಯಬೇಕು, ಸಾವಧಾನವನ್ನು ಕಳೆದುಕೊಳ್ಳದ ಪ್ರಜ್ಞೆ ಬೇಕು, ಇಂದಿನ ಸಾಮಾಜಿಕ ಸಂತೆಯಲ್ಲಿ ಇವೇ ದುರ್ಲಭವಾಗಿವೆ. 'ಕಂಟ್ರೋಲಿ'ನ ಸಡಿಲು 'ಬ್ರೆಕ್ಕಿ'ಗೆ ಸಿಕ್ಕು ಅಪಘಾತವನ್ನು ಇದಿರಿಸಲು ಸಿದ್ಧವಾದ ಸಾಧುಪ್ರಾಣಿಗಳಂತೆ (ಸಿದ್ದಣ್ಣ– ಮೋಹನರಂತೆ) ಅವೂ ದುಡುಕುತ್ತಿವೆ, ಮಿಡುಕುತ್ತಿವೆ.

ಇಂಥ ಕಾದಂಬರಿಯು ನಮ್ಮನ್ನು ವಿಚಾರಪರರನ್ನಾಗಿ ಮಾಡಬೇಕು. ಇದರ ನೆಪದಿಂದ ವಾದಕ್ಕೆ ಹಾದಿಯಾಗಿ, ಭೇದಕ್ಕೆ ಪುಷ್ಟಿ ಬರಬಾರದು. ಸಾಮಾಜಿಕದಲ್ಲಿ ಬೇಕಾದ ವಿವೇಕವು, ನಮ್ಮ ಸಾಹಿತ್ಯ ವಿಮರ್ಶೆಯಲ್ಲಿಯೂಬೇಕು. ಕಾಂಗ್ರೆಸ್ ಪಾರ್ಟಿಯೆ ಇರಲಿ, ಯಾವುದೇ ಇರಲಿ, ಸದ್ಗುಣದ ಗುತ್ತಿಗೆ ಯಾರಿಗೂ ಇರದಂದೆ 'ಇದೆ' ಎಂದು ತಿಳಿದು ಒರೆ ಹಚ್ಚುವುದು ತಪ್ಪು. ಬ್ರಾಹ್ಮಣ, ಒಕ್ಕಲಿಗ, ಲಿಂಗವಂತ, ಹರಿಜನ ಎಂಬವು

ಸದ್ಗುಣ ವಾಚಕಗಳೇನೂ ಅಲ್ಲ. ಇಸ್ಲಾಮ ಮತ್ತು ಕ್ರಿಶ್ಚಾನಿಟಿಯಿಂದಲೂ ಈ ಸಾತ್ವಿಕದ ಸರಕು ಬೆರಿಕೆ ಬೆರಿಕೆಯಾಗಿ ಬಂದಿದೆ. ಡೆಮಾಕ್ರಸಿ–ಕಮ್ಯೂನಿಝಂ–ಸರ್ವೋದಯಗಳು–ಸರ್ವಾಧಿಕಾರದ ಘೋಷಣಾ ಮಂತ್ರಗಳಾಗಿವೆ. ವ್ಹೋಟಿನ ಮಾಲೀಕನಾದ ಶ್ರೀಸಾಮಾನ್ಯನ ಹೃದಯ ದಾರಿದ್ರ್ಯ, ಕರ್ತವ್ಯ ದಾರಿದ್ರ್ಯ, ಬುದ್ಧಿ ದಾರಿದ್ರ್ಯಗಳು ಕರುಣೆಯ ಹಾದಿಯನ್ನು ಕಾಯುತ್ತ ಅನಿರ್ವಾಹದ ಬದುಕಿಗೆ ಆಳಾಗಿರುವವರೆಗೆ 'ಕಾದಂಬರಿ'ಗಳು ಏನು ಕೆಲಸ ಮಾಡಿಯಾವು? ಧಾರ್ಮಿಕ ಗ್ರಂಥ, ದಾಸರ ಹಾಡು, ಶರಣರ ವಚನ, ರಾಷ್ಟ್ರಿಕರ ವಿವೇಕ ಬೋಧೆ ಎಲ್ಲಾ ಒಂದೆ ಹಳ್ಳದ ಹಾದಿ ಹಿಡಿದಿವೆ. ಇದು ನಿರಾಶಾವಾದವಲ್ಲ! ಜೀವದ ಘಾಯ ಮಾಯಿಸುವ ಮಲಮು ಪಟ್ಟಿಯ ಕಾರ್ಯವನ್ನು ಮರುಳು ಆಶಾವಾದವು ಮಾಡಲರಿಯದು. ಈ ಕಾದಂಬರಿಯ ಚಿಕ್ಕ ಪಾತ್ರವಾದ ನಿಂಗಮ್ಮ, ಹೂವಿಗೆ ಇರುವ ವಿವೇಕವು ಬಹಳ ಜನಕ್ಕಿಲ್ಲ. 'ವರ' ಯಾವುದು? 'ಹೀನ' ಯಾವುದು? ಎಂದು ಅಭಿರುಚಿಯಿಂದರಿತು, 'ಹೀನ'ಕ್ಕೆ ಬಾಗಬಾರದು–'ವರ'ಕ್ಕೆ ಅಧೀನವಾಗಬೇಕು ಎಂಬ ದೃಷ್ಟಿ ಇಂದು ಸಾಮಾನ್ಯರಲ್ಲಿ ಸ್ಥಾಯಿಯಾಗಿಲ್ಲ.

"ಸತ್ಯ ಧರ್ಮಗಳಿಗೆ ಚ್ಯುತಿ ಬಂದಾಗ, ಸತ್ಯದ ಹೆಸರಿನಲ್ಲಿ ಅಸತ್ಯ ನಡೆಯುವಾಗ, ಧರ್ಮದ ಹೆಸರಿನಲ್ಲಿ ಅಧರ್ಮ ನಡೆಯುವಾಗ ಸುಮ್ಮನಿರುವುದು ಹೇಡಿತನ." ಈಗ ನಮ್ಮಲ್ಲಿ ಹೇಡಿತನ ಹೆಚ್ಚಾಗಿದೆ; ಶೌರ್ಯ ಬಾಯಿ ಬಡಾಯಿ. ಅನುಕೂಲಿಸಿದವರ ಅಧಿಕಾರ ಚಲಾವಣೆಮಾಡಿ, 'ಆದದ್ದಾಗಲಿ' ಎಂಬ ಸೂತ್ರವೇ ನಮ್ಮನ್ನಾಡಿಸುತ್ತಿರುವಾಗ ಶ್ರೀ ಮಂಜಪ್ಪನವರು 'ಪಂಜು' ಎತ್ತಿ ಹಿಡಿದು, 'ದೀನದಲಿತರಿಗಾಗಿ ಮರುಗುವವರು ಶ್ರೇಷ್ಠ ಜೀವಿಗಳು ದೀನದಲಿತರಿಗಾಗಿ ದುಡಿಯುವವರು ಅತಿ ಶ್ರೇಷ್ಠ ಜೀವಿಗಳು. ಯೋಗಿಗಳಿಗೆ ಲಭಿಸುವ ಫಲ ಅವರಿಗೆ ಪ್ರಾಪ್ತಿಯಾಗುತ್ತದೆ.' ಎಂಬ ಸಾವಿರದ ಕಾಲದ ಸತ್ಯವನ್ನು ಮತ್ತೂ ಎತ್ತಿ, ಒತ್ತಿ ಹೇಳಿದುದು ಸದ್ಯ ಕಾಲಕ್ಕೆ ಅವಶ್ಯ. ಆದರೇನು? ಚನ್ನಮ್ಮ–ಸಿದ್ದಣ್ಣ ಇದ್ದಲ್ಲಿ ಮೋಹನ ಹೋದ! ಇವರು ಗಿರಿಯಪ್ಪಗೌಡ, ಪುಟ್ಟ ಇದ್ದಲ್ಲಿಗೆ ಹೋಗಿರಬೇಕು! ಇಹದಲ್ಲಿ ಇಂಥವರಿಗೆ ಸ್ಥಳವಿದೆಯೇ? ಅಂತೆಯೇ 'ಸತ್ಯಕ್ಕೆ ಸೋಲಾಯಿತೆಂದು ಪವಿತ್ರಪುರ ತಾಲ್ಲೂಕಿನ ಜನರು ನಿಟ್ಟುಸಿರು ಬಿಟ್ಟರು'. ನಾನೂ ನಿಟ್ಟುಸಿರು ಬಿಡುತ್ತೇನೆ. ತತಃ ಕಿಂ?

ಹೂವಿ, ಸೂರ್ಯನಾರಾಯಣಯರು, ಚನ್ನಮ್ಮ, ನಿಂಗಮ್ಮ ಈ ಸಾತ್ವಿಕ ಪಾತ್ರಗಳಂತೆ ಅವರ ವಿರೋಧಿ ಪಾತ್ರಗಳು ಅಚ್ಚುಕಟ್ಟಾಗಿಲ್ಲ. ದುರ್ಬುದ್ಧಿಗೆ ಅಚ್ಚುಕಟ್ಟು ಏನು ಬಂತು? ಮೋಹನನ ಸತ್ತ್ವವು ವಂಶ ಪರಂಪರೆಯ ಅಖಂಡತೆಯಿಂದ ಬಂದುದು. ಸತ್ಯದ ಜಯವು ತಾತ್ಪೂರ್ತಿಕ ಸ್ಫೂರ್ತಿಯದಲ್ಲ. ಅದು ಎಂದಿಗೂ ನಿಲ್ಲತಕ್ಕದ್ದು. ಇಂಥ ವ್ಯಕ್ತಿಗಳು, ಇಂಥ ಮನೆತನಗಳು ಹೆಚ್ಚು ಹೆಚ್ಚು ಆದಂತೆ ಸಮಾಜದ ಬುಡಕಟ್ಟು ಭದ್ರವಾಗುತ್ತದೆ. ದೈವಭಕ್ತಿಯ ಪರಿಣತಿ ಮಾತ್ರ ವ್ಯಕ್ತಿ ವ್ಯಕ್ತಿಗೂ ಬೇಕು. ಅದು ದಾನವಾಗಿ ಬರದು.

ಶ್ರೀಮಾನ್ ಕಡಿದಾಳ್ ಮಂಜಪ್ಪನವರ ಈ ಸಾತ್ತ್ವಿಕ ದೃಷ್ಟಿಗೆ ಮಲೆನಾಡಿನಂತೆ ಎಲ್ಲ ಕಡೆಗೂ ಬೆಲೆ ಬಂದು, ಉತ್ತಮ ಸಾಹಿತ್ಯವು ಉತ್ತಮ ಜೀವನಕ್ಕೆ ಪೋಷಕವಾಗುವಂತಾಗಲಿ. ಛಲದ, ಛಂಡಿತನದ ಪೌರುಷವು ಪ್ರತಿಷ್ಠೆಯನ್ನು ಪಡೆಯದೆ ಹೋಗಲಿ ಎಂಬ ಧ್ವನಿಯು ಈ 'ಪಂಜೆ'ನ ಪಾಂಚಜನ್ಯದಿಂದ ಮೊಳಗಲಿ. ಇಂಥ ಸಾಹಿತ್ಯ, ಕೃತಿ ಮತ್ತೆ ಅವರಿಂದ ಬರಲಿ.

**–ದ.ರಾ. ಬೇಂದ್ರೆ**

# ಪರಿವಿಡಿ

# ೧. ಒಂದು ಶತಮಾನದ ಹಿಂದಿನ ಮಾತು

ಸುಮಾರು ಒಂದು ಶತಮಾನದ ಹಿಂದಿನ ಮಾತು. ಸಹ್ಯಾದ್ರಿಯ ಸರಹದ್ದಿನಲ್ಲಿ, ಮಲೆನಾಡಿನ ಮೂಲೆಯಲ್ಲಿದ್ದ ಹಳ್ಳಿಯೊಂದರ ಮಾತು. ಆ ಹಳ್ಳಿಯ ಸುತ್ತಮುತ್ತಲ ಪ್ರದೇಶ ಸಮಸ್ತ ವಿಧಗಳಲ್ಲಿಯೂ ಸುಂದರವಾಗಿತ್ತು. ನಿಸರ್ಗದ ರಮಣೀಯತೆ ಕಣ್ಮನಗಳನ್ನು ತಣಿಸುವಂತಿತ್ತು. ವೇದಾಂತದ ಬ್ರಹ್ಮನು ವಿವಿಧ ರೂಪಗಳನ್ನು ಧರಿಸಿ ತನ್ನ ಲೀಲೆಯಲ್ಲಿ ಮಧ್ಯೆ ತಲ್ಲೀನನಾಗಿರುವಂತೆ ಭಾಸವಾಗುತ್ತಿತ್ತು. ದಟ್ಟವಾದ ಕಾಡುಗಳು ಕಾಡುಗಳ ಅಲ್ಲೊಂದು ಇಲ್ಲೊಂದು ಗುಡ್ಡ, ಗುಡ್ಡಗಳಿಂದ ಕೆಳಗಿಳಿದು ಬರುತ್ತಿರುವ ಹಳ್ಳಗಳು, ಗುಡ್ಡಗಳ ತಪ್ಪಲಿಲಲ್ಲಿ ಅಲ್ಲೊಂದು ಇಲ್ಲೊಂದು ಊರು, ಊರುಗಳ ಪಕ್ಕದಲ್ಲಿ ಗದ್ದೆಯ ಕೋಗುಗಳೂ, ಅಡಕೆಯ ತೋಟಗಳೂ ಆ ಪ್ರದೇಶದ ಸಾಮಾನ್ಯ ಚಿತ್ರವಾಗಿತ್ತು. ಅರಣ್ಯದ ಸೌಮ್ಯಭಯಂಕರ ದೃಶ್ಯವಂತೂ ವಿಸ್ಮಯದ ಜೊತೆಗೆ ಭಯವನ್ನು ಹುಟ್ಟಿಸುವಂತಿತ್ತು. ಕಾಡು ಕೆಲವು ಕಡೆಗಳಲ್ಲಿ ಸೂರ್ಯರಶ್ಮಿಯ ಪ್ರವೇಶಕ್ಕೆ ಅವಕಾಶವಿಲ್ಲದಷ್ಟು ದಟ್ಟವಾಗಿದ್ದರೆ ಕೆಲವು ಕಡೆಗಳಲ್ಲಿ ಅಲ್ಲೊಂದು ಇಲ್ಲೊಂದು ಕುರುಚಲು ಗಿಡ ಪೊದೆಗಳಿರುವ ಪ್ರದೇಶವಾಗಿತ್ತು. ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ, ದೂಪ, ಜಂಭೆ, ಭೋಗಿ, ಮತ್ತಿ, ಚುರ್ಚೆ, ಬೆಳ್ಳಾಲೆ, ಮುದ್ದಾಲೆ, ನೇರಲು, ಮಾವು, ಕಲ್ಲುಗರಕೆ, ಗಂಧಗರಕೆ ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗುರಗಿ, ಬಿದಿರು, ಕೆಂಜಗಿ, ವಾಟೆ, ಕ್ಯಾದಿಗೆ, ಮುಂಡುಗ, ಬೆತ್ತ, ಜಿಂಜರಗಿ, ಮುಕ್ಕಡಗ ಮುಂತಾದ ಗಿಡಬಳ್ಳಿ ಪೊದೆಗಳಿದ್ದುವು.

ಹೆಬ್ಬಾವುಗಳು ಮರದ ತುಂಡುಗಳಂತೆ ಸದ್ದಿಲ್ಲದೆ ಬಿದ್ದಿದ್ದರೆ ಕಡ ಮತ್ತು ಸಾಗರದ ಹಿಂಡುಗಳೂ, ದೊಡ್ಡುಗಳ ಮಂದೆಗಳೂ, ಸೀಳು ನಾಯಿಗಳ ತಂಡಗಳೂ ಅಲ್ಲಲ್ಲಿ ಅವಿಶ್ರಾಂತವಾಗಿ ಸುತ್ತಾಡುತ್ತಿದ್ದುವು. ನವಿಲುಗಳು ಬಿಸಿಲಿನಲ್ಲಿ ಗರಿಗೆದರಿ ಕುಣಿಯುತ್ತಿದ್ದರೆ ಕಾಳಿಂಗಸರ್ಪಗಳು ತಮ್ಮ ಬಾಲಗಳ ಮೇಲೆ ನಿಂತು ಮನುಷ್ಯರಂತೆ ಸಿಳ್ಳು ಹಾಕುತ್ತಿದ್ದುವು. ಕಾಡು ಕುರಿ, ಕಾಡುಹಂದಿ, ಮುಳ್ಳುಹಂದಿ, ಚಿಪ್ಪುಹಂದಿ, ಕಬ್ಬೆಕ್ಕು, ಹಾರಬೆಕ್ಕು, ಪುಣಗಿನ ಬೆಕ್ಕು, ಬರಕ, ಮೊಲ, ಮುಸಿಯ, ಹುಲಿ, ಕರಡಿ, ಕುರ್ಕ ಮುಂತಾದ ಇತರ ಪ್ರಾಣಿವರ್ಗಕ್ಕೆ ಕಾಡಿನಲ್ಲಿ ಮಿತಿಯೇ ಇರಲಿಲ್ಲ. ನಾನಾ ಜಾತಿಯ ನಾನಾ ಬಣ್ಣದ ಹಕ್ಕಿಗಳು ತಮ್ಮ ಕಲರವದಿಂದ ಅರಣ್ಯದ ಸೌಂದರ್ಯಕ್ಕೆ ಸ್ವರವನ್ನು ನೀಡಿದ್ದುವು.

ಇಂತಹ ರಮಣೀಯ ಪ್ರದೇಶದಲ್ಲಿದ್ದ ಆ ಹಳ್ಳಿಯ ಹೆಸರು ಸ್ವಲ್ಪ ವಿಚಿತ್ರವಾಗಿತ್ತು. ಅದನ್ನು ಪಂಜರವಳ್ಳಿ ಎಂದು ಕರೆಯುತ್ತಿದ್ದರು. ಪಂಜರವಳ್ಳಿಯೆಂದರೆ ಕೆಲವರಿಗೆ ಮೈ ನವಿರೇಳಬಹುದು. ಏಕೆಂದರೆ ಅದೊಂದು ಜಾತಿಯ ದೆವ್ವದ ಹೆಸರು. ಅಂದಿನ

ಮಲೆನಾಡಿನಲ್ಲಿ ಭೂತ, ಪ್ರೇತ, ಪಿಶಾಚಿ, ಪಂಜರವಳ್ಳಿ, ರಣ, ಮಾರಿ, ಚೌಡಿ, ಜಕಣಿ, ಜಟಗ, ಬ್ರಹ್ಮ, ಕಲ್ಲುಕುಟಿಗ ಮುಂತಾದ ಹಲವು ಹೆಸರಿನ ಹಲವು ಜಾತಿಯ ದೆವ್ವಗಳಿದ್ದುವು. ಮನುಷ್ಯರ ಅಳಿವು ಅಥವಾ ಉಳಿವು ಆ ದೆವ್ವಗಳ ಕೈಯೊಳಗಿತ್ತೆಂದು ಅಂದಿನ ಜನರ ಸಿದ್ಧಾಂತವಾಗಿತ್ತು. ಕೆಲವು ದೆವ್ವಗಳು ದಯಾಮಯವಾಗಿದ್ದರೆ ಕೆಲವು ಭಯಾನಕವಾಗಿದ್ದವು. ಕೆಲವು ಉಪಕಾರ ಮಾಡತಕ್ಕ ಶಾಂತ ಮೂರ್ತಿಗಳಾಗಿದ್ದರೆ ಕೆಲವು ಸರ್ವನಾಶ ಮಾಡತಕ್ಕ ರೌದ್ರಾವತಾರಿಗಳಾಗಿದ್ದುವು. ಕೆಲವು ಹಣ್ಣು ಹಂಪಲುಗಳಿಂದ ತೃಪ್ತಿಪಡುತ್ತಿದ್ದರೆ ಕೆಲವಕ್ಕೆ ಕುರಿ, ಕೋಳಿ, ಕೋಣಗಳು ಬೇಕಾಗಿದ್ದುವು. ಕೆಲವು ದೆವ್ವಗಳು ತಮಗೆ ಪ್ರಿಯವಾದವರ ಮೇಲೆ ವಾರಕ್ಕೊಮ್ಮೆ ಅಥವಾ ಎಂದಾದರೊಮ್ಮೆ ಬಂದು ಜನರ ಕಷ್ಟ ಸುಖಗಳನ್ನು ವಿಚಾರಿಸಿ, ಕಷ್ಟನಿವಾರಣೆಗೆ ಪರಿಹಾರವನ್ನು ನೀಡುತ್ತಿದ್ದುವು. ಹುಡುಗನಾಗಿದ್ದಾಗ ನಾನು ಕೇಳಿದ್ದ ದೆವ್ವಗಳ ಕತೆಗಳನ್ನು ರಾತ್ರಿಯ ಹೊತ್ತು ಸ್ಮರಿಸಿಕೊಂಡರೆ ಇಂದೂ ಮೈ ಜುಮ್ಮೆನ್ನುವುದು. ದಾರಿಯಲ್ಲಿ ಹೋಗುತ್ತಿದ್ದವನೊಬ್ಬನು ರಕ್ತಕಾರಿ ಸತ್ತಾಗ ರಣಹೊಡೆದು ಸತ್ತನೆನ್ನುತ್ತಿದ್ದರು. ಮಕ್ಕಳಿಗೆ ಜ್ವರದ ತಾಪದಿಂದ ಪ್ರಜ್ಞೆ ತಪ್ಪಿದರೆ ಪ್ರೇತದ ಕಾಟವೆನ್ನುತ್ತಿದ್ದರು. ಕಲ್ಲುಕುಟಿಕನೆಂಬ ಭೂತದ ಕತೆಯಂತೂ ರೋಮಾಂಚನವನ್ನುಂಟುಮಾಡುತ್ತಿತ್ತು. ಕಲ್ಲುಕುಟಿಕನಿಗೆ ಯಾರ ಮೇಲಾದರೂ ಕೋಪ ಬಂದಾಗ ಅನಾಹುತವನ್ನೇ ಮಾಡುತ್ತಿತ್ತು. ಅನ್ನದ ಮಡಕೆಯಲ್ಲಿ ಅನ್ನದ ಬದಲು ಅಮೇಧ್ಯವನ್ನು ಹಾಕುವುದೂ, ಪೆಟ್ಟಿಗೆಯನ್ನು ಸುಡದೆ ಪೆಟ್ಟಿಗೆಯೊಳಗಿದ್ದ ಬಟ್ಟೆಬರೆಗಳನ್ನೂ ಕಾಗದ ಪತ್ರಗಳನ್ನೂ ಭಸ್ಮ ಮಾಡುವುದೂ, ಇದ್ದಕ್ಕಿದ್ದಂತೆ ಮರದ ಮೇಲಾಗಲೀ ಮನೆಯ ಮೇಲಾಗಲೀ ಬೆಂಕಿ ಕಾಣುವಂತೆ ಮಾಡುವುದೂ, ರಾತ್ರಿ ಮನೆಯಲ್ಲಿ ಮಲಗಿದ್ದವರನ್ನು ಎತ್ತಿಕೊಂಡು ಹೋಗಿ ಕಾಡಿನಲ್ಲೋ ದಾರಿಯಲ್ಲೋ ಮಲಗಿಸುವುದೂ ಕಲ್ಲುಕುಟಿಗನ ಕೆಲವು ಕುಚೇಷ್ಟೆಗಳಾಗಿದ್ದವು. ಕಲ್ಲುಕುಟಿಗನ ಪ್ರತಾಪವನ್ನು ಪ್ರತ್ಯಕ್ಷ ನೋಡಿದವರೊಬ್ಬರು ನನಗೆ ಹೇಳಿದ ರೋಮಾಂಚಕ ವಿಷಯಗಳನ್ನು ಒಮ್ಮೊಮ್ಮೆ ನಂಬಬೇಕೆನಿಸುತ್ತದೆ. ಆಧುನಿಕ ನಾಗರಿಕತೆಯ ಬೆಳಕು ಮಲೆನಾಡಿನ ಮೇಲಿ ಬಿದ್ದ ಪರಿಣಾಮವಾಗಿ ಈಚೆಗೆ ದೆವ್ವಗಳ ಕಾಟವೂ ಕಡಿಮೆಯಾಗಿದೆ; ಅವುಗಳಲ್ಲಿ ನಂಬಿಕೆಯೂ ಕಡಿಮೆಯಾಗಿದೆ. ಆದರೂ ಅಲ್ಲಲ್ಲಿ ಮನುಷ್ಯರ ಮೈಮೇಲೆ ದರ್ಶನ ಬಂದು ಮಾತನಾಡುವ ದೆವ್ವಗಳೂ, ಮಾತನಾಡದೆ ಕಿರುಕುಳ ಕೊಡುವ ದೆವ್ವಗಳೂ ಈಗಲೂ ಮಲೆನಾಡಿನಲ್ಲಿವೆ ಎಂಬುದನ್ನು ಓದುಗರಿಗೆ ಪಿಸುಮಾತಿನಲ್ಲಿ ಹೇಳಲಿಚ್ಛಿಸುತ್ತೇನೆ.

ಕೆಲವು ವರ್ಷಗಳ ಹಿಂದೆ ಚುನಾವಣೆಗೋಸ್ಕರ ನಾನು ಪಂಜರವಳ್ಳಿಗೆ ಹೋಗಿದ್ದೆ. ಆಗ ಪ್ರಾಸಂಗಿಕವಾಗಿ ಆ ಊರಿನ ವೃದ್ಧನೊಬ್ಬನೊಡನೆ ಮಾತನಾಡುತ್ತಿದಾಗ ಅವನನ್ನು ಕುರಿತು "ಯಾಕಪ್ಪಾ, ನಿಮ್ಮೂರಿಗೆ ಪಂಜರವಳ್ಳಿ ಎಂದು ಹೆಸರು ಬಂದಿದ್ದು?" ಎಂದು ಕೇಳಿದೆ. ಅದಕ್ಕೆ ಆ ಮುದುಕ ಹೀಗೆ ಹೇಳಿದ.

"ಸ್ವಾಮಿ ಅದೊಂದು ದ್ವಡ್ಕತೆ. ಹಿಂದೆ ಈ ಊರಾಗೆ ಒಂದು ಪಂಜ್ರೊಳ್ಳಿ ಭೂತ ಇತ್ತು. ಅದ್ಪಾಳವಳ್ಳಿ ಭೂತ. ವುರ್‍ಸಾವುರ್‍ಸಾ ಊರಾನೊರೆಲ್ಲಾ ಅದ್ಕೆ ವುಂದುಂದು ಕೋಳಿ

ಕೊಡ್ತಾ ಇದ್ರು. ಮುಂಗಾರ್ಮಳೆ ಹತ್ತೂ ಕಾಲ್ಕೆ ಕುರಿ ಹ್ವಡ್ದು ಹರ್ಕೆ ಮಾಡ್ತಿದ್ರು. ಕಲ್ಡ್ರ ಕಾಕ್ರು ಆಪತ್ತು ಇಪತ್ತು. ಬರದ್ವಾಗೆ ಆ ಭೂತ ನೋಡ್ಕತ್ತಿತ್ತು. ನಾ ಸಣ್ ಹುಡ್ಗಾಗಿದ್ದಾಗ ವುಂದಿನ ರಾತ್ರೆ. ಮನೇಲಿ ನಾವೆಲ್ಲಾ ಮುಲ್ಗಿದ್ದಾಗ, ಭೂತ್ರಾಯ ಮನೀಗೆ ಬಂದು ನಮ್ಮಪ್ನನ ಹೆಸರಿಡ್ದು 'ನಿಂಗಾ ನಿಂಗಾ, ಏಳ್ ಏಳ್ ನಿಮ್ಮನೀಗೆ ಕಳ್ಳ್ರು ಬಂದಾರೆ, ಬ್ಯಾಗೇಳ್', ಅಂತಾ ಕೂಗ್ತು. ಅಪ್ಪ ಗಾಬ್ರೀಲೆದ್ದು ಸಪ್ಗತ್ತಿ ಹಿಡ್ಕಂಡು ಅವ್ವನೆಬ್ಸಿ ಬಾಗ್ಲ್ ತೆಗೀತಾನೆ, ಏನ್ನೋಡ್ತೀರಿ! ಬೆಳ್ದಿಂಗ್ಳಾಗೆ ಬಿಳೀ ಬಟ್ಟೆ ಹೊದ್ಕಂಡು, ಬೆಳ್ಳೀ ಜಲ್ಲು "ಫ್ಯೆಲ್ ಫ್ಯೆಲ್" ಅಂತಾಕುಟ್ತಾ, ಭೂತ್ರಾಯ ಭೂಮಿಗೂ ಆಕಾಸ್ಗೂ ಸಮ್ನಾಗಿ ನಿಂತಿದ್ದ. ಆ ರೂಪ ನೋಡಿ, ಮನೆ ನುಗ್ಗೊಕೆ ಅಂತ ಬಂದ ಕಳ್ಳ್ರು ಏಳ್ತಾ ಬೀಳ್ತಾ ಓಡ್ದರು. ನಮ್ಮಪ್ಪ ಭೂತ್ರಾಯ್ನ ಕಾಲಿಗ್ಬಿದ್ದು 'ಕಾಪಾಡಪ್ಪಾ' ಅಂತ ಹೇಳೊದ್ರೊಳಗೆ ಭೂತ್ರಾಯ ಮಂಗ್ಳಮಾಯಾದ. ಆಗಾವ್ನಕಾಲಾನೂ ವಳ್ಳೆ ಕಾಲ ಅನ್ನಿ. ಜನ್ಗೋಳು ಧರ್ಮಾಕರ್ಮ ನೋಡಿ ನಡೀತಿದ್ರು. ಈಗೇನ್ ಹೇಳ್ತೀರಿ! ಜನ್ಗೋಳು ದೇವ್ರ ಕೈ ಬಿಟ್ಟಾರೆ; ದೇವ್ರು ಅವರ್ನ ಕೈ ಬಿಟ್ಟಾನೆ. ಓ ಅಲ್ನೋಡಿವುಂದು ಸ್ವಾಗೆ ಮನೆ ಕಾಣ್ತದಲ್ಲಾ, ಆ ಮನೆ ಯಜಮಾನ್ನ ಮೈಮ್ಯಾಲೆ ಸನಿವಾರ ಸನಿವಾರ ಪಂಜ್ರೊಳ್ಳಿ ಗಣ ಬತ್ತಿತ್ತು. ಗಣ ಕೇಳೋಕೆ ಅಂತ ಹತ್ತಿಪ್ಪತ್ತು. ಮೈಲೆ ಪಾಸಾಂತರ ಜನಾ ಬತ್ತಾ ಇತ್ತು. ಪಂಜ್ರೊಳ್ಳಿ ಗಣ ಕೇಳೋಕೆ ಅಂತ ಬಂದೋರು ಈ ಊರ್ನ ಪಂಜ್ರೊಳ್ಳಿ ಪಂಜ್ರೊಳ್ಳಿ ಅಂತ ಕರೀತಿದ್ರು. ಮದ್ಲು ಈ ಊರಿಗೆ ತುದಿಕ್ವಂಪೆ ಅಂತ ಕರೀತಿದ್ರು, ಬತ್ತಾ ಬತ್ತಾ ತುದಿಕ್ವಂಪೆ ಹೋಗಿ ಪಂಜ್ರೊಳ್ಳಾತು."

ಪಂಜರವಳ್ಳಿಯು ಪವಿತ್ರಪುರ ತಾಲ್ಲೂಕಿಗೆ ಸೇರಿದ್ದ ಗ್ರಾಮವಾಗಿತ್ತು. ಆ ಗ್ರಾಮದಲ್ಲಿ ವ್ಯವಸಾಯದ ಭೂಮಿಯೆಲ್ಲವೂ ನಾಲ್ಕೇ ಜನರ ಆಧಿಪತ್ಯಕ್ಕೊಳಗಾಗಿತ್ತು. ಅರೆವಾಸಿ ಭೂಮಿ ಪವಿತ್ರಪುರದ ಮಠಕ್ಕೂ, ಇನ್ನುಳಿದ ಭೂಮಿ ಪಟೇಲ್ ಕಾಳೇಗೌಡರಿಗೂ, ಶಾನುಭೋಗ್ ತಿರುಮಲಭಟ್ಟರಿಗೂ, ಸಾಹುಕಾರ್ ಬೆಳ್ಳೇಗೌಡರಿಗೂ ಸೇರಿದ್ದಾಗಿತ್ತು. ಇಡಿಯ ಗ್ರಾಮದಲ್ಲಿ ಮೂವರು ಖಾತೆದಾರರ ಕೈ ಹೆಂಚಿನ ಮನೆಗಳೂ, ಹದಿನೈದು ಅಥವಾ ಇಪ್ಪತ್ತು ಗೇಣಿ ಒಕ್ಕಲುಗಳ ಹುಲ್ಲು ಜೋಪಡಿಗಳೂ, ಅರೇಳು ಹೊಲೇರ ಗುಡಿಗಳೂ ಇದ್ದುವು. ಹೊಲೇರ ಗುಡಿಗಳು ಒಂದೇ ಗುಂಪಾಗಿ ಒಂದೇ ಸ್ಥಳದಲ್ಲಿದ್ದವು. ಕೈ ಹೆಂಚಿನ ಮನೆಗಳು ತಿರುಮಲ ಭಟ್ಟರಿಗೂ, ಕಾಳೇಗೌಡರಿಗೂ, ಬೆಳ್ಳೇಗೌಡರಿಗೂ ಸೇರಿದ ಮನೆಗಳಾಗಿದ್ದುವು. ಈ ಮೂವರು ಖಾತೆದಾರರೂ ತುಂಬಾ ಸ್ನೇಹದಿಂದಿದ್ದರು. ಬಡಜನರ ಶೋಷಣೆಯ ಕಾರ್ಯದಲ್ಲಿ ಅವರು ಒಬ್ಬರನ್ನೊಬ್ಬರು ಎಂದೂ ಬಿಟ್ಟು ಕೊಟ್ಟಿರಲಿಲ್ಲ.

ತಿರುಮಲ ಭಟ್ಟರು ಆ ಪ್ರದೇಶದ ಆಗರ್ಭ ಶ್ರೀಮಂತರೆಂದೆನಿಸಿಕೊಂಡಿದ್ದರು. ಅವರ ತಂದೆ ಶಾನುಭೋಗ್ ನಾಗೇಂದ್ರ ಭಟ್ಟರು, ರೈತರನ್ನು ಬಿಟ್ಟಿ ಕೆಲಸದಿಂದ ಬಿಡುಗಡೆ ಮಾಡಿಸುವ ನೆಪದಲ್ಲಿ, ತಮ್ಮ ಫಿರ್ಕಾದಲ್ಲಿ ರೈತರಿಗೆ ಸೇರಿದ್ದ ಎಲ್ಲಾ ಜಮೀನುಗಳ ಖಾತೆಯನ್ನೂ ತಮ್ಮ ಹೆಸರಿಗೆ ಮಾಡಿಸಿಕೊಂಡಿದ್ದರು. ರೈತರೆಲ್ಲರೂ ಕಾಲ ಕ್ರಮೇಣ ಅವರ ಒಕ್ಕಲುಗಳಾದರು. ತಿರುಮಲ ಭಟ್ಟರಿಗೆ ಜಮೀನಿನಿಂದ ಗೇಣಿಯ ರೂಪದಲ್ಲಿ

ಮೂರುನೂರು ಮಣ ಅಡಕೆಯೂ ಐದುನೂರು ಖಂಡಗ ಭತ್ತವೂ ಬರುತ್ತಿತ್ತು. ಶಾನುಭೋಗಿ ಕೆಲಸದಿಂದ ಪೋಟಿಗೆ ಗೀಟಿಗೆ ಎಲ್ಲಾ ಸೇರಿ ಅವರಿಗೆ ವರ್ಷಕ್ಕೆ ಎರಡು ಸಾವಿರ ರೂಪಾಯಿಗಳವರೆಗೆ ವರಮಾನವಿತ್ತು. ಅವರು ಆಗರ್ಭ ಶ್ರೀಮಂತರಾಗಿದ್ದರೂ ಶಾನುಭೋಗರಿಗೆ ಸಲ್ಲತಕ್ಕ ಮಾಮೂಲನ್ನೇನೂ ಬಿಟ್ಟಿರಲಿಲ್ಲ. ಜೊತೆಗೆ ಭಟ್ಟರು ಆ ಪ್ರದೇಶದಲ್ಲೆಲ್ಲಾ ಪತ್ರಗಳನ್ನು ಬರೆಯುವುದರಲ್ಲಿ ಗಟ್ಟಿಗರೆಂದೆನಿಸಿಕೊಂಡಿದ್ದರು. ಕ್ರಯಪತ್ರ, ದೀಡುಪತ್ರ ಮುಂತಾದವುಗಳನ್ನು ಮಾಡಲಿಚ್ಛಿಸಿದ ತಾಲ್ಲೂಕಿನ ಜನರೆಲ್ಲರೂ ಭಟ್ಟರನ್ನು ಆಶ್ರಯಿಸುತ್ತಿದ್ದರು. ಆ ಬಾಬಿನಿಂದಲೂ ಭಟ್ಟರಿಗೆ ತಕ್ಕಮಟ್ಟಿಗೆ ವರಮಾನವಿತ್ತು. ಈ ವರಮಾನಗಳ ಜೊತೆಗೆ ಲೇವಾದೇವಿ ಅಡಕೆಯ ವ್ಯಾಪಾರಗಳಿಂದ ಭಟ್ಟರಿಗೆ ಸುಮಾರು ವರ್ಷಕ್ಕೆ ಮೂರುನಾಲ್ಕು ಸಾವಿರ ರೂಪಾಯಿಗಳವರೆಗೆ ವರಮಾನವಿತ್ತು.

ಬೆಳ್ಳೇಗೌಡರೂ, ಕಾಳೇಗೌಡರೂ, ತಿರುಮಲ ಭಟ್ಟನಂತೆ ತಾವೂ ಶ್ರೀಮಂತರಾಗಬೇಕೆಂದು ಒಬ್ಬರಮೇಲೊಬ್ಬರು ಪೈಪೋಟಿ ಮಾಡುತ್ತಿದ್ದರು. ಭಟ್ಟರ ಬಳಿ ಅಪ್ಪನ ಕಾಲದಿಂದಲೂ ಕೊಳ್ಳೆ ಹೊಡೆದ ಐಶ್ವರ್ಯವಿತ್ತು. ಆದ್ದರಿಂದ ಭಟ್ಟರಿಗೆ ಹೆಚ್ಚು ಕೊಳ್ಳೆ ಹೊಡೆಯುವುದರಲ್ಲಿ ಅಷ್ಟು ಆಸಕ್ತಿಯಿರಲಿಲ್ಲ. ಗೌಡರುಗಳಿಬ್ಬರೂ ಹೊಸದಾಗಿ ಕೊಳ್ಳೆ ಹೊಡೆಯುವ ಉದ್ಯಮಕ್ಕೆ ಕೈ ಹಾಕಿದ್ದರು. ಅವರ ದಾಹಕ್ಕೆ ಮಿತಿಯೇ ಇರಲಿಲ್ಲ. ಕಾಳೇಗೌಡರಿಗೆ ಹೋಬಳಿಯ ಸ್ವತ್ತೆಲ್ಲಾ ತಮಗೇ ಸೇರಬೇಕೆಂಬ ಆಸೆ ಇದ್ದರೆ, ಬೆಳ್ಳೇಗೌಡರಿಗೆ ತಾಲ್ಲೂಕಿನ ಸ್ವತ್ತೆಲ್ಲಾ ತಮಗೇ ಸೇರಬೇಕೆಂಬ ಆಸೆಯಿತ್ತು. ಕಾಳೇಗೌಡರು ಹೇಗಾದರೂ ಮಾಡಿ ತಮ್ಮ ಅವಿಭಕ್ತ ಅಣ್ಣ ಗಿರಿಯಪ್ಪಗೌಡರನ್ನು ಮನೆಯಿಂದ ಓಡಿಸಬೇಕೆಂಬ ಪ್ರಯತ್ನದಲ್ಲಿದ್ದರು. ಗಿರಿಯಪ್ಪಗೌಡರು ಕುಟುಂಬದಲ್ಲಿ ಜ್ಯೇಷ್ಠರಾಗಿದ್ದರೂ ಕಾಳೇಗೌಡರಿಗೆ ಓದು ಬರಹ ಬರುತ್ತಿದ್ದುದರಿಂದ, ಪಟೇಲಿಯನ್ನು ಕುಟುಂಬದ ಯಜಮಾನಿಕೆಯನ್ನೂ ತಮ್ಮನಿಗೆ ಬಿಟ್ಟು ಕೊಟ್ಟಿದ್ದರು. ಕಾಳೇಗೌಡರಿಗೆ ಪಟೇಲಿ ಮತ್ತು ಯಜಮಾನಿಕೆ ಸಿಕ್ಕಿದುದು ಚೇಳಿಗೆ ಯಜಮಾನಿಕೆ ಸಿಕ್ಕಂತಾಗಿತ್ತು. ಅವರು ಮನೆಯವರನ್ನೂ ಆಗಾಗ ಕುಟುಕುತ್ತಿದ್ದರು; ಊರಿನವರನ್ನೂ ಕುಟುಕುತ್ತಿದ್ದರು. ಊರಿನ ಜನರಿಗೆ ಅವರ ದಬ್ಬಾಳಿಕೆಯನ್ನು ಸಹಿಸುವುದೇ ಕಷ್ಟವಾಗಿತ್ತು. ಊರಿನ ಜನರು ವರ್ಷಕ್ಕೆ ಒಂದು ತಿಂಗಳ ಕಾಲ ಅವರ ಮನೆಯಲ್ಲಿ ಬಿಟ್ಟಿ ಗೆಯ್ಯಬೇಕಾಗಿತ್ತು. ಅವರನ್ನು ಕಂಡರೆ ಜನರು ಹೆದರಿ ನಡುಗುತ್ತಿದ್ದರು.

ಬೆಳ್ಳೇಗೌಡರ ಕತೆ ಬಹಳ ದೊಡ್ಡದು. ಆದರೆ ಆ ಕತೆ ಆಗತಾನೆ ಪ್ರಾರಂಭವಾಗಿತ್ತು. ಅವರು ಆ ಪ್ರದೇಶದ ಉಳಿದ ಗೌಡರುಗಳಿಗಿಂತ ಬುದ್ಧಿವಂತರೆಂದೆನಿಸಿಕೊಂಡಿದ್ದರು. ತಕ್ಕಷ್ಟು ಓದು ಬರಹವೂ ಅವರಿಗೆ ಬರುತ್ತಿತ್ತು. ಅವರು ತಮ್ಮ ಜಮೀನೆಲ್ಲವನ್ನೂ ಗೇಣಿಗೆ ಕೊಟ್ಟಿದ್ದರು. ಗೇಣಿಯಿಂದ ಅವರಿಗೆ ಎರಡುನೂರು ಮಣ ಅಡಕೆ, ಮೂರುನೂರು ಖಂಡುಗ ಬತ್ತ ಬರುತ್ತಿತ್ತು. ಲೇವಾದೇವಿ ವ್ಯಾಪಾರಗಳಿಂದ ಅವರಿಗೆ ಆಗ ಒಂದು ಸಾವಿರ ರೂಪಾಯಿ ಮಾತ್ರ ವರಮಾನವಿತ್ತು. ಕೋರ್ಟು ವ್ಯವಹಾರದಲ್ಲಿ ಅವರು ಕುಶಲತೆಯನ್ನು ಪಡೆದಿದ್ದರು. ಗೌಡರಿಗಿನ್ನೂ ಚಿಕ್ಕ ವಯಸ್ಸು. ಬಡಬಗ್ಗರ

ಸುಲಿಗೆಯ ಹಾದಿಯಲ್ಲಿ ಆಗತಾನೆ ಅವರು ಕಾಲಿಟ್ಟಿದ್ದರು. ಗೌಡರು ವಯಸ್ಸು ಹೆಚ್ಚಾದ ಹಾಗೆಲ್ಲಾ ಅವರ ವ್ಯವಹಾರ ಕುಶಲತೆಯೂ ಸುಲಿಗೆಯ ಪ್ರವೃತ್ತಿಯೂ ವೃದ್ಧಿಯಾಗುತ್ತಿದ್ದುವು. ಅವರ ಕತೆಯನ್ನು ಸವಿಸ್ತಾರವಾಗಿ ಮುಂದೆ ತಿಳಿಸಲಾಗುವುದು.

ನಮ್ಮ ಕಥೆಯನ್ನು ಪ್ರಾರಂಭಿಸುವ ಮೊದಲು, ಓದುಗರ ಮುಂದೆ ಅಂದಿನ ಮಲೆನಾಡಿನ ಜನಜೀವನದ ಚಿತ್ರವನ್ನಿಡುವುದು ಅವಶ್ಯಕ. ಪುರಾತನ ಕಾಲದಲ್ಲಿ ಋಷಿಗಳನೇಕರು ಮಲೆನಾಡಿನಲ್ಲಿ ತಪಸ್ಸು ಮಾಡುತ್ತಿದ್ದರೆಂದೂ, ಅವರು ಮಲೆನಾಡಿನ ಪ್ರಕೃತಿಸೌಂದರ್ಯದಲ್ಲಿ ಸತ್ಯವನ್ನು ಕಂಡರೆಂದೂ ಪ್ರತೀತಿ ಇದೆ. ಆದರೆ ನಮ್ಮ ಕತೆ ಪ್ರಾರಂಭವಾಗುವ ಕಾಲದಲ್ಲಿ ತಪಸ್ಸು ಮಾಡುವ ಸಾಧಕರೂ ಇರಲಿಲ್ಲ; ನಿಸರ್ಗದ ಸೊಬಗನ್ನು ಸವಿಯುವ ರಸಿಕರೂ ಇರಲಿಲ್ಲ. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯೆಲ್ಲವೂ ಕೆಲವೇ ಜನ ಶ್ರೀಮಂತರ ಮತ್ತು ಮಠಾಧಿಪತಿಗಳ ಕೈ ಸೇರಿ ಹೋಗಿತ್ತು. ಜನ ಸಾಮಾನ್ಯರು ಅಜ್ಞಾನದ ಅಂಧಕಾರದಲ್ಲಿ, ಶೋಷಣೆಯ ದಾಸ್ಯದಲ್ಲಿ ಸಿಲುಕಿ ನರಳುತ್ತಿದ್ದರು.

ಮಲೇರಿಯಾ ಮಹಾಮಾರಿ ಪ್ರತಿ ವರ್ಷವೂ ಸಹಸ್ರಾರು ಜನರನ್ನು ಆಹುತಿ ತೆಗೆದುಕೊಳ್ಳುತ್ತಿತ್ತು. ಸರ್ಕಾರದವರು ಪ್ರಜೆಗಳ ಪ್ರಯೋಜನಕ್ಕೋಸ್ಕರ ಕೆಲವು ಕಾನೂನುಗಳನ್ನು ಮಾಡಿದ್ದರು. ಆದರೆ ಆ ಕಾನೂನುಗಳು ಬಡವರಿಗಿಂತಲೂ ಶ್ರೀಮಂತರಿಗೆ, ದಡ್ಡರಿಗಿಂತಲೂ ಬುದ್ಧಿವಂತರಿಗೆ ಪ್ರಯೋಜನಕರವಾಗಿದ್ದುವು. ಆಗತಾನೆ ಆಧುನಿಕ ವ್ಯವಹಾರಗಳಾದ ಕ್ರಯ ಪತ್ರ, ದೀಡು ಪತ್ರ, ಪ್ರಾಮಿಸರಿ ನೋಟು, ದಾವ, ಡಿಕ್ರಿ, ಹರಾಜು ಮುಂತಾದವುಗಳು ಆಚರಣೆಗೆ ಬಂದಿದ್ದವು. ಆ ಹಿಂದೆಯೂ ಈ ವ್ಯವಹಾರಗಳು ಆಚರಣೆಯಲ್ಲಿದ್ದುವು. ಆದರೆ ಅವು ಬಹಳ ಅಪರೂಪವಾಗಿದ್ದವು. ಹಿಂದೆ ಲೇವಾದೇವಿ ಬಾಯಿಮಾತಿನಲ್ಲೇ ನಡೆಯುತ್ತಿತ್ತು. ಈ ಬಾಯಿಮಾತಿನ ವ್ಯವಹಾರಗಳಿಗೆ ಸೂರ್ಯ ಚಂದ್ರರೂ, ಧರ್ಮ ದೇವತೆಗಳೂ ಸಾಕ್ಷಿಯಾಗಿರುತ್ತಿದ್ದರು. ಹೊಸದಾಗಿ ಆಚರಣೆಗೆ ಬಂದಿದ್ದ ವ್ಯವಹಾರಗಳನ್ನುಪಯೋಗಿಸಿಕೊಂಡು, ಕೆಲವರು ಬುದ್ಧಿವಂತರಾದವರು ದಡ್ಡರಾಗಿದ್ದವರ ಆಸ್ತಿಯನ್ನು ಅಪಹರಿಸಿದರು. ಆಗ ಬಿಟ್ಟಿ ಅಥವಾ ಕಡ್ಡಾಯ ಕೆಲಸದ ಪದ್ಧತಿ ಜಾರಿಯಲ್ಲಿತ್ತು. ಕೊತ್ವಾಲ ಅಥವಾ ಶೇಕದಾರ ಕರೆದಾಗ ಖಾತೆದಾರರಾದವರು ತಪ್ಪದೆ ಕಡ್ಡಾಯದ ಕೆಲಸಕ್ಕೆ ಹೋಗಬೇಕಾಗಿತ್ತು. ಕಡ್ಡಾಯ ಕೆಲಸದ ದೆಶೆಯಿಂದ ಅಂದಿನ ಬಹುಮಂದಿ ಖಾತೆದಾರರಿಗೆ ಕೊತ್ವಾಲರ ಮತ್ತು ಶೇಕದಾರರ ಕಾಟ ತಪ್ಪಿದರೆ ಸಾಕಾಗಿತ್ತು. ಇದನ್ನರಿತ ಕೆಲವರು ಬುದ್ಧಿವಂತರು ಖಾತೆಯಿಲ್ಲದವರಿಗೆ ಕೊತ್ವಾಲ ಮತ್ತು ಶೇಕದಾರರ ಕಾಟವಿರುವುದಿಲ್ಲವಾದರಿಂದ ಭೂಮಿ ಖಾತೆಯನ್ನು ತಮ್ಮ ಹೆಸರಿಗೆ ವರ್ಗಾಯಿಸಿದರೆ ಬಿಟ್ಟಿಕೆಲಸದ ಹೊರೆಯನ್ನು ತಾವು ಹೊರುವುದಾಗಿ ಹೇಳಿ, ರೈತರ ಭೂಮಿಯ ಖಾತೆಯನ್ನು ತಮ್ಮ ಹೆಸರಿಗೆ ಮಾಡಿಸಿಕೊಂಡರು. ಮುಗ್ಧರಾದ ರೈತರನೇಕರು ಬುದ್ಧಿವಂತರೊಡ್ಡಿದ ಬಲೆಗೆ ಬಿದ್ದು ಖಾತೆದಾರರಾಗಿರುವ ಬದಲು ಗೇಣಿದಾರರಾದರು.

ಅಂದಿನ ಲೇವಾದೇವಿಯ ಕ್ರಮವು ವಿಚಿತ್ರವಾಗಿತ್ತು. ಸಾಲಗಾರರು ತಾವು ಸಾಲವಾಗಿ ಪಡೆದ ಹಣಕ್ಕೆ ಸಾಹುಕಾರರಿಗೆ ಶೇಕಡ ಹದಿನೆಂಟು ರೂಪಾಯಿಗಳಿಂದ ಹಿಡಿದು ಇಪ್ಪತ್ತು ನಾಲ್ಕು ರೂಪಾಯಿಗಳವರೆಗೆ ಬಡ್ಡಿಯನ್ನು ತೆರಬೇಕಾಗಿತ್ತು. ಲೇವಾದೇವಿಯ ಸಲುವಾಗಿ ಆಶ್ವಯುಜ ಬಹುಳ ಅಮಾವಾಸ್ಯೆ ವರ್ಷದ ಅಂತ್ಯವಾಗಿತ್ತು. ಆಶ್ವಯುಜ ಬಹುಳ ಅಮಾವಾಸ್ಯೆಗೆ ಎಂಟು ದಿನಗಳ ಮುಂಚೆ ಸಾಲಗಾರರು ಸಾಲವನ್ನು ತೆಗೆದುಕೊಂಡಿದ್ದರೂ ಎಂಟು ದಿನಗಳ ಅವಧಿಗೆ ಒಂದು ವರ್ಷದ ಬಡ್ಡಿಯನ್ನು ಕೊಡಬೇಕಾಗಿತ್ತು. ಕೂಲಿಗಾರರಾಗಲಿ, ಗೇಣಿದಾರರಾಗಲಿ, ಊಟಕ್ಕೆ ಗತಿಯಿಲ್ಲದೆ ಗದ್ದೆ ಕೊಯ್ಲಿಗೆ ಒಂದೆರಡು ತಿಂಗಳ ಮುಂಚೆ ಭೂಮಾಲಿಕರಿಂದಲೋ ಅಥವಾ ಸಾಹುಕಾರರಿಂದಲೋ ಬತ್ತವನ್ನು ಸಾಲವಾಗಿ ತೆಗೆದುಕೊಂಡಾಗ ಗದ್ದೆ ಕೊಯ್ಲಾದ ನಂತರ ಹುಲಿ(ಬಡ್ಡಿ) ಸೇರಿಸಿ ಒಂದಕ್ಕೆ ಎರಡರಷ್ಟು ಬತ್ತವನ್ನು ಹಿಂದಕ್ಕೆ ಕೊಡಬೇಕಾಗಿತ್ತು. ಗೇಣಿದಾರರಿಂದ ಮತ್ತು ಸಾಲಗಾರರಿಂದ ಬತ್ತ ಅಡಕೆಗಳನ್ನು ತೆಗೆದುಕೊಳ್ಳುವುದಕ್ಕಾಗಿ ಉಪಯೋಗಿಸುತ್ತಿದ್ದ ಅಳತೆಯ ಕೊಳಗಗಳೂ, ತೂಕದ ಗುಂಡುಗಳೂ ನೀತಿ ನಿಯಮಗಳಿಗನುಗುಣವಾಗಿರದೆ ಭೂಮಾಲೀಕರ ಮತ್ತು ಸಾಹುಕಾರರ ಆಶೆ ಆಕಾಂಕ್ಷೆಗಳಿಗನುಗುಣವಾಗಿದ್ದವು.

ಸಾಲಗಾರರು ಸಾಲತೀರ್ಮಾನಕ್ಕಾಗಿ ಕೊಟ್ಟ ಅಡಕೆ, ಬತ್ತ, ಬೆಲ್ಲ ಮುಂತಾದುವು ಗಳೆಲ್ಲವನ್ನೂ ಸಾಹುಕಾರರ ಬಡ್ಡಿಯೇ ನುಂಗಿಬಿಡುತ್ತಿತ್ತು, ಅಸಲು ತೀರ್ಮಾನವಾಗುವ ಸಂಭವವೇ ಇರಲಿಲ್ಲ. ಸಾಲ ತೆಗೆದುಕೊಂಡವನು ಋಣಮುಕ್ತನಾಗುವುದು ಬಹಳ ವಿರಳವಾಗಿತ್ತು. ಸಾಲಗಾರರು ಸಾಲಕ್ಕಾಗಿ ಕೊಟ್ಟ ಅಡಕೆಗೆ ಸಾಹುಕಾರರು ಸೀಮೆಧಾರಣೆಯನ್ನು ನಿಗದಿಮಾಡುತ್ತಿದ್ದರು. ಸೀಮೆಧಾರಣೆಯು ಮಾರುಕಟ್ಟೆಯ ಧಾರಣೆಯ ಅರೆವಾಸಿಯಷ್ಟಿರುತ್ತಿತ್ತು.

ಅಂದು ಹೊಲೆಯರೆಂದು ಕರೆಯಲ್ಪಡುತ್ತಿದ್ದ ಹರಿಜನರ ಬಾಳು ನಾಯಿಯ ಬಾಳಿನಂತಿತ್ತು. ಅವರು ವಂಶಪಾರಂಪರ್ಯವಾಗಿ ಒಡೆಯರಗುಲಾಮರಾಗಿ, ಒಡೆಯರ ಮನೆಯಲ್ಲಿ ಜೀತದ ಆಳುಗಳಾಗಿ ದುಡಿಯಬೇಕಾಗಿತ್ತು. ಹುಲ್ಲಿನ ಅಥವಾ ಸೋಗೆಯ ಗುಡಿಸಲುಗಳೂ, ಮಣ್ಣಿನ ಮಡಕೆಗಳೂ ಆ ಜನರ ಸರ್ವಸ್ವ ಆಸ್ತಿಯಾಗಿತ್ತು. ಅವರಿಗೆ ಯಾವ ಆಸ್ತಿ ಇಲ್ಲದಿದ್ದರೂ ಅವರು ಮಾತ್ರ ಒಡೆಯರ ಆಸ್ತಿಯಾಗಿದ್ದರು. ಜೀತದ ಆಳುಗಳಿಗೆ, ಅವರು ಕೆಲಸಮಾಡಿದ ದಿನ ಒಂದು ಕೊಳಗ ಬತ್ತವನ್ನು ಮಾತ್ರ ಕೊಡುತ್ತಿದ್ದರು. ಕೊಳಗವೆಂದರೆ ಗಡಿ ಕೊಳಗವಲ್ಲ; ಕೂಲಿಯ ಕೊಳಗ. ಭೂಮಾಲೀಕರೂ, ಸಾಹುಕಾರರೂ, ತಮಗೆ ಬರಬೇಕಾದ ಬತ್ತವನ್ನು ಅಳೆಯಿಸುವಾಗ ಗಡಿಕೊಳಗದಲ್ಲಿ ಅಳೆಯಿಸಿಕೊಳ್ಳುತ್ತಿದ್ದರು. ತಾವು ತಮ್ಮ ಕೂಲಿಯವರಿಗೆ ಅಳೆದುಕೊಡುವಾಗ ಕೂಲಿಕೊಳಗದಲ್ಲಿ ಕೊಡುತ್ತಿದ್ದರು. ಕೂಲಿ ಕೊಳಗದ ಪ್ರಮಾಣ ಗಡಿ ಕೊಳಗದ ಅರ್ಧದಷ್ಟು ಇರುತ್ತಿತ್ತು. ಒಡೆಯರು ವರ್ಷಕ್ಕೊಮ್ಮೆ ತಮ್ಮ ಜೀತದ ಆಳುಗಳಿಗೆ ಬಟ್ಟೆಬರೆಗಳನ್ನು ಕೊಡುತ್ತಿದ್ದರು. ಜೀತದ ಆಳು ಹೆಂಗಸಾದರೆ ಒಂದು ಜಡ್ಡು ಸೇರೆ,

ಒಂದು ವಲ್ಲಿ ಮತ್ತು ಮಳೆಗಾಲದಲ್ಲಿ ಸೂಡಲು ಒಂದು ಗೊರಬನ್ನು ಸಹ ಕೊಡುತ್ತಿದ್ದರು. ಗಂಡಸಾದರೆ ಒಂದು ಪಂಚೆಯನ್ನು ಮತ್ತು ಒಂದು ಕಂಬಳಿಯನ್ನು ಕೊಡುತ್ತಿದ್ದರು. ಜೀತದ ಆಳುಗಳ ಮದುವೆಗೆ 'ಕುಲಮಾರೆ' ಎನ್ನುತ್ತಿದ್ದರು. ಜೀತದ ಆಳುಗಳು ಪ್ರಾಪ್ತ ವಯಸ್ಸಿಗೆ ಬಂದಾಗ ಒಡೆಯರು ಅವರಿಗೆ 'ಕುಲಮಾರೆ' ಮಾಡಿಸುತ್ತಿದ್ದರು. ಜೀತದ ಆಳುಗಳ ಮಕ್ಕಳಿಗೆ 'ಕುರುದೆ' ಗಳೆನ್ನುತ್ತಿದ್ದರು. ಕುರುದೆಗಳು ಎಂಟು ಅಥವಾ ಹತ್ತು ವರ್ಷಗಳು ತುಂಬಿದೊಡನೆ ಅವರೂ ಸಹ ಜೀತದ ಕೆಲಸಕ್ಕೆ ಹೋಗಬೇಕಾಗಿತ್ತು. ಜೀತದ ಆಳುಗಳಿಗೆ ಒಡೆಯರ ಮನೆಯೊಳಗೆ ಪ್ರವೇಶವಿರಲಿಲ್ಲ; ಒಡೆಯರನ್ನು ಮುಟ್ಟುವಂತೆಯೂ ಇರಲಿಲ್ಲ. ಆದರೆ ಜೀತದ ಹೆಣ್ಣು ಸುಂದರಿಯಾಗಿದ್ದರೆ ಒಮ್ಮೊಮ್ಮೆ ಒಡೆಯರೇ ಆಳನ್ನು ಮುಟ್ಟುತ್ತಿದ್ದರು. ಅಂದು ಹರಿಜನರಲ್ಲಿ 'ಗೊರಬಿ' ಬಿಡುವ ಪದ್ಧತಿಯಿತ್ತು. ಗೊರಬಿ ಎಂದರೆ ಬಸವಿ ಎಂದರ್ಥ. ಕೆಲವು ಸಂದರ್ಭಗಳಲ್ಲಿ, ಹೆಣ್ಣು ಮಕ್ಕಳು ಚೆಲುವೆಯಾಗಿದ್ದರೆ, ಅವರಿಗೆ ಮಣಿಕಟ್ಟಿಸಿ ಅವರನ್ನು ಬಸವಿಯರನ್ನಾಗಿ ಮಾಡಬೇಕೆಂದು ಮೇಲ್ಜಾತಿಯ ಮುಂದಾಳುಗಳು ಆ ಹೆಣ್ಣು ಮಕ್ಕಳ ತಂದೆ ತಾಯಿಗಳಿಗೆ ಪ್ರೋತ್ಸಾಹ ಮಾಡುತ್ತಿದ್ದರು. ಹಿಂದೂಸ್ಥಾನದಲ್ಲಿ ಜಾತಿ ವಿವಾಹಕ್ಕೆ ಅಡ್ಡಿಯಾಗಿದೆಯೇ ಹೊರತು ಅಕ್ರಮ ಪ್ರೇಮಕ್ಕೆ ಯಾವಾಗಲೂ ಅಡ್ಡಿಯಾಗಿಲ್ಲ.

ಗೇಣಿದಾರರ ಬಾಳು ಹರಿಜನರ ಬಾಳಿಗಿಂತ ಸ್ವಲ್ಪ ಉತ್ತಮವಾಗಿತ್ತು. ಅವರೂ ಹುಲ್ಲು ಅಥವಾ ಸೋಗೆಯ ಗುಡಿಸಲುಗಳಲ್ಲಿ ಜೀವಿಸುತ್ತಿದ್ದರು. ಗೇಣಿದಾರರು ವಾಸಮಾಡುವ ಗುಡಿಸಲುಗಳನ್ನು ಮನೆಗಳೆಂದು ಕರೆಯುತ್ತಿದ್ದರು. ಹರಿಜನರು ವಾಸಮಾಡುವ ಗುಡಿಸಲುಗಳನ್ನು ಗುಡಿಗಳೆಂದು ಕರೆಯುತ್ತಿದ್ದರು. ದೇವಸ್ಥಾನಗಳನ್ನು ಗುಡಿಗಳೆಂದು ಕರೆಯುವುದು ವಾಡಿಕೆಯಾಗಿದೆ. ಹರಿಜನರ ವಾಸಸ್ಥಾನಗಳಿಗೆ ಆ ಹೆಸರು ಹೇಗೆ ಬಂತೆಂಬುದು ಗೊತ್ತಾಗದ ವಿಚಾರ. ಗೇಣಿದಾರರು ಹರಿಜನರಿಗಿಂತಲೂ ನೆಮ್ಮದಿಯಾಗಿದ್ದರು. ಆದರೆ ಅವರೂ ಸಹ ಒಂದು ವಿಧದಲ್ಲಿ ಭೂಮಾಲೀಕರ ಗುಲಾಮರಾಗಿದ್ದರು. ಭೂಮಾಲೀಕರು ಕೇಳಿದಷ್ಟು ಗೇಣಿಯನ್ನು ಅವರು ಕೊಡಬೇಕಾಗಿತ್ತು. ಭೂಮಾಲೀಕರು ಕರೆದಾಗ ಬಿಟ್ಟಿ ಕೆಲಸಕ್ಕೆ ಹೋಗಬೇಕಾಗಿತ್ತು. ಗೇಣಿದಾರರು ಗೇಣಿಯನ್ನು ಕೊಡವುದರ ಜೊತೆಗೆ ತರಕಾರಿ. ತರಪಡಿ, ತಳರಾಸಿ, ಮೇಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು. ದೊಡ್ಡವರು ಬಡವರಿಗೆ ಉಚಿತವಾಗಿ ಕೊಡುವುದನ್ನು ಬಹುಮಾನ ಎನ್ನುತ್ತಾರೆ; ಬಡವರು ದೊಡ್ಡವರಿಗೆ ಉಚಿತವಾಗಿ ಕೊಡುವುದನ್ನು ಮರ್ಯಾದೆ ಎನ್ನುತ್ತಾರೆ. ಸಾಹುಕಾರರೂ, ಭೂಮಾಲೀಕರೂ ತಮಗೆ ಬರಬೇಕಾದ ಬಾಕಿಯನ್ನು ವಸೂಲ್ಮಾಡುವುದಕ್ಕಾಗಿ ವಸೂಲಿ ಜನರನ್ನು ನೇಮಿಸಿಕೊಂಡಿದ್ದರು. ಸಾಮಾನ್ಯವಾಗಿ ಗೂಂಡಾಗಿರಿಯುಲ್ಲಿ ನಿಸ್ಸೀಮರಾದವರನ್ನು ಈ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು. ಸಾಮಾನ್ಯ ಜನರು ಈ ವಸೂಲಿ ಜನರನ್ನು ಕಂಡರೆ ಮರಣಕ್ಕಿತಲೂ ಹೆಚ್ಚಾಗಿ ಹೆದರುತ್ತಿದ್ದರು. ಒಟ್ಟಿನಲ್ಲಿ ಹೇಳುವುದಾದರೆ, ಅಂದಿನಕಾಲದಲ್ಲಿ ಸಾಮಾನ್ಯ ಜನರ ಬಾಳು ನರಕಪ್ರಾಯವಾಗಿತ್ತು.

ಒಂದು ಕಡೆ ಕಣ್ಣಿಗೆ ಕಾಣುತ್ತಿದ್ದ ಸಾಹುಕಾರರ ಕಾಟವಾದರೆ, ಇನ್ನೊಂದು ಕಡೆ ಕಣ್ಣಿಗೆ ಕಾಣದ ದೆವ್ವಗಳ ಕಾಟ. ಕಾಡಿನಲ್ಲಿ ಹುಲಿ ಕುರ್ಕಗಳ ಆರ್ಭಟವಾದರೆ, ಊರಿನಲ್ಲಿ ವಸೂಲಿ ಸಾಹೇಬರ ಮತ್ತು ಕೊತ್ವಾಲರ ಆರ್ಭಟ. ಅಂತೂ, ಭಯ ಭೀತಿಯ ವಾತಾವರಣದಲ್ಲಿ ಜನರು ಬಾಳುತ್ತಿದ್ದರು. ಮೇಲೆ ವಿವರಿಸಿದ ಅಂದಿನ ಚಿತ್ರದ ಅವಶೇಷ ಈಗಲೂ ಅಲ್ಲಲ್ಲಿ ಇದೆಯೆಂದು ವಿಷಾದದಿಂದ ಹೇಳಬೇಕಾಗಿದೆ.

# ೨. ನರಭಕ್ಷಕ ಹುಲಿ

ಕಾಳೇಗೌಡರ ಅಣ್ಣ ಗಿರಿಯಪ್ಪಗೌಡರು ಮೈ ತೊಳೆದುಕೊಂಡು ಅಂಗಳದಲ್ಲಿ ತುಳಸಿಕಟ್ಟೆಯ ಮುಂದೆ ಕುಳಿತು ಮೂರು ನಾಮಗಳನ್ನು ಧರಿಸಿ, ತುಳಸಿ ಪೂಜೆಯನ್ನು ಮಾಡಿ, ಕಿವಿಯಲ್ಲಿ ತುಳಸಿ ಕುಡಿಯನ್ನು ಸಿಕ್ಕಿಸಿ ಕೊಳ್ಳುತ್ತಿದ್ದರು. ಅಷ್ಟರಲ್ಲಿ ಎಲ್ಲಿಗೋ ಹೋಗಿದ್ದ ಅವರ ತಮ್ಮ ಕಾಳೇಗೌಡರು ಮನೆಗೆ ಬಂದವರು, ಗಿರಿಯಪ್ಪಗೌಡರನ್ನು ನೋಡಿ ಮುಖವನ್ನು ಗಂಟು ಹಾಕಿಕೊಂಡು "ಏನ್, ದೊರೆಮಗ್ನಾಗೆ ಮಡಿ ಮಾಡಿ ಪೂಜ ಮಾಡ್ತಾ ಇದೀಯಲ್ಲಾ? ಹಾಳೆ ತ್ವಾಟದಾಗೆ ಕ್ವಳೀತ ಬಿದ್ದವೆ. ಇವ ಮಡಿ ಮಾಡ್ತಾ ಅದ್ಯಾನೆ ನಿಂಗ್ ನಾ ಬೆಳಿಗ್ಗೆ ಹೇಳ್ತೋದ್ದು ಏನು?" ಎಂದು ಹೇಳಿದರು. ತಮ್ಮನ ಮಾತನ್ನು ಕೇಳಿ ಗಿರಿಯಪ್ಪಗೌಡರಿಗೆ ವಿಪರೀತ ಕೋಪ ಬಂತು. ಆದರೆ ತಮ್ಮನಿಗೆ ನೇರವಾಗಿ ಜವಾಬು ಕೊಡದೆ, ತಮಗಾದ ಅವಮಾನವನ್ನು ಭಗವಂತನಿಗೆ ಅರ್ಪಿಸುವ ರೀತಿಯಲ್ಲಿ "ನಂಗೆ ಇವತ್ತು ವಡ್ಲಜರ. ಗಟ್ದರಿಗಾರು ತಿಂಗಳಿಗುಂದು ಉಳಿ ಅದೆ, ನಂಗದೂ ಇಲ್ದೆ ಹೋತಲ್ಲಪ್ಪಾ. ಭಗವಂತ ನೀನೆ ನೋಡ್ಕ್ಯ" ಎಂದು ಹೇಳಿದರು.

"ಹೂಂ, ಭಗವಂತ ನೋಡ್ಕುತಾನೆ. ನಿನ್ಹಿಡ್ತಿ ಹಂದಿ ಮರಿ ಹಾಕು ಹಾಗೆ ವುರ್ಸಗುಂದು ಹೆರ್ತದೆ. ನಿಂಗೆ, ನಿನ್ಹಿಡ್ತಿಗೆ, ನಿನ್ಮಕ್ಳೀಗೆ, ದಿನ್ಕೆ ಐದ್ವಕ್ಕಾಸೇರು ಕುಚ್ಚಕ್ಕಿ ಬೇಕು. ನೀ ದುಡಿಬ್ಯಾಡ್ದು, ನಿನ್ಹಿಡ್ತಿ ದುಡಿಬ್ಯಾಡ್ದು ಇನ್ಯಾರು ದುಡಿಯೋರು, ಭಗವಂತ ದುಡಿಯೋಕೆ ಬತ್ತಾನೆ ಅಲ್ಲೇ?"

"ನಂಗೂ ನಿಂಗೂ, ಯಲ್ಲೋರಿಗೂ ಕೊಡಾವ ಅವ್ನೆ. ನಾನೂ ನೀನು ವುಂದ್ತಾಯಿ ಹೊಟ್ಟೇಲಿ ವುಂದ್ಸರೆ ರಕ್ತ ಪಾಲ್ಮಾಡಿಕೊಂಡು ಹುಟ್ಟೀವಿ. ಅಣ್ಣ ಅತ್ತಿಗಿ ಅಂತ ವುಂಚೂರೂ ಇಡ್ದೆ, ಬಾಯಿಗ್ಬಂದ್ಹಾಗೆ ಕ್ಯಲೀತಿಯಲ್ಲೋ. ನಿಂಗ್ದೇವರು ವಳ್ಳೆದ್ಮಾಡ್ತಾನೇನೋ ಕಾಳ?"

"ನೀನೂ, ನೀನ್ಹಿಡ್ತಿ, ವೈಸಾಗಿ ಮನೇಲಿ ಬೆಚ್ಗೆ ಕೂರ್ಬೇಕು, ನಾ ಇದ್ದೋರ್ಬದ್ದೋರ್ ಕಾಲ್ಹಿಡ್ದು ದುಡಿಬೇಕು ಅಂತ ದೇವರು ಹೇಳ್ಯಾನೇನು? ನೀ ಬದಕ್ಮಾಡೂ ಹಾಂಗ್ರಿದ್ರೆ ಮನೇಲಿರು; ಬ್ಯಾಡ ಅಂತ ಕಂಡ್ರೆ ಹೊಲ್ಟೋಗು."

ತಮ್ಮ ಆಡಿದ ಮಾತುಗಳಿಂದ ಗಿರಿಯಪ್ಪಗೌಡರ ಹೃದಯಕ್ಕೆ ಶೂಲವನ್ನು ಇರಿದಂತಾಗಿತ್ತು. ತುಳಸಿಕಟ್ಟೆಯ ಮುಂದೆ ಕುಳಿತವರು, ಅಲ್ಲೇ ಸ್ವಲ್ಪ ಹೊತ್ತು ಯೋಚನೆಯಲ್ಲಿ ಮುಗ್ನರಾಗಿ ಕುಳಿತರು. ಗಿರಿಯಪ್ಪಗೌಡರು ಅವಿದ್ಯಾವಂತರಾದರೂ ತುಂಬಾ ಸಾತ್ವಿಕರಾಗಿದ್ದರು. ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳನ್ನು ಹರಿಕಥೆ ಭಾಗವತರಾಟಗಳ ಮೂಲಕ ಚೆನ್ನಾಗಿ ತಿಳಿದುಕೊಂಡಿದ್ದರು. ಪವಿತ್ರಪುರದಲ್ಲಾಗುತ್ತಿದ್ದ

ಹರಿಕಥೆಗಳಿಗೆ ಗೌಡರು ಎಂದೂ ತಪ್ಪಿರಲಿಲ್ಲ. ಅಂತೆಯೇ ಸುತ್ತಮುತ್ತಲ ಗ್ರಾಮಗಳಲ್ಲಿ ಆಗುತ್ತಿದ್ದ ಭಾಗವತರ ಆಟಗಳಿಗೆ ಅವರು ತಪ್ಪದೇ ಹೋಗುತ್ತಿದ್ದರು. ತನ್ನನ್ನು ನಂಬಿದವರನ್ನು ದೇವರು ಎಂದೂ ಕೈ ಬಿಡುವುದಿಲ್ಲವೆಂದು ಗೌಡರು ಅಚಲವಾದ ನಂಬಿಕೆಯನ್ನು ಹೊಂದಿದ್ದರು. ಆ ದಿನ ತಮ್ಮನಾಡಿದ ಮಾತುಗಳನ್ನು ಸಹಿಸುವ ಸಹನೆ ಅವರಲ್ಲಿ ಉಳಿದಿರಲಿಲ್ಲ. ಅತ್ತಿಗೆಯನ್ನು ಹಂದಿಗೆ ಹೋಲಿಸಿದ ಮೂರ್ಖ ಹಂದಿಗಿಂತಲೂ ಕೀಳೆಂದು ಅವರಿಗೆ ಮನವರಿಕೆಯಾಯಿತು. ಇಂತಹ ಮಾನವರೂಪದ ಮೃಗದ ಜೊತೆಯಲ್ಲಿ ಹೇಸಿಗೆಯ ಜೀವನವನ್ನು ಸಾಗಿಸುವುದಕ್ಕಿಂತ ಭಿಕ್ಷಾವೃತ್ತಿಯಿಂದ ಜೀವಿಸುವುದು ಪರಮ ಸುಖವೆಂದು ಗೌಡರು ನಿರ್ಣಯಿಸಿದರು.

ಗಿರಿಯಪ್ಪಗೌಡರು ಮೇಲಕ್ಕೆದ್ದು, ತಮ್ಮನನ್ನು ಕುರಿತು "ಆಸ್ತಿ ಮನೆ, ಯಲ್ಲಾ ನಿನ್ನದೆ ಮ್ಯಾಲೆ ಹೇರ್ಕ್ಯಾ. ನಾ ದೇಸಾಂತ್ರ ಹೋತೀನಿ" ಎಂದು ಹೇಳಿ, ಹೆಂಡತಿ ಮಕ್ಕಳನ್ನು ಕರೆದುಕೊಂಡು ಬಟ್ಟೆ ಬರೆಗಳನ್ನಿಡುವ ಪೆಟಾರಿಯೊಂದನ್ನೂ, ಕೈಯಲ್ಲಿದ್ದ ತೀರ್ಥದ ಚೆಂಬನ್ನು ತೆಗೆದುಕೊಂಡು ಹೆಂಡತಿಯ ತೌರೂರಾದ ಸೈದಳ್ಳಿಗೆ ಹೊರಟರು. ಹೆಂಡತಿ ಈರಮ್ಮನು ತುಂಬಿದ ಗರ್ಭಿಣಿಯಾಗಿದ್ದಳು. ಪದೇ ಪದೇ ಬರುತ್ತಿದ್ದ ಚಳಿ ಜ್ವರದ ದೆಶೆಯಿಂದ ಆಕೆಯು ರಕ್ತಹೀನಳಾಗಿ, ಶರೀರ ಊದಿಕೊಂಡಿತ್ತು. ಅದುವರೆಗೆ ಆಕೆಗೆ ಹತ್ತು ಮಕ್ಕಳಾಗಿ, ಆ ಪೈಕಿ ಐದು ಮಕ್ಕಳು ತೀರಿ ಹೋಗಿದ್ದುವು. ಇನ್ನುಳಿದ ಮಕ್ಕಳಲ್ಲಿ ಮೊದಲನೆಯ ಮಗ ಸಿದ್ದಣ್ಣನಿಗೆ ಒಂಬತ್ತು ವರ್ಷಗಳ ವಯಸ್ಸಾಗಿತ್ತು. ಸಿದ್ದಣ್ಣನ ತಂಗಿ ಸುಬ್ಬಿಗೆ ಐದು ವರ್ಷಗಳಾಗಿತ್ತು. ಸುಬ್ಬಿಯ ಒತ್ತಿನ ಪುಟ್ಟನಿಗೆ ನಾಲ್ಕು ವರ್ಷಗಳಾಗಿತ್ತು. ಕೊನೆಯ ಎರಡು ಹೆಣ್ಣು ಮಕ್ಕಳಲ್ಲಿ, ಒಂದಕ್ಕೆ ಮೂರು ವರ್ಷಗಳೂ ಇನ್ನೊಂದಕ್ಕೆ ಎರಡು ವರ್ಷಗಳೂ ಆಗಿತ್ತು. ಪಂಜರವಳ್ಳಿಯಿಂದ ಸೈದಳ್ಳಿಗೆ ಒಂದು ಹರಿದಾರಿ ದೂರವಿತ್ತು. ಗುಡ್ಡವನ್ನು ಹತ್ತಿ ಕಾಲುದಾರಿಯಲ್ಲಿ ಕಾಡಿನ ಮಧ್ಯೆ ಹೋಗಬೇಕಾಗಿತ್ತು. ಹಸಿವಿನಿಂದ ಬಳಲಿದ್ದ ಐದು ಚಿಕ್ಕಮಕ್ಕಳನ್ನು, ನಿಶ್ಶಕ್ತಳಾಗಿದ್ದ ಗರ್ಭಿಣಿ ಹೆಂಡತಿಯನ್ನೂ ಆ ದಾರಿಯಲ್ಲಿ ಸಾಗಿಸುವುದು ಸುಲಭವಾಗಿರಲಿಲ್ಲ. ಕೊನೆಯ ಮೂರು ಮಕ್ಕಳು ನಡೆಯವಂತಿರಲಿಲ್ಲ. ಅವುಗಳ ಪೈಕಿ ಎರಡು ಮಕ್ಕಳನ್ನು ಗೌಡರು ತಮ್ಮ ಎಡ ಬಲಗಳಲ್ಲಿ ಸೊಂಟದ ಮೇಲೆ ಕುಳ್ಳಿರಿಸಿ, ಅವು ಕೆಳಕ್ಕೆ ಬೀಳದಂತೆ ಪಂಚೆಯಿಂದ ಬಿಗಿದಿದ್ದರು. ತಲೆಯ ಮೇಲೆ ಪೆಟಾರಿಯನ್ನು ಹೊತ್ತಿದ್ದರು. ಈರಮ್ಮನು ಒಂದು ಮಗುವನ್ನು ಎತ್ತಿಕೊಂಡು ಕೈಯಲ್ಲಿ ತೀರ್ಥದ ಚೆಂಬನ್ನು ಹಿಡಿದಿದ್ದಳು.

ಮನೆಯನ್ನು ಬಿಟ್ಟು ಸ್ವಲ್ಪ ದೂರ ಹೋದೊಡನೆ ಕಾಗೆಯೊಂದು ಬಲದಿಂದ ಎಡಕ್ಕೆ ಹಾರಿಹೋಯಿತು. ಇನ್ನೂ ಸ್ವಲ್ಪ ದೂರ ಮುಂದೆ ಸಾಗಿದ ನಂತರ ದಾರಿಯ ಪಕ್ಕದಲ್ಲಿ ಬಳ್ಳು ಕೂಗುತ್ತಿತ್ತು. "ಯಾಕೋ ಸಕ್ನ ಸರಿಯಾಗಿಲ್ಲ." ಎಂದು ಗೌಡರು ಮನಸ್ಸಿನಲ್ಲಿ ಅಂದುಕೊಂಡರು. ಗಂಡ ಹೆಂಡಿರಿಬ್ಬರೂ ಗಾಢವಾದ ಯೋಚನೆಯಲ್ಲಿ ಮಗ್ನರಾಗಿ ನಡೆಯುತ್ತಿದ್ದರು. ಬಹುಶಃ ತಮ್ಮ ಭವಿಷ್ಯವನ್ನು ಕುರಿತು ಅವರು ಯೋಚಿಸುತ್ತಿದ್ದರು. ಭವಿಷ್ಯದ ಗರ್ಭದಲ್ಲಿ ಏನಡಗಿತ್ತೆಂಬುದನ್ನು ಅವರು

ತಿಳಿಯುವುದಾದರೂ ಹೇಗೆ? ಎಷ್ಟು ನಡೆದರೂ ದಾರಿ ಸಾಗುತ್ತಿರಲಿಲ್ಲ. ಈರಮ್ಮನು ಅದೇ ದಾರಿಯಲ್ಲಿ ಹಲವು ಬಾರಿ ತನ್ನ ತೌರುಮನೆಗೆ ಹೋಗಿದ್ದಳು. ಮದುವೆಯಾದ ತರುಣದಲ್ಲಿ ಪಂಜರವಳ್ಳಿಯಿಂದ ಮುಕ್ಕಾಲು ಗಂಟೆಯಲ್ಲಿ ಪ್ರಯಾಣ ಮಾಡುತ್ತಿದ್ದಳು. ಅಂದು ಸಿರಿವಂತರ ಮನೆಯ ಸೊಸೆಯಾಗಿ ಹೆಮ್ಮೆಯಿಂದ ಗಂಡನೊಂದಿಗೆ ಚಿಮ್ಮುತ್ತಾ ಹಾರುತ್ತಾ ತಾಯಿ ತಂದೆಗಳನ್ನು ನೋಡುವ ತವಕದಿಂದ ತೌರೂರಿಗೆ ಹೋಗುತ್ತಿದ್ದಳು. ಆದುದರಿಂದ ಅಂದು ದಾರಿ ಸ್ವಾಭಾವಿಕವಾಗಿ ಸುಗಮವಾಗಿತ್ತು. ಇಂದು ನಿರಾಶ್ರಿತಳಾಗಿ ತಂದೆ ತಾಯಿಗಳಿಲ್ಲದ ತವರಿಗೆ, ಆಶ್ರಯವನ್ನು ಪಡೆಯುವ ಸಲುವಾಗಿ, ಚಿಂತಾಕ್ರಾಂತಳಾಗಿ ನಡೆಯುತ್ತಿದ್ದಳು. ಆದ್ದರಿಂದ ದಾರಿ ದುರ್ಗಮವಾಗಿ ಕಂಡಿತ್ತು. ಮುಂಗಾರು ಮಳೆಯ ಕಾಲವಾದ್ದರಿಂದ ಕಾಡಿನ ಮಧ್ಯೆ ಹೋಗುತ್ತಿದ್ದಾಗ ಇಂಬುಳಗಳು ನಡೆಯುತ್ತಿದ್ದ ಮಕ್ಕಳ ಕಾಲುಗಳಿಗೆ ಪದೇ ಪದೇ ಹತ್ತಿ ರಕ್ತವನ್ನು ಹೀರುತ್ತಿದ್ದುವು. ಆ ಹುಳುಗಳನ್ನು ನೋಡಿದೊಡನೆ, ಮಕ್ಕಳು ಚಿಟ್ಟನೆ ಚೀರಿಕೊಳ್ಳುತ್ತಿದ್ದರು. ಅರಣ್ಯದ ನೀರವತೆಯಲ್ಲಿ "ಜೀ...ಈ....ರ್" ಎಂದು ಕೂಗುವ ಜೀರಟ್ಲೆ ಹುಳುಗಳ ನಾದವು ಒಂದು ಬಗೆಯ ಭಯವನ್ನು ಹುಟ್ಟಿಸುವಂತಿತ್ತು.

ಅಂತೂ ಇಂತೂ ಸಾಯಂಕಾಲ ಸೈದಳ್ಳಿಯನ್ನು ಸೇರಿದರು. ಈರಮ್ಮನ ತಮ್ಮ ಸೈದಳ್ಳಿ ತಿಮ್ಮಣ್ಣನಿಗೆ, ತನ್ನ ಅಕ್ಕ ಭಾವಂದಿರು ಮಕ್ಕಳ ಸಮೇತ ಮನೆಗೆ ಬಂದಿದ್ದು ಸಂತೋಷದಾಯಕವಾಗಿತ್ತು. ಆದರೆ ತಿಮ್ಮಣ್ಣನ ಹೆಂಡತಿ ಗೌರಮ್ಮನಿಗೆ ಅವರ ಆಗಮನದಿಂದ ಅಷ್ಟೇನೂ ಸಮಾಧಾನವಾಗಿರಲಿಲ್ಲ. "ಏಳು ಜನಕ್ಕೆ ಕೂಳ್ಬೇಸ್ಬೇಕಲ್ಲ" ಎಂದು ಮನಸ್ಸಿನಲ್ಲೇ ಅವಳು ಗೊಣಗುತ್ತಿದ್ದಳು. ಅಲ್ಲದೆ ಬಸುರಿಯಾದ ಅತ್ತಿಗೆ ತನ್ನ ಮನೆಯಲ್ಲೇ ಅಕಸ್ಮಾತ್ ಹಡೆದರೆ ಇಪ್ಪತ್ತು ಮೂವತ್ತು ದಿನಗಳ ಕಾಲ ಮಗು ಬಾಣಂತಿಯರ ಆರೈಕೆ ಮಾಡಬೇಕೆಂಬ ಯೋಚನೆಯೂ ಅವಳನ್ನು ಬಾಧಿಸುತ್ತಿತ್ತು. ಆದರೆ ಗೌರಮ್ಮನು ತನ್ನ ಅಸಮಾಧಾನವನ್ನು ಹೊರಗೆ ತೋರ್ಪಡಿಸದೆ, ಬಂದ ನಂಟರನ್ನು ಸ್ವಾಗತಿಸಿದಳು. ಮಕ್ಕಳು ಹಸಿವೆಂದು ಬೊಬ್ಬೆಯಿಡುತ್ತಿದ್ದರು. ಗಿರಿಯಪ್ಪಗೌಡರಾಗಲಿ, ಈರಮ್ಮನಾಗಲಿ ತಮಗೆ ಬೆಳಗಿನಿಂದ ಊಟವಾಗಿಲ್ಲವೆಂದು ಹೇಳಿರಲಿಲ್ಲ. ಮಕ್ಕಳ ಗೋಳಾಟವನ್ನು ನೋಡಲಾರದೆ ತಿಮ್ಮಣ್ಣನು ಒಂದು ಬಕ್ಕೆ ಹಲಸಿನ ಹಣ್ಣನ್ನು ಕತ್ತರಿಸಿ ಮಕ್ಕಳ ಮುಂದಿಟ್ಟನು. ಬರಗಾಲದ ಮಕ್ಕಳಂತೆ ಸ್ವಲ್ಪ ಹೊತ್ತಿನಲ್ಲೇ ಇಡೀ ಹಲಸಿನ ಹಣ್ಣನ್ನು ಮಕ್ಕಳು ಮುಗಿಸಿದರು.

ರಾತ್ರಿ ಊಟವಾದನಂತರ ಗಿರಿಯಪ್ಪಗೌಡರು ತಿಮ್ಮಣ್ಣನೊಡನೆ ತಮ್ಮ ಕುಟುಂಬದ ದಾರುಣ ಕತೆಯನ್ನು ಸವಿಸ್ತಾರವಾಗಿ ಹೇಳಿದರು. ತಿಮ್ಮಣ್ಣನಿಗೆ ಏನು ಮಾಡಬೇಕೆಂಬುದು ತೋಚಲಿಲ್ಲ. ತನ್ನ ಅಕ್ಕ ಭಾವಂದಿರ ಮೇಲೆ, ತನ್ನ ಹೆಂಡತಿ ಗೌರಮ್ಮನಿಗೆ ಪ್ರೀತಿ ವಿಶ್ವಾಸಗಳೆಷ್ಟಿತ್ತೆಂಬುದು ತಿಮ್ಮಣ್ಣನಿಗೆ ಸ್ಪಷ್ಟವಾಗಿಗೊತ್ತಿತ್ತು. ಅವಳ ಕಾಟದಲ್ಲಿ ಅವರು ತನ್ನ ಮನೆಯಲ್ಲಿ ಇರುವುದು ಕಷ್ಟವೆಂಬುದು ಅವನಿಗೆ ಗೊತ್ತಾಗಿತ್ತು. ಇಂದೋ ನಾಳೆಯೋ ಹಡೆಯಬೇಕಾಗಿದ್ದ ಅಕ್ಕನನ್ನು ಮತ್ತೆಲ್ಲಿಗೂ ಕಳುಹಿಸುವಂತಿರಲಿಲ್ಲ. ಅಂತೂ ತಿಮ್ಮಣ್ಣನು ಉಭಯಸಂಕಟದಲ್ಲಿ ಸಿಕ್ಕಿದ್ದನು. ಗಿರಿಯಪ್ಪಗೌಡರ ಕುಟುಂಬದಲ್ಲಿ ಉದ್ಭವಿಸಿದ್ದ

ವಿವಾದವನ್ನು ಊರಿನ ಅಥವಾ ಪಾಲಿನ ಮುಂದಾಳುಗಳು ಬಗೆಹರಿಸಬಹುದಾಗಿತ್ತು. ವಾಸ್ತವಿಕವಾಗಿ ಅಂತಹ ಹಲವು ವಿವಾದಗಳನ್ನು ಆ ಮುಂದಾಳುಗಳು ಹಿಂದೆ ಬಗೆಹರಿಸಿದ್ದರು. ಆದರೆ ಈ ವಿವಾದವು, ಪಾಲಿನ ಮುಖಂಡರೂ ಊರಿನ ಪಟೇಲರೂ ಆಗಿದ್ದ ಕಾಳೇಗೌಡರಿಗೆ ಸಂಬಂಧಪಟ್ಟುದಾಗಿತ್ತು. ಜೊತೆಗೆ ಉಳಿದ ಮುಖಂಡರು ಕಾಳೇಗೌಡರ ಆಪ್ತಸ್ನೇಹಿತರಾಗಿದ್ದರು. ಆದ್ದರಿಂದ ವಿವಾದವು ರಾಜಿಯಿಂದ ಇತ್ಯರ್ಥವಾಗುವ ಆಸೆಯಿರಲಿಲ್ಲ. ಆದರೂ ರಾಜಿಗಾಗಿ ಒಂದು ಪ್ರಯತ್ನವನ್ನು ಮಾಡಿಯೇ ತೀರಬೇಕೆಂದು ತಿಮ್ಮಣ್ಣನು ಯೋಚಿಸಿದನು. ಮರುದಿನ ಬೆಳಿಗ್ಗೆ ಅವನು ಪಂಜರವಳ್ಳಿಗೆ ಹೋಗಿ, ಸಾಹುಕಾರ್ ಬೆಳ್ಳೇಗೌಡರನ್ನೂ ಶಾನುಭೋಗ್ ತಿರುಮಲ ಭಟ್ಟರನ್ನೂ ಕಂಡು, ತನ್ನ ಭಾವನಿಗೊದಗಿದ ಕಷ್ಟವನ್ನು ವಿವರಿಸಿ, ಆತನಿಗೆ ನ್ಯಾಯವಾಗಿ ಸಲ್ಲತಕ್ಕ ಹಿಸ್ಸೆಯನ್ನು ಕಾಳೇಗೌಡರಿಂದ ಕೊಡಿಸಬೇಕೆಂದು ಪ್ರಾರ್ಥಿಸಿದನು. ಆ ವಿಷಯದಲ್ಲಿ ತಾವು ಎಷ್ಟು ಮಾತ್ರವೂ ಪ್ರವೇಶಿಸಲಾಗುವುದಿಲ್ಲವೆಂದು ಅವರಿಬ್ಬರೂ ಕಂಠೋಕ್ತವಾಗಿ ಹೇಳಿಬಿಟ್ಟರು. ತಿಮ್ಮಣ್ಣನಿಗೆ ದಿಕ್ಕೇ ತೋಚದಂತಾಯಿತು. ತನ್ನ ಅಕ್ಕನ ಕುಟುಂಬವನ್ನು ಕೆಲವು ಕಾಲ ತನ್ನ ಮನೆಯಲ್ಲಿಟ್ಟುಕೊಂಡು ಸಲಹಲು ಅವನು ಸಿದ್ಧನಾಗಿದ್ದನು. ಆದರೆ ಗೌರಮ್ಮನು ಸಿದ್ಧಳಾಗಿರಲಿಲ್ಲ. ತಿಮ್ಮಣ್ಣನು ದೃಢಕಾಯನಾದ ಆರೂವರೆ ಅಡಿ ಎತ್ತರದ ಆಜಾನುಬಾಹು ವ್ಯಕ್ತಿ. ಆ ಪ್ರದೇಶದಲ್ಲಿ ಅವನು ಉತ್ತಮ ಬೇಟೆಗಾರನೆಂದು ಹೆಸರು ಪಡೆದಿದ್ದನು. ಒಂದು ಸೇರಕ್ಕಿಯ ಅನ್ನ ಅವನಿಗೆ ಒಪ್ಪತ್ತಿಗೆ ಸಾಕಾಗುತ್ತಿತ್ತು. ನಾಟಿ ಮಾಡುವ ಕಾಲದಲ್ಲಿ ಒಂದು ಹಲಸಿನ ಹಣ್ಣನ್ನು ಒಬ್ಬನೇ ತಿನ್ನುತ್ತಿದ್ದನು. ಒಂದು ಗೊನೆ ಬಾಳೆಯಹಣ್ಣುಗಳನ್ನು ಕಾಲುಗಂಟೆಯೊಳಗಾಗಿ ಪೂರೈಸುತ್ತಿದ್ದನು. ಗೌರಮ್ಮನು ಕೃಶವಾದ ಶರೀರವುಳ್ಳವಳಾಗಿ, ಎತ್ತರದಲ್ಲಿ ತಿಮ್ಮಣ್ಣನ ಭುಜಕ್ಕೂ ಬರುತ್ತಿರಲಿಲ್ಲ. ಹೊರಗಡೆ ಹಲವರನ್ನು ಹೆದರಿಸುತ್ತಿದ್ದ ಭೀಮಸೇನನಂತಿದ್ದ ತಿಮ್ಮಣ್ಣನು ಮನೆಯಲ್ಲಿ ಮಾತ್ರ ಹೆಂಡತಿಗೆ ಹೆದರಿ ನಡುಗುತ್ತಿದ್ದನು. ಅವನ ಸ್ಥಿತಿ "ಅಕ್ಕನ ಕಂಡರೆ ಆಸೆ. ಹೆಂಡತಿ ಕಂಡರೆ ಭಯ" ಎನ್ನುವ ಹಾಗಿತ್ತು. ಅಕ್ಕನ ಹೆರಿಗೆಯಾಗುವವರೆಗೆ, ಕೆಲವು ಕಾಲ, ತನ್ನೊಡನೆ ಸಹಕರಿಸ ಬೇಕೆಂದು ಹೆಂಡತಿಯನ್ನು ದೈನ್ಯತೆಯಿಂದ ಕೇಳಿಕೊಂಡನು. ಗೌರಮ್ಮನು ಮೊದಲು ಸಿಡಿಮಿಡಿಗೊಂಡು ಕೊನೆಗೆ ನಿರ್ವಾಹವಿಲ್ಲದೆ ಅತ್ತಿಗೆಯ ಹೆರಿಗೆ ತನ್ನ ಮನೆಯಲ್ಲೇ ಆಗಬಹುದೆಂದು ಒಪ್ಪಿದಳು. ಇದಾದ ಎಂಟು ದಿನಗಳಲ್ಲಿ ಈರಮ್ಮನು ಗಂಡು ಮಗು ವೊಂದನ್ನು ಹಡೆದಳು. ಆದರೆ ಆ ಮಗು ಹುಟ್ಟಿದ ಸ್ವಲ್ಪ ಹೊತ್ತಿನಲ್ಲಿಯೇ ಸತ್ತುಹೋಯಿತು. ಹಿಂದಿನ ವರ್ಷ ಹುಟ್ಟಿದ ಮಗುವೂ ಅದೇ ರೀತಿಯಲ್ಲಿ ತೀರಿಕೊಂಡಿದ್ದಿತು. ಅಂದಿನ ಮಲೆನಾಡಿನಲ್ಲಿ ಮಲೇರಿಯಾ ರೋಗದ ಹಾವಳಿಯಿಂದ ಬಸುರಿಯಾದವಳು ಬಾಣಂತಿಯಾಗುತ್ತಾಳೆಂಬ ಭರವಸೆಯಿರಲಿಲ್ಲ. ಬಾಣಂತಿಯಾದವಳು ಬದುಕುತ್ತಾಳೆಂಬ ನಂಬುಗೆಯಿರಲಿಲ್ಲ. ಹುಟ್ಟಿದ ಮಕ್ಕಳಲ್ಲಿ ಅರೆವಾಸಿ ಸಾಯುತ್ತಿದ್ದವು.

ಸೈದಳ್ಳಿಗೆ ಬಂದ ನಂತರ ಒಂದು ತಿಂಗಳೊಳಗಾಗಿ ಗಿರಿಯಪ್ಪಗೌಡರಿಗೆ "ಮಡದಿ ಹುಟ್ಟಿದ ಮನೆಯೊಳಿರುವಾತ ಮೂರ್ಖ" ಎಂಬ ಗಾದೆಯ ಅರಿವು ಸಂಪೂರ್ಣವಾಗಿ

ಆಗಿತ್ತು. ದಿನಾರಾತ್ರಿ ಅವರು ತಮ್ಮ ಭವಿಷ್ಯವನ್ನು ಕುರಿತು ಯೋಚಿಸುತ್ತಿದ್ದರು. ಭಗವಂತನನ್ನು ಕುರಿತು ಸದಾ ಮೊರೆಯಿಡುತ್ತಿದ್ದರು. ಅಕ್ಕ ಭಾವಂದಿರು ಎಲ್ಲಿ ನೆಲೆಸಬೇಕೆಂಬ ಯೋಚನೆ ಸದಾ ತಿಮ್ಮಣ್ಣನನ್ನು ಬಾಧಿಸುತ್ತಿತ್ತು. ಪಂಜರವಳ್ಳಿ ಗ್ರಾಮದಲ್ಲಿ ತಿರುಮಲಭಟ್ಟರಿಗೆ ಸೇರಿದ್ದ ಐದು ಖಂಡಗ ಗದ್ದೆಯೂ, ನಾಲ್ಕುನೂರು ಮರಗಳ ಅಡಕೆಯ ತೋಟವೂ ಕೆಲವು ವರ್ಷಗಳಿಂದ ಒಕ್ಕಲುಗಳಿಲ್ಲದೆ ಪಾಳು ಬಿದ್ದಿದ್ದ ಸಂಗತಿ ಗಿರಿಯಪ್ಪಗೌಡರಿಗೆ ಗೊತ್ತಿತ್ತು. ಆ ಜಮೀನನ್ನು ಹಿಂದೆ ಸಾಗುವಳಿ ಮಾಡುತ್ತಿದ್ದ ಗೇಣಿದಾರನೂ, ಅವನ ಹೆಂಡತಿ ಮಕ್ಕಳೂ ನಾಲ್ಕೈದು ವರ್ಷಗಳ ಹಿಂದೆ ಒಂದೇ ದಿನ ಇದ್ದಕಿದ್ದ ಹಾಗೆ ವಾಂತಿ ಭೇದಿಯಿಂದ ಮೃತಪಟ್ಟಿದ್ದರು. ಮನೆಮಂದಿಯೆಲ್ಲಾ ಒಂದೇ ದಿನ ಸಾಯಬೇಕಾದರೆ ಜಮೀನಿನ ಮೇಲ್ಗಡೆ ಬನದಲ್ಲಿ ನೆಲಸಿದ್ದ ಜಟಗನ ಕಾಟವೇ ಕಾರಣವಾಗಿರಬೇಕೆಂದು ಊರಿನವರೆಲ್ಲರೂ ಆಡಿಕೊಳ್ಳುತ್ತಿದ್ದರು. ಆದ್ದರಿಂದ ದೆವ್ವದ ಆಳ್ವಿಕೆಗೆ ಒಳಗಾಗಿದ್ದ ಆ ಭೂಮಿಯನ್ನು ಸಾಗುವಳಿ ಮಾಡಲು ಯಾರೂ ಸಿದ್ಧರಾಗಿರಲಿಲ್ಲ. ಆದ್ದರಿಂದಲೇ ಆ ಭೂಮಿ ಪಾಳುಬಿದ್ದಿತ್ತು. ಗೌರಮ್ಮನ ಆಳ್ವಿಕೆಯಲ್ಲಿ ಬಾಳುವುದಕ್ಕಿಂತ ದೆವ್ವದ ಆಳ್ವಿಕೆಯಲ್ಲಿ ಬಾಳುವುದು ಲೇಸೆಂದು ಗಿರಿಯಪ್ಪಗೌಡರು ನಿರ್ಣಯಿಸಿದರು. ಈರಮ್ಮನ ಅಭಿಪ್ರಾಯವನ್ನು ಅವರು ಕೇಳಲಾಗಿ, ಆಕೆಯು "ಈ ಮನೇಲಿ ದೆಯ್ಯದ ಬಾಯಾಗೆ ಬೇಯೂ ಬದ್ಲು ಪಂಜ್ರೊಳ್ಳಿಗೆ ಜಟ್ಗಕ್ಕೆ ಹರ್ಕೆ ಹೊತ್ಕೊಂಡು ಅಲ್ಲೇ ಇರಾನ. ಹ್ಯಾಂಗಿದ್ರು ಆ ಗ್ಯದ್ದೆ ಮ್ಯಾಲೆ ಆ ಸತ್ತವಕ್ಕಲು ಕಟ್ದ ಮನೆವುಂದದೆ. ಅದಕ್ಕೇ ಹುಲ್ ಹೊಚ್ಗುಂಡು ಇರಾನ" ಎಂದಳು. ಗಿರಿಯಪ್ಪಗೌಡರು ತಾವು ಯೋಚಿಸಿದ್ದನ್ನು ತಿಮ್ಮಣ್ಣನಿಗೆ ತಿಳಿಸಿದರು; ಒಂದೇ ದಿನ ಇಡೀ ಕುಟುಂಬವನ್ನೇ ಆಹುತಿ ತೆಗೆದುಕೊಂಡಿದ್ದ ದೆವ್ವದ ಆವಾಸವಾಗಿದ್ದ ಸ್ಥಳಕ್ಕೆ ತನ್ನ ಅಕ್ಕನನ್ನೂ ಭಾವನನ್ನೂ ಕಳುಹಿಸುವುದು ತಿಮ್ಮಣ್ಣನಿಗೆ ಸಮಾಧಾನಕರವಾಗಿರಲಿಲ್ಲ. ಆದರೆ ಗೌರಮ್ಮನ ಊಟಕ್ಕಿಂತ ಜಟಗನ ಕಾಟವೇ ಲೇಸೆಂದು ಅವನೂ ಸಹ ಯೋಚಿಸಿ, ಗಿರಿಯಪ್ಪಗೌಡರ ಸೂಚನೆಯನ್ನು ಒಪ್ಪಿದನು. ಮರುದಿನ ಭಾವಮೈದುನರಿಬ್ಬರೂ ತಿರುಮಲಭಟ್ಟರಲ್ಲಿಗೆ ಹೋಗಿ ಪಾಳು ಬಿದ್ದಿದ್ದ ಗದ್ದೆ ತೋಟಗಳನ್ನು ಗೇಣಿಗೆ ಕೊಡಬೇಕೆಂದು ಕೇಳಿದರು. ಯಾರೂ ಕೇಳದಿದ್ದ ಭೂಮಿಗೆ ಗೇಣಿದಾರನೊಬ್ಬನು ಸಿಕ್ಕನೆಂದು ಭಟ್ಟರಿಗೆ ತುಂಬಾ ಸಂತೋಷವಾಯಿತು. ಮರುಮಾತನಾಡದೆ ಜಮೀನನ್ನು ಗಿರಿಯಪ್ಪಗೌಡರಿಗೆ ಗೇಣಿಗೆ ಕೊಡುವುದಾಗಿ ಒಪ್ಪಿದರು. ಜಮೀನು ಅಪರೂಪವಾಗಿದ್ದರಿಂದ ನಾಲ್ಕು ಮಣ ಅಡಕೆಯನ್ನೂ, ಹತ್ತು ಖಂಡುಗ ಬತ್ತವನ್ನೂ ಗೇಣಿದಾರನು ಗೇಣಿಗಾಗಿ ಸಾಲೀಯಾನ ಕೊಡಬೇಕೆಂದು ಬಾಯಿಮಾತಿನ ಒಪ್ಪಂದವಾಯಿತು.

ತಿಮ್ಮಣ್ಣನೂ ಗಿರಿಯಪ್ಪಗೌಡರೂ ಸೇರಿ, ತಿರುಮಲ ಭಟ್ಟರ ಜಮೀನಿನ ಮೇಲ್ಗಡೆಯಿದ್ದ ಹಿಂದಿನ ಗೇಣಿದಾರನು ಕಟ್ಟಿದ್ದ ಹುಲ್ಲು ಗುಡಿಸಲನ್ನು ದುರಸ್ತು ಮಾಡಿದರು. ದುರಸ್ತಿನ ಕೆಲಸಕ್ಕೆ ಬೇಕಾಗಿದ್ದ ಅಡಕೆಯ ದಬ್ಬೆ, ಬಿದಿರುಗಳ, ಹುಲ್ಲು ಮುಂತಾದ ಸಾಮಾನುಗಳನ್ನೂ, ಮೂರು ತಿಂಗಳಿಗಾಗುವಷ್ಟು ಕುಚ್ಚಲಕ್ಕಿಯನ್ನೂ,

ಅಡುಗೆ ಮಾಡುವುದಕ್ಕೆ ಅವಶ್ಯಕವಾಗಿ ಬೇಕಾಗಿದ್ದ ಮಣ್ಣಿನ ಮಡಕೆಗಳನ್ನೂ, ನೀರನ್ನು ಕಾಯಿಸುವ ತಾಮ್ರದ ಹಂಡೆಯೊಂದನ್ನೂ ತಿಮ್ಮಣ್ಣನು ಗೌರಮ್ಮನ ಇಷ್ಟಕ್ಕೆ ವಿರುದ್ಧವಾಗಿ ತನ್ನ ಅಕ್ಕನಿಗೆ ಕೊಟ್ಟಿದ್ದನು. ಹೂಟೆಗೋಸ್ಕರ ಒಂದು ಜೊತೆ ಎತ್ತುಗಳನ್ನೂ ಸಹ ಕಡವಾಗಿ ಕೊಟ್ಟಿದ್ದನು. ಒಂದು ಒಳ್ಳೆಯ ಮೂಹೂರ್ತವನ್ನು ನೋಡಿ ಗಿರಿಯಪ್ಪಗೌಡರೂ ಈರಮ್ಮನೂ ಮಕ್ಕಳ ಸಮೇತ ಮನೆ ಒಕ್ಕಲಾದರು. ಮನೆ ಒಕ್ಕಲಾದ ದಿನವೇ, ಜಟಗನಿಗೆ ಒಂದು ಕೋಳಿಯ ಹುಂಜವನ್ನು ಸುಳಿದುಬಿಟ್ಟು, ಮುಂದಿನ ಮುಂಗಾರು ಮಳೆ ಹತ್ತುವುದರೊಳಗೆ ಹರಕೆ ಮಾಡುವುದಾಗಿ ಹೇಳಿಕೊಂಡರು. ಆ ಸಮಯಕ್ಕೆ ಊರಲ್ಲೆಲ್ಲಾ ನಾಟಿ ಕೆಲಸವನ್ನು ರೈತರು ಪ್ರಾರಂಭಿಸಿ, ಅರೆವಾಸಿ ನಾಟಿ ಕೆಲಸವನ್ನು ಆಗಲೇ ಪೂರೈಸಿದ್ದರು. ಜಡ್ಡು ಬಿದ್ದಿದ್ದ ಗದ್ದೆಯನ್ನು ಸಾಗುಮಾಡುವುದು ಗಿರಿಯಪ್ಪಗೌಡರಿಗೆ ಒಂದು ಸಮಸ್ಯೆಯೇ ಆಗಿತ್ತು.

ಅವರಲ್ಲಿ ನಾಟಿ ಮಾಡುವ ಸಸಿಯೂ ಇರಲಿಲ್ಲ; ಕೆಲಸ ಮಾಡುವ ಜನವೂ ಇರಲಿಲ್ಲ. ಈರಮ್ಮನು ಹಡೆದು ಇನ್ನೂ ಒಂದು ತಿಂಗಳೂ ಸಹ ಆಗಿರಲಿಲ್ಲ. ಅವಳೂ ಸಹ ಕೆಲಸ ಮಾಡುವುದು ಅವಶ್ಯಕವಾಗಿತ್ತು. ಬಡತನದ ಬಸಿರು ಹೆರಿಗೆಗಳಿಗೆ ಬಯಕೆ ಆರೈಕೆಗಳೆಲ್ಲಿ? ಗಿರಿಯಪ್ಪಗೌಡರೂ ಈರಮ್ಮನೂ ಮುಯ್ಯಾಳಿನ ಕೆಲಸಕ್ಕಾಗಿ ಬೇರೆ ಒಕ್ಕಲುಗಳ ಜಮೀನಿಗೆ ಹೋಗಿ ಕೆಲಸ ಮಾಡುತ್ತಿದ್ದರು. ಈ ಒಕ್ಕಲುಗಳು ಇವರು ಮಾಡಿದ್ದ ಕೆಲಸಕ್ಕೆ ಪ್ರತಿಯಾಗಿ ಇವರ ಗದ್ದೆಯಲ್ಲಿ ಕೆಲಸ ಮಾಡುತ್ತಿದ್ದರು. ಮುಯ್ಯಾಳುಗಳ ಸಹಾಯದಿಂದಲೂ, ತಿಮ್ಮಣ್ಣನ ಸಹಾಯದಿಂದಲೂ ಹಾಳು ಬಿದ್ದಿದ್ದ ಗದ್ದೆಯನ್ನು ಸಾಗುಮಾಡಿದರು. ಅಡಕೆಯ ತೋಟದಲ್ಲಿ ಕೊಳೆ ರೋಗಕ್ಕಾಗಿ ಎಳೆ ಗೊನೆಗಳಿಗೆ ಹಾಳೆಯ ಕೊಟ್ಟೆಗಳನ್ನು ಕಟ್ಟಬೇಕಾಗಿತ್ತು. ಗಿರಿಯಪ್ಪಗೌಡರಿಗೆ ಅದೊಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತು. ಕೊಟ್ಟೆಗಳನ್ನು ಕಟ್ಟುವ ವ್ಯಕ್ತಿ ಅಡಕೆಯ ಮರಗಳನ್ನೇರಿ ಒಂದು ಮರದಿಂದ ಇನ್ನೊಂದು ಮರಕ್ಕೆ ಕೋತಿಯಂತೆ ನೆಗೆಯಬೇಕಾಗುತ್ತದೆ. ಗಿರಿಯಪ್ಪಗೌಡರಿಗೆ ಅಡಕೆಯ ಮರಗಳನ್ನು ಹತ್ತುವ ಅಭ್ಯಾಸವಿರಲಿಲ್ಲ. ನಿರ್ವಾಹವಿಲ್ಲದೆ ಗೌಡರು ಅಡಕೆಯ ಮರಗಳನ್ನು ಹತ್ತುವ ಅಭ್ಯಾಸ ಮಾಡಿ ಕೊಟ್ಟೆಗಳನ್ನು ಕಟ್ಟಿದರು. ಗಂಡ ಹೆಂಡಿರಿಬ್ಬರೂ ಒಂದು ಸಾಹಸದ ಕಾರ್ಯವನ್ನೇ ಕೆಲವು ತಿಂಗಳ ಅವಧಿಯಲ್ಲಿ ಸಾಧಿಸಿದ್ದರು. ಭೂಮಾಲೀಕರಾಗಿದ್ದವರು ಗೇಣಿದಾರರಾಗಿ, ಹುಲ್ಲು ಜೋಪಡಿಯಲ್ಲಿ ಜೀವಿಸಿ, ಊಳಿಗದ ಆಳುಗಳಂತೆ ದುಡಿದು, ಭೂಮಿಯನ್ನು ಉಳುಮೆ ಮಾಡಿದ್ದು ಸಣ್ಣ ಸಾಹಸವಾಗಿರಲಿಲ್ಲ. ಅನಿರೀಕ್ಷಿತವಾಗಿ ಬಂದೊದಗಿದ್ದ ಆಪತ್ತನ್ನು ಇಬ್ಬರೂ ದಿಟ್ಟತನದಿಂದ ಎದುರಿಸಿದ್ದರು. ತೋಟದ ಮತ್ತು ಗದ್ದೆಯ ಕೆಲಸ ಸಮರ್ಪಕವಾಗಿ ಸಾಗಿದ್ದುದು ಅವರಿಗೆ ಬಹಳ ಸಮಾಧಾನಕರವಾಗಿತ್ತು. ತಮ್ಮ ಬಾಳು ಹೊಸ ಹಾದಿಯೊಂದನ್ನು ಹಿಡಿಯಿತೆಂದು ಅವರಿಬ್ಬರೂ ತೃಪ್ತಿಪಟ್ಟಿದ್ದರು. ಆದರೆ ಆ ತೃಪ್ತಿ ಬಹಳಕಾಲ ಉಳಿಯಲಿಲ್ಲ.

ಗಿರಿಯಪ್ಪಗೌಡರೂ, ಈರಮ್ಮನೂ ಗದ್ದೆಯ ಅಥವಾ ತೋಟದ ಕೆಲಸಕ್ಕೆ ಹೋದಾಗ ಹಿರಿಯ ಮಗ ಸಿದ್ದಣ್ಣನು ಮನೆಯಲ್ಲಿದ್ದುಕೊಂಡು ಉಳಿದ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದನು. ಒಮ್ಮೊಮ್ಮೆ ತೋಟ ಗದ್ದೆಗಳಲ್ಲಿ ಕೆಲಸ ಹೆಚ್ಚಾಗಿದ್ದಾಗ ಸಿದ್ದಣ್ಣನೂ ಸಹ ತಂದೆ ತಾಯಿಗಳೊಡನೆ ತೋಟ ಗದ್ದೆಗಳಿಗೆ ಹೋಗಬೇಕಾಗಿತ್ತು. ಅಂತಹ ಸಂದರ್ಭಗಳಲ್ಲಿ ಸುಬ್ಬಿಯು ಉಳಿದ ಮಕ್ಕಳ ಪೋಷಕಗಳಾಗುತ್ತಿದ್ದಳು. ಬಡವರ ಬಾಳು ಯಾವಾಗಲೂ ಬಹಳ ಕಷ್ಟ. ಅಂದಿನ ಕಾಲದಲ್ಲಿ ಅವರ ಬಾಳು ಇನ್ನೂ ಕಷ್ಟವಾಗಿತ್ತು. ಐದು ವರ್ಷದ ಹುಡುಗಿಯೊಬ್ಬಳು ತನಗಿಂತ ಚಿಕ್ಕವರಾಗಿದ್ದ ಮೂರು ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವ ಹೊಣೆಯನ್ನು ನೋಡಿಕೊಳ್ಳಬೇಕಾಗಿತ್ತು. ಒಂದು ದಿನ ಅಡಿಕೆಯ ತೋಟದಲ್ಲಿ ಕಳೆಯನ್ನು ಕೀಳುವ ಸಲುವಾಗಿ ಗಿರಿಯಪ್ಪಗೌಡರೂ ಈರಮ್ಮನೂ ಸಿದ್ದಣ್ಣನನ್ನು ಕರೆದುಕೊಂಡು ತೋಟಕ್ಕೆ ಹೋಗಿದ್ದರು. ತೋಟವು ಮನೆಯಿಂದ ಒಂದೂವರೆ ಮೈಲಿ ದೂರದಲ್ಲಿತ್ತು. ಕಾಲು ದಾರಿಯಲ್ಲೇ ಕಾಡಿನ ಪಕ್ಕದಲ್ಲಿ ಹೋಗಬೇಕಾಗಿತ್ತು. ಮನೆಯನ್ನು ಬಿಡುವಾಗ ಈರಮ್ಮನು ಮಗಳು ಸುಬ್ಬಿಯನ್ನು ಕರೆದು, "ಸುಬ್ಬೀ, ಹುಡ್ಗೂರನ್ನ ಮನೆ ಹೊರ್ಗೆ ಬಿಡ್ಬ್ಯಾಡ, ಗೊತ್ತಾತ? ನಂಗ್ಯಾಕೋ ಯಲ್ಡ್‌ದಿನ್ದಿಂದ ಬಲ್ದ ಕಣ್ಣು ಕುಣೀತದೆ, ಜ್ವಾಕೆ" ಎಂದು ಹೇಳಿ ತೋಟಕ್ಕೆ ಹೋಗಿದ್ದಳು.

ತಂದೆ ತಾಯಿಗಳು ಮನೆಯನ್ನು ಬಿಟ್ಟೊಡನೆ ಚಿಕ್ಕ ಮಗು ಅಳಲಾರಂಭಿಸಿತು. ಸುಬ್ಬಿಯು ಆ ಮಗುವನ್ನು ಒಳಗೆ ಕರೆದುಕೊಂಡು ಹೋಗಿ ಅದನ್ನು ಮಲಗಿಸುವ ಪ್ರಯತ್ನ ಮಾಡುತ್ತಿದ್ದಳು. ಆ ಸಮಯದಲ್ಲಿ ಜಗಲಿಯ ಮೇಲಿದ್ದ ಪುಟ್ಟನು ಅಲ್ಲಿಂದ ತಪ್ಪಿಸಿಕೊಂಡು ಸುಬ್ಬಿಗೆ ಗೊತ್ತಾಗದ ಹಾಗೆ ತಂದೆ ತಾಯಿಗಳು ಹೋದ ತೋಟದ ಹಾದಿಯನ್ನು ಹಿಡಿದು ಹೊರಟನು. ಸ್ವಲ್ಪ ದೂರ ಹೋದನಂತರ ಅವನು ತಾಯಿಯನ್ನು ಕುರಿತು ಹಲವು ಬಾರಿ "ಅವ್ವಾ ನಾನೂ ಬತ್ತೀನಿ" ಎಂದು ಕೂಗಿದನು. ತಂದೆ ತಾಯಿಗಳು ಆಗಲೇ ಬಹಳ ದೂರ ಹೋಗಿದ್ದರಿಂದ ಪುಟ್ಟನ ಕೂಗು ಅವರಿಗೆ ಕೇಳಿಸಲೇ ಇಲ್ಲ. ಪುಟ್ಟನು ಅಳುತ್ತಾ ದಾರಿಯಲ್ಲಿ ಮುಂದೆ ಮುಂದೆ ಸಾಗಿದನು. ಸುಮಾರು ಅರ್ಧ ಮೈಲಿ ನಡೆದ ನಂತರ ಅವನು ತೋಟಕ್ಕೆ ಹೋಗುವುದನ್ನು ಬಿಟ್ಟು ಕಾಡಿಗೆ ಹೋಗುವ ಜಾನುವಾರುಗಳು ಮತ್ತು ಕಾಡು ಮೃಗಗಳು ಓಡಾಡುವ ಜಾಡನ್ನು ಹಿಡಿದನು. ಕಾಡಿನೊಳಗೆ ಹೋದನಂತರ ಅವನಿಗೆ ಮುಂದಕ್ಕೂ ಹೋಗಲಾಗಲಿಲ್ಲ: ಹಿಂದಕ್ಕೂ ಬರಲಾಗಲಿಲ್ಲ. ಗಟ್ಟಿಯಾಗಿ ರೋಧಿಸತೊಡಗಿದನು. ಬಹಳ ಹೊತ್ತು ರೋಧಿಸಿದನು. ಕವಿಗಳೂ ಸಾಹಿತಿಗಳೂ, ಅರಣ್ಯವನ್ನು ವನದೇವತೆಯೆಂದು ವರ್ಣಿಸಿದ್ದಾರೆ. ಮುಗ್ಧ ಬಾಲಕನ ಆರ್ತನಾದ ಆ ವನದೇವತೆಯ ಕಿವಿಗೆ ಕೇಳಿಸಲೇ ಇಲ್ಲ. ವನದೇವತೆಯ ಆಶ್ರಯದಲ್ಲಿ ಜೀವಜಂತುಗಳಲ್ಲಿ ಬಲಿಷ್ಠವಾದವು ಮಾತ್ರ ಬಾಳಬಲ್ಲವು.

ಹುಡುಗನು ಬಿಕ್ಕಿ ಬಿಕ್ಕಿ ಅಳುತ್ತಿದ್ದನು. ಕವಿಗಳು ವರ್ಣಿಸಿದ ಅರಣ್ಯದ ತರುಲತೆಗಳಾಗಲಿ, ತಂಗಾಳಿಯ ತಂಪಾಗಲೀ, ಹಕ್ಕಿಗಳ ಕಲರವವಾಗಲೀ, ಪುಟ್ಟನಿಗೆ ಶಾಂತಿಯನ್ನು ನೀಡಿ, ಅವನ ಅಳುವನ್ನು ನಿಲ್ಲಿಸಲಿಲ್ಲ. ಅಳುತ್ತಿದ್ದ ಶಬ್ದವನ್ನು ಕೇಳಿ

ಗಾಯಗೊಂಡಿದ್ದ ಹುಲಿಯೊಂದು ಅವನಿದ್ದೆಡೆಗೆ ಧಾವಿಸಿ ಬರುತ್ತಿತ್ತು. ತಾಯಿಯನ್ನು ಬಯಸಿ ತಾಯಿಯ ಜೊತೆಯಲ್ಲಿರಬೇಕೆಂದು ಹೊರಟ ಕೋಮಲ ಪುಟ್ಟನು ಹಸಿದ ಹುಲಿಗೆ ಆಹಾರವಾಗುತ್ತಾನೆಂದು ಯಾರು ತಾನೆ ಕಂಡಿದ್ದರು!

ಪಂಜರವಳ್ಳಿಗೆ ಎಂಟು ಹತ್ತು ಮೈಲಿ ದೂರವಿರುವ ಮುತ್ತುಗದೂರೆಂಬ ಸ್ಥಳದಲ್ಲಿ ರೈತನೊಬ್ಬನು ಕಾಡು ಹಂದಿಯನ್ನು ಕೊಲ್ಲಬೇಕೆಂಬ ಉದ್ದೇಶದಿಂದ ತನ್ನ ಒಂಟಿನಲ್ಲಿ ಕೇಪಿನ ಕೋವಿಯನ್ನು ಶಿಸ್ತುಕಟ್ಟಿದ್ದನು. ಆ ರೈತನ ಗದ್ದೆಗೆ ಕೆಲವು ದಿನಗಳಿಂದ ರಾತ್ರಿಯ ಹೊತ್ತು ದೊಡ್ಡ ಕಾಡು ಹಂದಿಯೊಂದು ಬಂದು ಬತ್ತದ ಕೆವಿಯನ್ನು ನಾಶಪಡಿಸುತ್ತಿದ್ದಿತು. ಅದರ ಗೊರಸಲಿನ ಗುರುತುಗಳನ್ನು ನೋಡಿ, ಅದು ಓಡಾಡುವ ಜಾಡನ್ನು ಕಂಡು ಹಿಡಿದು ಒಂದು ದಿನ ಸಾಯಂಕಾಲ ಆ ರೈತನು ತನ್ನ ಒಂಟಿನಲ್ಲಿ ಕೇಪಿನ ಕೋವಿಯನ್ನು ಶಿಸ್ತುಕಟ್ಟಿದ್ದನು. ಬೇಟೆಗಾರರು ಬೇಟೆಯಾಡುವಾಗ ಹಲವು ವಿಧಾನಗಳನ್ನು ಅನುಸರಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಏಕಾಂಗಿಯಾಗಿ ಮೃಗಗಳು ಓಡಾಡುವ ಹಾದಿಯಲ್ಲಿ ಕಾದು ನಿಂತು ಬೇಟೆಯಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಮರಗಳ ಮೇಲೆ ಕುಳಿತು ಷಿಕಾರಿ ಮಾಡುತ್ತಾರೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಬೇಟೆಗಾರರು ಸಾಮೂಹಿಕವಾಗಿ ಮೃಗಗಳು ಆಯಕಟ್ಟಿನ ಸ್ಥಳಕ್ಕೆ ಅಟ್ಟಿಸಿಕೊಂಡು ಹೋಗಿ, ಅಲ್ಲಿ ಅವುಗಳನ್ನು ಕೊಲ್ಲುವ ವ್ಯವಸ್ಥೆ ಮಾಡುತ್ತಾರೆ. ಇನ್ನೂ ಕೆಲವು ಸಂದರ್ಭಗಳಲ್ಲಿ ಶಿಸ್ತು ಕಟ್ಟುತ್ತಾರೆ. ಮೃಗಗಳನ್ನು ಓಡಾಡುವ ಜಾಡನ್ನು ನೋಡಿ ಆ ಜಾಡಿಗಡ್ಡಲಾಗಿ ನೆಲದಲ್ಲಿ ಗೂಟಗಳನ್ನು ನೆಟ್ಟು, ಕೋವಿಯ ಬಾಯಿ ಮೃಗಗಳು ಬರುವ ದಾರಿಯ ಕಡೆಗಿರುವಂತೆ ಮಾಡಿ, ಕೋವಿಯನ್ನು ಗೂಟಗಳ ಮೇಲಿಟ್ಟು, ಬಳ್ಳಿಗಳಿಂದ ಅದನ್ನು ಕಟ್ಟಿ ಕೋವಿಯ ಬಿಲ್ಲಿಗೆ ಸಂಪರ್ಕವಿರುವಂತೆ ಮೃಗ ಬರುವ ದಾರಿಗೆ ಅಡ್ಡಲಾಗಿ ಉದ್ದವಾದ ಸೂತ್ರಬಳ್ಳಿಯೊಂದನ್ನು ಕಟ್ಟುತ್ತಾರೆ. ಸೂತ್ರದ ಬಳ್ಳಿಯನ್ನು ಮೃಗ ಎಡವಿದೊಡನೆ ಶಬೆ ಸಿಡಿದು ಬಿಲ್ಲು ತನ್ನಷ್ಟಕ್ಕೆ ತಾನೆ ಅಮುಕುವಂತಾಗುವ ವ್ಯವಸ್ಥೆ ಮಾಡುತ್ತಾರೆ. ಇಷ್ಟು ವ್ಯವಸ್ಥೆಯಾದ ನಂತರ ಕೋವಿಯ ಕುದುರೆಯನ್ನು ಮೇಲಕ್ಕೆ ಏರಿಸಿ ಇಡುತ್ತಾರೆ. ಮೃಗ ಗೊತ್ತಿಲ್ಲದೆ ಬಳ್ಳಿಯನ್ನೆಡವಿ ತಕ್ಷಣ ಬಳ್ಳಿ ಎಳೆಯಲ್ಪಟ್ಟು ಆ ಕೂಡಲೇ ಬಿಲ್ಲು ತನ್ನಷ್ಟಕ್ಕೆ ತಾನೇ ಮಿಂಟಿ ಆ ಕ್ಷಣ ಗುಂಡು ಹಾರುತ್ತದೆ. ಈ ವ್ಯವಸ್ಥೆಗೆ 'ಶಿಸ್ತು' ಎಂದು ಕರೆಯುತ್ತಾರೆ.

ಮುತ್ತುಗದೂರಿನ ರೈತನು ಶಿಸ್ತು ಕಟ್ಟಿದ್ದ ಕೋವಿಯ ಈಡಿಗೆ ಆ ದಿನ ರಾತ್ರಿ ಹಂದಿ ಸಿಕ್ಕುವ ಬದಲು ಹುಲಿ ಸಿಕ್ಕಿದ್ದಿತು. ನಡುರಾತ್ರಿಯಲ್ಲಿ ಹುಲಿಯೊಂದು ಕಾಡಿನಲ್ಲಿ ಸುತ್ತಾಡುತ್ತಿದ್ದಾಗ ಗೊತ್ತಿಲ್ಲದೆ ಶಿಸ್ತಿನ ಬಳ್ಳಿಯನ್ನು ಎಡವಿತ್ತು. ತಕ್ಷಣ ಗುಂಡು ಹಾರಿತು. ಗುಂಡು ಹಾರಿದೊಡನೆ ಕಾಡು ಮೊಳಗುವಂತೆ ಹುಲಿಯು ಗರ್ಜಿಸಿತು. ಮನೆಯಲ್ಲಿ ಮಲಗಿದ್ದ ಮುತ್ತುಗದೂರು ರೈತನಿಗೆ ತಾನು ಕಟ್ಟಿದ್ದ ಶಿಸ್ತಿಗೆ ಹುಲಿ ಸಿಕ್ಕಿರಬೇಕೆಂದು ಗೊತ್ತಾಯಿತು. ಕೆಲವು ನಿಮಿಷಗಳಲ್ಲೇ ಶಿಸ್ತು ಕಟ್ಟಿದ್ದ ಸ್ಥಳದಲ್ಲಿದ್ದ ಮರ ಗಿಡಗಳೆಲ್ಲಾ ಬುಡಮೇಲಾದವಂತೆ ಶಬ್ದವಾಯಿತು. ಹುಲಿಯ ಹಿಂಭಾಗದ ಎಡಗಾಲಿಗೆ ಸೊಂಟದ

ಕೆಳಗೆ ಗುಂಡಿನೇಟು ತಗುಲಿತ್ತು. ರೈತನು ಹೊತ್ತಾರೆ ಎದ್ದು ಶಿಸ್ತು ಕಟ್ಟಿದ್ದ ಸ್ಥಳಕ್ಕೆ ಹೋದನು. ಶಿಸ್ತಿನ ಬಳ್ಳಿಯಿದ್ದೆಡೆಯಲ್ಲಿ ತರಗೆಲೆಗಳ ಮೇಲೆ ರಕ್ತದ ಧಾರೆ ಹರಿದು ಹೆಪ್ಪುಗಟ್ಟಿತ್ತು. ಅಲ್ಲಿಂದ ರಕ್ತ ಸುರಿದ ಜಾಡು ಕಾಡಿನಲ್ಲಿ ಬಹಳ ದೂರ ಹೋಗಿತ್ತು. ಹುಲಿಯನ್ನು ಹುಡುಕುವ ಧೈರ್ಯ ರೈತನಿಗಿರಲಿಲ್ಲ. ಗಾಯದ ಹುಲಿಯ ನೆಲೆಯನ್ನು ಹುಡುಕುವುದು ಸಾವಿನ ನೆಲೆಯನ್ನು ಹುಡುಕಿದಂತೆ. ಈ ವಿಚಾರ ರೈತರಿಗೆ ಗೊತ್ತಿತ್ತು. ಆದ್ದರಿಂದ ಹುಲಿಯನ್ನು ಹುಡುಕುವ ಗೋಜಿಗೆ ಹೋಗದೆ ತೆಪ್ಪಗೆ ಅವನು ಮನೆಗೆ ತೆರಳಿದನು.

ಗಾಯಗೊಂಡ ಹುಲಿಯ ವಿಚಾರದಲ್ಲಿ ಊರಿನ ಜನರೂ ಆಸಕ್ತಿ ವಹಿಸಿರಲಿಲ್ಲ. ಗುಂಡಿನೇಟಿನಿಂದ ಹುಲಿಯ ಹಿಂಭಾಗದ ಕಾಲಿನ ಮೂಳೆ ಮುರಿದು ಹೋಗಿತ್ತು. ಆದರೆ ಪ್ರಾಣಾಪಾಯವಾಗುವಷ್ಟು ಗಾಸಿಯಾಗಿರಲಿಲ್ಲ. ರಕ್ತಸ್ರಾವದಿಂದ ಅದಕ್ಕೆ ನಿತ್ರಾಣವಾಗಿತ್ತು. ಹುಲಿ, ಮೂರೇ ಕಾಲುಗಳಲ್ಲಿ ಕುಂಟಿಕೊಂಡು, ಊರಿನ ಸಮೀಪವಿರುವ ಕಾಡಿನಲ್ಲಿ ಸೇರಿಕೊಂಡಿತ್ತು. ಎರಡು ಮೂರು ದಿನಗಳು ಕಾಡು ಪ್ರಾಣಿಗಳನ್ನು ಬೇಟೆಯಾಡುವ ಪ್ರಯತ್ನವನ್ನು ಅದು ಮಾಡಿತ್ತು. ಒಂದು ಕಾಲು ಮುರಿದದ್ದರಿಂದ ಅದಕ್ಕೆ ಎಂದಿನಂತೆ ಮೃಗಗಳನ್ನು ಕೊಲ್ಲುವ ಶಕ್ತಿಯಿರಲಿಲ್ಲ. ಕಾಡು ಪ್ರಾಣಿಗಳನ್ನು ಕೊಲ್ಲುವ ಪ್ರಯತ್ನ ಸಫಲವಾಗದೆ ಹೋದದ್ದರಿಂದ ಹುಲಿಯ ಗಮನ ಊರಿನ ಜಾನುವಾರುಗಳ ಕಡೆಗೆ ಹರಿದಿತ್ತು. ಜಾನುವಾರುಗಳನ್ನು ಹಿಡಿಯುವ ಉದ್ದೇಶದಿಂದ ಅದು ಜಾನುವಾರುಗಳು ಓಡಾಡುವ ದಾರಿಯ ಪಕ್ಕದಲ್ಲಿ ಅವಿತುಕೊಂಡಿತ್ತು. ಹಾಗೆಯೇ ಕುಳಿತಿದ್ದಾಗ ಅದರ ದೃಷ್ಟಿ ದೂರದಲ್ಲಿ ಒಂದು ಮರವನ್ನೇರಿ ಮರದ ಹರೆಯನ್ನು ಕಡಿಯುತ್ತಿದ್ದ ವ್ಯಕ್ತಿಯೊಬ್ಬನ ಮೇಲೆ ಬಿದ್ದಿತು. ಗುಂಡಿನೇಟಿನ ಗಾಯ ಇನ್ನೂ ಬಾಡಿರಲಿಲ್ಲ. ಗಾಯದಲ್ಲಿ ಹುಳುಗಳಾಗಿ ಅವು ಹುಲಿಗೆ ಬಹಳ ಯಾತನೆಯನ್ನು ಕೊಡುತ್ತಿದ್ದುವು. ಸಾಲದುದಕ್ಕೆ ಮೂರುನಾಲ್ಕು ದಿನಗಳಿಂದ ಅದಕ್ಕೆ ಆಹಾರವಿರಲಿಲ್ಲ. ಜೊತೆಗೆ ತನ್ನ ಅಂದಿನ ದುರವಸ್ಥೆಗೆ ಮನುಷ್ಯರೇ ಕಾರಣರೆಂಬ ಭಾವನೆ ಅದರ ಮನಸ್ಸಿನಲ್ಲಿ ನಾಟಿತ್ತು. ಮನುಷ್ಯರ ಮೇಲೆ ಯಾವ ರೀತಿಯಲ್ಲಿ ಸೇಡನ್ನು ತೀರಿಸಿಕೊಳ್ಳಬೇಕೆಂಬ ಯೋಚನೆಯೂ ಸಹ ಅದರ ತಲೆಯಲ್ಲಿ ಹೊಳೆದಿರಬೇಕೆಂದು ತೋರುತ್ತದೆ. ಅದು ತನ್ನ ಮನಸ್ಸಿನಲ್ಲಿ ಏನೇನು ಯೋಚಿಸಿತ್ತೆಂಬುದು ದೇವರೊಬ್ಬನಿಗೆ ಗೊತ್ತು. ಅಂತೂ ಅದು ತಾನು ಕುಳಿತಿದ್ದ ಸ್ಥಳವನ್ನು ಬಿಟ್ಟು ಮೆಲ್ಲಗೆ ಆ ವ್ಯಕ್ತಿಯಿದ್ದ ಮರದ ಸಮೀಪಕ್ಕೆ ಅವನಿಗೆ ಕಾಣಿಸದಂತೆ ಹೋಗಿ, ಮರದ ಕೆಳಗೆ ಒಂದು ಸಣ್ಣ ಪೊದೆಯಲ್ಲಿ ಅವಿತುಕೊಂಡಿತ್ತು. ಮರದ ಮೇಲಿದ್ದ ವ್ಯಕ್ತಿ ಮುತ್ತುಗದೂರ ಪಟೇಲರ ಆಳು ಕರಾಜೆಯ ತುಕ್ರನಾಗಿದ್ದ, ಅವನು ಪಟೇಲರ ದನಗಳ ಕೊಟ್ಟಿಗೆಗೆ ಸೊಪ್ಪನ್ನು ಕೊಂಡೊಯ್ಯುವ ಉದ್ದೇಶದಿಂದ ಮರವನ್ನೇರಿ ಹರೆಗಳನ್ನು ಕಡಿಯುತ್ತಿದ್ದನು. ತನಗೆ ಬೇಕಾಗುವಷ್ಟು ಹರೆಗಳನ್ನು ಕಡಿದನಂತರ ತುಕ್ರನು ಕತ್ತಿಯನ್ನು ತನ್ನ ಸೊಂಟದಲ್ಲಿದ್ದ ಒಡ್ಯಾಣಕ್ಕೆ ಸಿಕ್ಕಿಸಿ ಮರದಿಂದ ಕೆಳಕ್ಕಿಳಿಯುತ್ತಿದ್ದನು. ಪೊದೆಯಲ್ಲಿದ್ದ ಹುಲಿ ಅವನು ಇಳಿಯುತ್ತಿರುವುದನ್ನು ನೋಡುತ್ತಲೇ ಇತ್ತು. ಇನ್ನೇನು

ತುಕ್ರನ ಕಾಲುಗಳು ಭೂಮಿಯನ್ನು ಮುಟ್ಟತ್ತವೆಯೆನ್ನುವಷ್ಟರಲ್ಲಿ ಹುಲಿ ಅವನನ್ನು ಹಿಂದುಗಡೆಯಿಂದ ಹಿಡಿದು ಕೆಳಕ್ಕೆ ಕೆಡವಿ ಅವನಿಗೆ ಕೂಗಲೂ ಸಹ ಆಸ್ಪದ ಕೊಡದೆ ಗಂಟಲಿಗೆ ಬಾಯನ್ನು ಹಾಕಿ ಒಂದೆರಡು ನಿಮಿಷಗಳಲ್ಲೇ ಅವನ ಪ್ರಾಣವನ್ನು ತೆಗೆಯಿತು. ತುಕ್ರನ ಗಂಟಲಿನಿಂದ ಚಿಮ್ಮುತ್ತಿದ್ದ ರಕ್ತ ಹುಲಿಯ ನಾಲಗೆಗೆ ಬಹಳ ರುಚಿಯಾಗಿತ್ತು. ಕಾಡು ಪ್ರಾಣಿಗಳ ರಕ್ತಕ್ಕಿಂತ ಆ ರಕ್ತ ಅದಕ್ಕೆ ಬಹಳ ಸವಿಯಾಗಿತ್ತು. ರಕ್ತವನ್ನು ಒಂದೇ ಸಮನೆ ಹೀರಿತು. ರಕ್ತವೇ ರುಚಿಯಾಗಿದ್ದಾಗ ಮಾಂಸವು ಇನ್ನೂ ರುಚಿಯಾಗಿರಬೇಕೆಂದು ಅದು ಎಣಿಸಿತು ಹುಲಿಯು ತುಕ್ರನ ದೇಹವನ್ನು ಕಚ್ಚಿ ತನ್ನ ಬೆನ್ನಿನ ಮೇಲೆ ಹೇರಿಕೊಂಡು ಅಲ್ಲಿಂದ ಅರ್ಧಮೈಲಿ ದೂರದಲ್ಲಿ ಮನುಷ್ಯರ ಸುಳಿವಿಲ್ಲದ ಪ್ರದೇಶಕ್ಕೆಕೊಂಡೊಯ್ದು ಒಂದು ಗುರಗಿ ಮಟ್ಟಿನಲ್ಲಿ ಬಚ್ಚಿಟ್ಟಿತ್ತು. ಮಾನವರಕ್ತ ಹುಲಿಗೆ ಹೊಸ ಚೈತನ್ಯವನ್ನು ನೀಡಿತ್ತು. ಆ ದಿನ ರಾತ್ರಿ ಮತ್ತು ಮರುದಿನ ರಾತ್ರಿ ಭೀಮನಂತಿದ್ದ ತುಕ್ರನ ದೇಹವು ಅದಕ್ಕೆ ಸಾಕಾದಷ್ಟು ಆಹಾರವನ್ನು ಒದಗಿಸಿತ್ತು. ಕೆಲವು ದಿನಗಳು ಆಹಾರವಿಲ್ಲದಿದ್ದರೂ ಅದಕ್ಕೆ ಚಿಂತೆಯಿರಲಿಲ್ಲ. ತುಕ್ರನು ಹುಲಿಯ ಬಾಯಿಗೆ ತುತ್ತಾದನೆಂದು ಯಾರಿಗೂ ಗೊತ್ತಾಗಲಿಲ್ಲ. ತುಕ್ರನು ಮಲಸೀಮೆಯಲ್ಲಿ ಕೆಲಸಮಾಡಲಾರದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ತನ್ನ ಊರಿಗೆ ಓಡಿ ಹೋಗಿರಬೇಕೆಂದು ಅವನ ಸೇರೆಗಾರರು ಭಾವಿಸಿದರು. ಸೇರೆಗಾರರು ಪಟೇಲರನ್ನು ಕುರಿತು "ಪಟ್ಲೇರೆ, ತುಕ್ರ ನನ್ನ ದುಡ್ಡಿಗೆ ಗಾಂಚ್‌ಕೊಟ್ಟು ಹ್ವಾದ" ಎಂದು ಹೇಳಿದರು. ಪಟೇಲರೂ ಸಹ ತುಕ್ರನು ದಕ್ಷಿಣ ಕನ್ನಡ ಜಿಲ್ಲೆಗೆ ಓಡಿ ಹೋಗಿರಬೇಕೆಂದು ಊಹಿಸಿದರು. ನರಭಕ್ಷಕ ಹುಲಿಯೊಂದು ಊರಿನ ಸಮೀಪದಲ್ಲಿ ಇದೆಯೆಂಬುದು ಯಾರಿಗೂ ಗೊತ್ತಾಗಲಿಲ್ಲ.

ಒಂದುಸಾರಿ ನರಮಾಂಸದ ರುಚಿಯನ್ನು ನೋಡಿದ ಹುಲಿ ಸಾಮಾನ್ಯವಾಗಿ ಕಾಡು ಮೃಗಗಳ ಅಥವಾ ಜಾನುವಾರುಗಳ ಗೊಡವೆಗೆ ಹೋಗುವುದಿಲ್ಲ. ಅಲ್ಲದೆ ಈ ಹುಲಿ ಒಂದು ಕಾಲನ್ನು ಕಳೆದುಕೊಂಡಿದ್ದುದರಿಂದ ಸ್ವಾಭಾವಿಕ ರೀತಿಯಲ್ಲಿ ಸ್ವಾಭಾವಿಕ ಆಹಾರವನ್ನು ಪಡೆಯುವುದು ಅದಕ್ಕೆ ಸಾಧ್ಯವಿರಲಿಲ್ಲ. ತುಕ್ರನ ಹೆಣವನ್ನು ಮುಗಿಸಿದನಂತರ ಒಂದೆರಡು ದಿನಗಳಲ್ಲಿ ಮುಂದೇನು ಮಾಡಬೇಕೆಂಬುದನ್ನು ಅದು ಯೋಚಿಸತೊಡಗಿತು. ಮುತ್ತುಗದೂರಿನ ಪಕ್ಕದಲ್ಲೇ ಗುಂಡಿನೇಟು ಬಿದ್ದಿದ್ದನ್ನು ಅದು ಮರೆತಿರಲಿಲ್ಲ. ಅಲ್ಲದೆ ಕಾಲಿನ ಗಾಯದಲ್ಲಿದ್ದ ಹುಳುಗಳು ಅದನ್ನು ಒಂದು ಕಡೆ ನೆಮ್ಮದಿಯಿಂದಿರಲು ಬಿಡುತ್ತಿರಲಿಲ್ಲ. ಆದ್ದರಿಂದ ಹುಲಿ ಆ ಸ್ಥಳವನ್ನು ಬಿಡಬೇಕೆಂದು ನಿರ್ಧರಿಸಿ, ಕುಂಟುತ್ತ ಮುತ್ತುಗದೂರಿಗೂ ಪಂಜರವಳ್ಳಿಗೂ ಮಧ್ಯೆ ಇರುವ ಅಂದಗಾರಿನ ಕಡೆಗೆ ಹೋಗುತ್ತಿತ್ತು. ಅದನ್ನು ನೋಡುತ್ತಿದ್ದ ಮರಗಳ ಮೇಲಿದ್ದ ಮುಸಿಯ ಮುಂತಾದ ಪ್ರಾಣಿಗಳು ಅದರ ಆಗಮನವನ್ನು ನೆಲದಲ್ಲಿದ್ದ ಪ್ರಾಣಿವರ್ಗಕ್ಕೆ ಸಾರುತ್ತಿದ್ದುದರಿಂದ ಹುಲಿಗೆ ಕಾಡಿನಲ್ಲಿ ಯಾವ ಪ್ರಾಣಿಯ ದರ್ಶನವೂ ಆಗಿರಲಿಲ್ಲ. ಅದು ಒಂದೆರಡು ಕಡೆಗಳಲ್ಲಿ ಹಳ್ಳದಲ್ಲಿದ್ದ ಕಪ್ಪೆಗಳನ್ನು ಹಿಡಿದು ತಿಂದು ನೀರನ್ನು ಕುಡಿದು ತನ್ನ ಹಸಿವನ್ನೂ, ತೃಷೆಯನ್ನೂ ಸ್ವಲ್ಪ ಮಟ್ಟಿಗೆ ತೀರಿಸಿಕೊಂಡಿತು.

ಅಲ್ಲಿಂದ ಮುಂದೆ ಅದು ಜಾನುವಾರುಗಳೂ ಮನುಷ್ಯರೂ ಓಡಾಡುವ ಕಾಲು ದಾರಿಯ ಪಕ್ಕದಲ್ಲೇ ಸದ್ದಿಲ್ಲದೆ ಸಾಗಿತ್ತು. ಸ್ವಲ್ಪದೂರ ಹೋದನಂತರ ಕಾಡುದಾರಿಯಲ್ಲಿ ಅಂದಗಾರಿನ ಕಡೆಗೆ ಹೋಗುತ್ತಿದ್ದ ವ್ಯಕ್ತಿಯೊಬ್ಬನನ್ನು ಅದು ನೋಡಿತ್ತು. ಆ ವ್ಯಕ್ತಿ ವಸೂಲಿಯ ಫಕೀರ್ ಬ್ಯಾರಿ ಎಂಬವನಾಗಿದ್ದನು. ಅವನು ಬಣ್ಣ ಬಣ್ಣದ ಲುಂಗಿಯನ್ನುಟ್ಟು, ಶ್ವೇತ ವರ್ಣದ ಅಂಗಿಯನ್ನು ತೊಟ್ಟು, ಬೋಳು ತಲೆಯಮೇಲೆ ಶ್ವೇತ ವರ್ಣದ ಟೋಪಿಯೊಂದನ್ನು ಧರಿಸಿದ್ದನು. ಅವನು ಕೈಯಲ್ಲಿ ಕರಿಯ ಬಣ್ಣದ ಬಗನೆಯ ಕೋಲನ್ನು ಹಿಡಿದಿದ್ದನು. ಹುಲಿ ಸದ್ದು ಮಾಡದೆ ಅವನನ್ನು ಹಿಂಬಾಲಿಸುತ್ತಿತ್ತು. ಸರಿಯಾದ ಸಮಯ ಸಿಕ್ಕಾಗ ಅವನ ಮೇಲೆ ಬೀಳಬೇಕೆಂದು ಅದು ಹವಣಿಸಿತ್ತು. ಅಷ್ಟು ಹೊತ್ತಿಗೆ ಫಕೀರ್ ಬ್ಯಾರಿಗೆ ಬೀಡಿಯನ್ನು ಸೇದಬೇಕೆಂದು ಮನಸ್ಸಾಯಿತು. ಅವನು ಜೇಬಿನಿಂದ ಬೀಡಿಯ ಕಟ್ಟನ್ನೂ ಬೆಂಕಿಯ ಪೆಟ್ಟಿಗೆಯನ್ನೂ ತೆಗೆಯುತ್ತಿದ್ದಾಗ, ಬೀಡಿಯ ಕಟ್ಟು ಕೈ ತಪ್ಪಿ ಕೆಳಗೆ ಬಿತ್ತು. ಕೆಳಗೆ ಬಿದ್ದ ಬೀಡಿಗಳನ್ನು ಹೆರಕಲು ಬ್ಯಾರಿ ಹಿಂದಿರುಗಿ ಕೆಳಗೆ ಬಗ್ಗುತ್ತಿರುವಲ್ಲಿ, ಅನತಿ ದೂರದಲ್ಲಿಯೇ ಹುಲಿ ತನ್ನನ್ನು ಹಿಂಬಾಲಿಸುತ್ತಿರುವುದನ್ನು ನೋಡಿ ಬೆಚ್ಚಿಬಿದ್ದನು. ಹುಲಿಯನ್ನು ನೋಡಿದ ಬ್ಯಾರಿಗೆ ಮೈ ನಡುಕ ಉಂಟಾಯಿತು. ನಿರಪರಾಧಿಗಳಾಗಿದ್ದ ನಿಸ್ಸಹಾಯಕ ರೈತರನೇಕರಿಗೆ ಅವನು ಹುಲಿಯಾಗಿದ್ದನು. ಆದರೆ ನಿಜವಾದ ಹುಲಿಯ ಎದುರಿಗೆ ಅವನು ಇಲಿಯಾಗಿದ್ದನು. ಗಾಬರಿಯಲ್ಲಿ ಬೆಂಕಿ ಪೆಟ್ಟಿಗೆ ಕೈಯಿಂದ ಜಾರಿ ಕೆಳಗೆ ಬಿತ್ತು. ಮೈಯಲ್ಲಾ ಬೆವರಿತು. ಓಡಿದರೆ ಹುಲಿ ಅಟ್ಟಿಸಿಕೊಂಡು ಬರಬಹುದೆಂದು ಭಯ; ಓಡದಿದ್ದರೆ ಹುಲಿಯನ್ನು ಎದುರಿಸುವುದು ಹೇಗೆಂಬ ಚಿಂತೆ. ಯೋಚಿಸುವಷ್ಟು ಸಮಯ ಅವನಿಗಿರಲಿಲ್ಲ. ಹುಲಿಯು ಕುಪ್ಪಳಿಸಿಕೊಂಡು ಬರುತ್ತಿರುವಂತೆ ತೋರಿತು. ಬ್ಯಾರಿ ಅಲ್ಲಾನ ಮೇಲೆ ಭಾರ ಹಾಕಿ ಒಂದೇ ಸುಮ್ಮನೆ ಓಡಿದನು. ಹುಲಿಯೂ ಅವನನ್ನು ಹಿಂಬಾಲಿಸಿತು. ಸುಮಾರು ಮೂರು ಫರ್ಲಾಂಗುಗಳ ದೂರ ಹುಲಿಗೂ ಬ್ಯಾರಿಗೂ ಓಟದ ಸ್ಪರ್ಧೆ ನಡೆಯಿತು. ಹುಲಿಗೆ ಮೂರು ಕಾಲು ಬ್ಯಾರಿಯಷ್ಟು ವೇಗದಲ್ಲಿ ಓಡಲಾಗಲಿಲ್ಲ. ಆದ್ದರಿಂದ ಸ್ಪರ್ಧೆಯಲ್ಲಿ ಬ್ಯಾರಿಯೇ ಗೆದ್ದನು. ಬ್ಯಾರಿ ಎಲ್ಲಿಯೂ ನಿಲ್ಲದೆ ಓಡುತ್ತ ಅಂದಗಾರಿನ ಗೌಡರೊಬ್ಬರ ಮನೆಗೆ ಹೋಗಿ ನೆಲದ ಮೇಲೆ ಬಿದ್ದು "ಹುಲಿ ಹುಲಿ" ಎಂದು ಹುಚ್ಚನಂತೆ ಕೂಗಲಾರಂಭಿಸಿದನು. ಗೌಡರು ಅವನಿಗೆ ಕುಡಿಯಲು ನೀರನ್ನು ತರಿಸಿಕೊಟ್ಟು ಉಪಚರಿಸಿದ ನಂತರ ಹುಲಿಯು ತನ್ನನ್ನು ಅಟ್ಟಿಸಿಕೊಂಡು ಬಂದ ವಿಚಾರವನ್ನು ಹೃದಯಂಗಮವಾಗಿ ವಿವರಿಸಿದನು.

ಗೌಡರು ತಮ್ಮ ಊರಿನ ಸಮೀಪ ಮನುಷ್ಯರ ಮೇಲೆ ಬೀಳುವ ಹುಲಿ ಇರುವುದು ಅಪಾಯವೆಂದು ಯೋಚಿಸಿ, ಊರಿನ ಮುಖಂಡರನ್ನು ಕರೆಯಿಸಿ, ಸಮಾಲೋಚನೆ ನಡೆಯಿಸಿದರು. ಅಲ್ಲಿ ಸೇರಿದ ಮುಖಂಡರು ಹುಲಿಯನ್ನು ಕೊಲ್ಲಬೇಕೆಂದೂ, ಅದು ಸಾಧ್ಯವಾಗದಿದ್ದಲ್ಲಿ ಕೊನೇಪಕ್ಷ ಅದು ತಮ್ಮ ಪ್ರದೇಶದಲ್ಲಿ ನಿಲ್ಲದಂತೆ ಅದನ್ನು ಚದುರಿಸಬೇಕೆಂದೂ ತೀರ್ಮಾನಿಸಿ, ಹುಲಿಯ ಬೇಟೆಗೆ ಸಿದ್ಧರಾದರು. ಕೆಲವರ ಹತ್ತಿರ

ಬೇಟೆಯ ನಾಯಿಗಳೂ ಕೇಪಿನ ಕೋವಿಗಳೂ ಇದ್ದುವು. ಬೇಟೆಗಾರರ ತಂಡ ಕೋವಿ ನಾಯಿಗಳ ಸಮೇತ ಬ್ಯಾರಿ ತಿಳಿಸಿದ ಸ್ಥಳದ ಕಡೆಗೆ ಹೊರಟಿತು. ಅವರು ಬಹಳ ದೂರ ಹೋಗಬೇಕಾಗಿರಲಿಲ್ಲ. ಊರಿಗೆ ಅರ್ಧ ಮೈಲಿ ದೂರದಲ್ಲೇ ನಾಯಿಗಳು ಹುಲಿಯನ್ನು ಪತ್ತೆ ಮಾಡಿದವು. ನಾಯಿಗಳಿಗೂ ಬೇಟೆಗಾರರಿಗೂ ಹುಲಿಯ ಬೇಟೆ ಹೊಸದಾಗಿತ್ತು. ಅನುಭವವಿಲ್ಲದ ನಾಯಿಗಳು ಹುಲಿಯ ಮೇಲೆ ಏಕಾಯೇಕಿ ನುಗ್ಗಿದವು. ಕೆಲವೇ ನಿಮಿಷಗಳಲ್ಲಿ ಹುಲಿ ಎರಡು ನಾಯಿಗಳನ್ನು ಕೊಂದು ಹಾಕಿ ಕೆಲವನ್ನು ಗಾಯಗೊಳಿಸಿತು. ಕೋವಿಗಳನ್ನು ಹಿಡಿದಿದ್ದವರ ಪೈಕಿ ಧೈರ್ಯಶಾಲಿಗಳು ಮುನ್ನುಗ್ಗಿ ಗುಂಡು ಹಾರಿಸುವ ಸನ್ನಾಹ ಮಾಡುತ್ತಿರುವಷ್ಟರಲ್ಲಿ ಹುಲಿಯು ಆರ್ಭಟಿಸಿ ಅವರಿದ್ದೆಡೆಗೆ ನೆಗೆಯಿತು. ಆತುರದಲ್ಲಿ ನಾಲ್ಕೈದು ಜನರು ಹುಲಿಯ ಕಡೆಗೆ ಗುಂಡು ಹಾರಿಸಿ ಕಂಗಾಲಾಗಿ ಕಾಲಿಗೆ ಬುದ್ಧಿ ಹೇಳಿದರು. ಕೋವಿಯಿದ್ದವರೇ ಓಡುತ್ತಿರುವುದನ್ನು ನೋಡಿದ ಇತರರು ದಿಕ್ಕಾಪಾಲಾಗಿ ಊರಿನ ಕಡೆಗೆ ಓಡಿದರು. ಜೀವಸಮೇತ ಇದ್ದ ನಾಯಿಗಳೂ ಮನುಷ್ಯರನ್ನು ಹಿಂಬಾಲಿಸಿ ಓಡಿದವು. ಗಡಿಬಿಡಿಯಲ್ಲಿ ಹುಲಿ ಏನಾಯಿತೆಂಬುದು ಯಾರಿಗೂ ಗೊತ್ತಾಗಲಿಲ್ಲ. ನಾಲ್ಕೈದು ಜನರು ಗುಂಡು ಹಾರಿಸಿದರೂ ಹುಲಿಗೆ ಮಾತ್ರ ಒಂದು ರವೆಯೂ ತಗಲಿರಲಿಲ್ಲ. ಆದರೂ ಕೂಡ ತಾನು ಆ ಪ್ರದೇಶದಲ್ಲಿರುವುದು ಕ್ಷೇಮವಲ್ಲವೆಂದು ತೀರ್ಮಾನಿಸಿ ಹುಲಿ ಪಂಜರವಳ್ಳಿಯ ಕಾಡಿನ ಕಡೆಗೆ ಪ್ರಯಾಣ ಬೆಳೆಸಿತು.

ಪಂಜರವಳ್ಳಿಯ ಕಾಡಿನಲ್ಲಿ ಎರಡು ದಿನಗಳು ಹುಡುಕಿದರೂ ಅದಕ್ಕೆ ಕಪ್ಪೆ ಮತ್ತು ಹುಳುಗಳು ವಿನಾ ಇನ್ನಾವ ಆಹಾರವೂ ಸಿಕ್ಕಿರಲಿಲ್ಲ. ಜಾನುವಾರುಗಳಾಗಲೀ ಮನುಷ್ಯರಾಗಲೀ ಸಿಕ್ಕಬಹುದೆಂಬ ನಿರೀಕ್ಷೆಯಿಂದ ಹುಲಿ ಅಲ್ಲಲ್ಲಿ ಹೊಂಚು ಹಾಕುತ್ತಿತ್ತು. ಗಿರಿಯಪ್ಪಗೌಡರೂ, ಈರಮ್ಮನೂ ಸಿದ್ದಣ್ಣನ ಜೊತೆಯಲ್ಲಿ ತೋಟಕ್ಕೆ ಹೋಗುತ್ತಿದ್ದುದನ್ನು ಹುಲಿ ನೋಡಿತ್ತು. ಅಲ್ಲದೇ ಸ್ವಲ್ಪ ದೂರ ದಾರಿಯ ಪಕ್ಕದಲ್ಲಿ ಅವರನ್ನು ಹಿಂಬಾಲಿಸಿ ಹೋಗಿತ್ತು. ಮೂರು ಜನರೂ ಒಟ್ಟಿಗೆ ಇದ್ದುದರಿಂದಲೂ ಫಕೀರ ಬ್ಯಾರಿಯನ್ನು ಹಿಂಬಾಲಿಸಿ ಪಡೆದ ಅನುಭವದಿಂದಲೂ ಹುಲಿಗೆ ಅವರ ಮೇಲೆ ಬೀಳುವ ಧೈರ್ಯ ಬರಲಿಲ್ಲ. ಆದ್ದರಿಂದ ಹಾಗೆಯೇ ಹಿಂದಿರುಗಿ ಹೋಗಿ ಒಂದು ಕಡೆ ಕುಳಿತುಕೊಂಡಿತ್ತು. ಕುಳಿತ್ತಿದ್ದಾಗ ಪುಟ್ಟನ ರೋಧನ ಅದಕ್ಕೆ ಕೇಳಿಸಿತು. ರೋಧನದ ಶಬ್ದದ ಕೇಳುವ ಕಡೆಗೆ ನಿಶ್ಶಬ್ದವಾಗಿ ಹುಲಿ ಧಾವಿಸಿತ್ತು. ಮಗು ಒಂದೇ ಇರುವುದನ್ನು ನೋಡಿದ ಹುಲಿ ಮುನ್ನುಗ್ಗಿ ಪುಟ್ಟನ ಮೇಲೆರಗಿತು. ಕ್ಷಣಮಾತ್ರದಲ್ಲಿ ಏನೂ ಅರಿಯದ ಹಸುಗೂಸು ಹುಲಿಯ ದವಡೆಯನ್ನು ಸೇರಿತ್ತು.

ಇತ್ತ ಸುಬ್ಬಿಯು ಚಿಕ್ಕ ಮಗುವನ್ನು ಮಲಗಿಸಿದ ತರುವಾಯ ಪುಟ್ಟನಿಲ್ಲದೇ ಇರುವುದನ್ನು ನೋಡಿ ಅವನಿಗಾಗಿ ಮನೆಯ ಅಕ್ಕಪಕ್ಕದಲ್ಲಿ ಹುಡುಕಿದಳು. ಅವನನ್ನು ಗಟ್ಟಿಯಾಗಿ ಕೂಗಿ ಕರೆದಳು. ಗದ್ದೆಯ ಪಕ್ಕದಲ್ಲಿದ್ದ ಕುಡಿಯುವ ನೀರಿನ ಚಿಲುಮೆಯಲ್ಲಿ ಬಿದ್ದಿರಬಹುದೆಂಬ ಅನುಮಾನದಿಂದ ಚಿಲುಮೆಯ ಹತ್ತಿರ ಹೋಗಿ ನೋಡಿದಳು.

ಆದರೆ ಎಲ್ಲಿಯೂ ಪುಟ್ಟನ ಸುಳಿವಿರಲಿಲ್ಲ. ಕೊನೆಗೆ ತಾನು ಒಳಗಿದ್ದ ಕಾಲದಲ್ಲಿ ಪುಟ್ಟನು ತಂದೆ ತಾಯಿಗಳ ಜೊತೆಯಲ್ಲಿ ತೋಟಕ್ಕೆ ಹೋಗಿರಬಹುದೆಂದು ಸಮಾಧಾನಪಟ್ಟು ಕೊಂಡಳು. ಕತ್ತಲಾಗುವ ಹೊತ್ತಿಗೆ ತಂದೆ ತಾಯಿಗಳೂ, ಸಿದ್ದಣ್ಣನೂ ತೋಟದಿಂದ ಮನೆಗೆ ಬಂದರು. ಪುಟ್ಟನು ಅವರ ಜೊತೆಯಲ್ಲಿ ಇಲ್ಲದೆ ಇರುವುದನ್ನು ನೋಡಿ ಸುಬ್ಬಿಗೆ ಗಾಬರಿಯಾಯಿತು. ಅವಳು ಅಳುದನಿಯಲ್ಲಿ ಪುಟ್ಟನು ನಾಪತ್ತೆಯಾಗಿರುವ ವಿಚಾರವನ್ನು ತಂದೆ ತಾಯಿಗಳಿಗೆ ತಿಳಿಸಿದಳು. ಈರಮ್ಮನಿಗೆ ಆಕಾಶವೇ ಕೆಳಗೆ ಕಳಚಿ ಬಿದ್ದಂತಾಯಿತು. ಬಡತನದಲ್ಲಿ ಹಾಲು ಬೆಣ್ಣೆಗಳಿಲ್ಲದೆ ಬೆಳೆದವನಾಗಿದ್ದರೂ ಪುಟ್ಟನು ಮುದ್ದು ಮುದ್ದಾಗಿ ತಾಯಿಯ ಮಮತೆಯ ಮಗುವಾಗಿದ್ದನು. ಗಿರಿಯಪ್ಪಗೌಡರು ಪುಟ್ಟನನ್ನು ಕುರಿತು ಹಲವುಸಾರಿ ಕೂಗಿದರು. ಚಿಲುಮೆಯಲ್ಲಿಳಿದು ಶೋಧಿಸಿದರು. ಗದ್ದೆಯಲ್ಲಿ ಹುಡುಕಿದರು. ಎಲ್ಲಿಯೂ ಪುಟ್ಟನ ಕುರುಹು ಕಾಣಲಿಲ್ಲ. ಕೊನೆಗೆ ಪುಟ್ಟನು ತೋಟಕ್ಕೆ ಹೋಗುವ ಹಾದಿಯಲ್ಲಿ ತಮ್ಮನ್ನು ಹುಡುಕುತ್ತಾ ಹೋಗಿ ಕಾಡು ಪಾಲಾಗಿರಬಹುದೆಂಬ ಯೋಚನೆ ಅವರಿಗೆ ಹೊಳೆಯಿತು.

ಆಗಲೇ ಕತ್ತಲಾಗಿತ್ತು. ಕತ್ತಲಲ್ಲಿ ಕಾಡಿನಲ್ಲಿ ಹುಡುಕುವುದಾದರೂ ಹೇಗೆ? ಹೇಗಾದರೂ ಹುಡುಕಬೇಕೆಂದು ಗೌಡರು ನಿರ್ಧರಿಸಿದರು. ಒಣಗಿದ್ದ ಅಡಕೆಯ ದಬ್ಬೆಗಳನ್ನು ಸೀಳಿ, ಉದ್ದವಾದ ದೊಂದಿಯೊಂದನ್ನು ಮಾಡಿ, ಅದಕ್ಕೆ ಬೆಂಕಿಯನ್ನು ಹೊತ್ತಿಸಿಕೊಂಡು, ಕೈಯಲ್ಲೊಂದು ಸೊಪ್ಪುಗತ್ತಿಯನ್ನು ಹಿಡಿದುಕೊಂಡು, ತೋಟಕ್ಕೆ ಹೋಗುವ ದಾರಿಯಲ್ಲಿ ಹೊರಟರು. ದಾರಿಯ ಅಕ್ಕಪಕ್ಕದ ಪ್ರದೇಶದಲ್ಲೆಲ್ಲ ಓಡಾಡಿ ಹುಡುಕಿದರು. ದಾರಿತಪ್ಪಿ ಕಾಡಿನಲ್ಲಿ ಎಲ್ಲಿಯಾದರೂ ಇದ್ದರೆ ತಮ್ಮ ಕೂಗನ್ನು ಕೇಳಿ ಪುಟ್ಟನು ಪ್ರತ್ಯುತ್ತರ ಕೊಡಬಹುದೆಂಬ ಆಶೆಯಿಂದ ಪುಟ್ಟನ ಹೆಸರನ್ನು ಹಿಡಿದು ಅನೇಕಬಾರಿ ಕೂಗಿದರು. ಕಾಡಿನ ಭಯಾನಕ ನೀರವತೆಯಲ್ಲಿ ಅವರ ಕೂಗಿಗೆ ಪ್ರತಿಯಾಗಿ ಯಾವ ಶಬ್ದವೂ ಕೇಳಿಸಲಿಲ್ಲ. ಕೈಯಲ್ಲಿ ಉರಿಯುವ ದೊಂದಿಯನ್ನು ಹಿಡಿದು ಕೂಗುತ್ತಾ ಓಡಾಡುತ್ತಿದ್ದ ಗಿರಿಯಪ್ಪಗೌಡರನ್ನು ಹುಲಿ ನೋಡಿತ್ತು. ಆದರೆ ಅವರ ಕೈಯಲ್ಲಿ ಉರಿಯುವ ದೊಂದಿ ಇದ್ದುದರಿಂದ ಅದು ಅವರ ತಂಟೆಗೆ ಹೋಗಲಿಲ್ಲ. ದೊಂದಿ ಉರಿದು ಹೋಗುತ್ತಾ ಬಂತು. ಉರಿದು ಹೋದಲ್ಲಿ ಮನೆಯನ್ನು ಸೇರುವುದು ಕಷ್ಟವಾಗಿತ್ತು. ಆದ್ದರಿಂದ, ದೊಂದಿ ಉರಿಯುತ್ತಿರುವಾಗಲೇ ಕಾಡನ್ನು ಬಿಡುವುದು ಅನಿವಾರ್ಯವಾಗಿತ್ತು. ದುಃಖ ನಿರಾಶೆಗಳಿಂದ ತುಂಬಿದ ಹೃದಯದಿಂದ ಗೌಡರು ಮನೆಯನ್ನು ಸೇರಿದರು.

ಮನೆಯಲ್ಲಿ ಈರಮ್ಮನು ಅಳುತ್ತಾ ಜಗಲಿಯ ಮೇಲೆ ಬಿದ್ದಿದ್ದಳು. ತಾಯಿ ಅಳುವುದನ್ನು ನೋಡಿ ಮಕ್ಕಳೆಲ್ಲರೂ ಅಳುತ್ತಿದ್ದರು. ಸ್ವತಃ ಗೌಡರಿಗೆ ದುಃಖವನ್ನು ತಡೆಯಲು ಕಷ್ಟವಾಗಿದ್ದರೂ ಹೆಂಡತಿಯನ್ನು ಸಂತೈಸುವ ಪ್ರಯತ್ನ ಮಾಡಿದರು. ಸುಬ್ಬಿ ಸ್ವಲ್ಪ ಗಂಜಿಯನ್ನು ಬೇಯಿಸಿ, ಸಣ್ಣ ಮಕ್ಕಳಿಗೆ ಕೊಟ್ಟು ತಾನೂ ಸ್ವಲ್ಪ ಉಂಡಳು. ತೋಟದಲ್ಲಿ ಹಗಲೆಲ್ಲಾ ದಣಿದಿದ್ದ ತಾಯಿ ತಂದೆಗಳಾಗಲಿ ಸಿದ್ದಣ್ಣನಾಗಲಿ ಊಟ ಮಾಡಲಿಲ್ಲ.

ದಣಿದಿದ್ದ ಸಿದ್ದಣ್ಣನು ಆಯಾಸದಿಂದಲೂ, ತಮ್ಮನನ್ನಗಲಿದ ದುಃಖಭಾರದಿಂದಲೂ ನಿದ್ದೆಮಾಡಿದನು. ಈರಮ್ಮನೂ ಗಿರಿಯಪ್ಪಗೌಡರೂ ಎವೆಯಿಕ್ಕದೆ ರಾತ್ರಿಯೆಲ್ಲಾ ಎಚ್ಚರವಾಗಿದ್ದರು. ಪಂಜರವಳ್ಳಿ ಭೂತ್ರಾಯನಿಗೂ, ಧರ್ಮಸ್ಥಳದ ಮಂಜಪ್ಪನಿಗೂ, ತಿರುಪತಿ ತಿಮ್ಮಪ್ಪನಿಗೂ ಹರಕೆಯನ್ನು ಹೊತ್ತರು. ಭೂತ್ರಾಯನ ಅನುಗ್ರಹದಿಂದ ಪುಟ್ಟನು ಹೇಗಾದರೂ ರಾತ್ರಿ ಕಾಡಿನಿಂದ ಬರಬಹುದೆಂಬ ಆಶೆ ಈರಮ್ಮನಿಗಿತ್ತು. ರಾತ್ರಿ ಮನೆಯ ಹೊರಗಡೆ ಯಾವ ಸಪ್ಪಳ ಕೇಳಿದರೂ ಅವಳು ಪುಟ್ಟನ ಹೆಜ್ಜೆಯ ಸಪ್ಪಳವಿರಬಹುದೆಂದು ಭ್ರಾಂತಿಯಿಂದ ಕಿವಿಕೊಟ್ಟು ಆಲಿಸುತ್ತಿದ್ದಳು. ಯಾವಾಗ ಬೆಳಗಾದೀತೆಂದು ಗಂಡಹೆಂಡಿರಿಬ್ಬರೂ ತವಕಿಸುತ್ತಿದ್ದರು.

ಕೋಳಿ ಕೂಗಿದೊಡನೆ ಗಿರಿಯಪ್ಪಗೌಡರು ಇನ್ನೊಂದು ದೊಂದಿಯನ್ನು ಮಾಡಿಕೊಂಡು ತಮ್ಮ ಮನೆಗೆ ಮುಕ್ಕಾಲು ಮೈಲಿ ದೂರದಲ್ಲಿದ್ದ ಗೇಣಿ ಒಕ್ಕಲುಗಳ ಮನೆಗಳಿಗೂ, ಹೊಲೇಯರ ಗುಡಿಗಳಿಗೂ ಹೋಗಿ ತಮಗೊದಗಿದ ದುಃಖವನ್ನು ಹೇಳಿಕೊಂಡರು. ಅಷ್ಟು ಹೊತ್ತಿಗೆ ಬೆಳಗಾಯಿತು. ಹತ್ತು ಹನ್ನೆರಡು ಮಂದಿ ಸೇರಿ ಪಂಜರವಳ್ಳಿಯ ಕಾಡನ್ನು ಶೋಧಿಸಬೇಕೆಂದು ಊರಿನ ಜನರು ತೀರ್ಮಾನಿಸಿದರು. ಎರಡೆರಡು ಜನರ ತಂಡಗಳನ್ನು ಮಾಡಿ ಒಂದೊಂದು ದಿಕ್ಕಿನಲ್ಲೂ ಕಾಡನ್ನು ಶೋಧಿಸಬೇಕೆಂದು ವ್ಯವಸ್ಥೆ ಮಾಡಿದರು. ಎಲ್ಲರೂ ಸೇರಿ ಸತತವಾಗಿ ಮೂರು ಗಂಟೆಗಳ ಕಾಲ ಹುಡುಕಿದರು. ಎಲ್ಲಿಯೂ ಏನೂ ಗೊತ್ತಾಗಲಿಲ್ಲ. ಒಂದು ತಂಡದವರು ಮಾತ್ರ ಕಾಡಿನಲ್ಲಿ ಹಿಂತಿರುಗುತ್ತಿದ್ದಾಗ ಬಟ್ಟೆಯ ಚೂರೊಂದು ಬೆಮ್ಯಾರ್ಲು ಗಿಡಕ್ಕೆ ಸಿಕ್ಕಿ ಗಾಳಿಗೆ ಹಾರಾಡುತ್ತಿದ್ದುದನ್ನು ನೋಡಿದರು. ಹತ್ತಿರ ಹೋಗಿ ನೋಡುವಲ್ಲಿ ಆ ಬಟ್ಟೆ ಹರಿದು ಚೂರಾಗಿದ್ದ ಅಂಗಿಯ ಅವಶೇಷವಾಗಿತ್ತು. ಅಲ್ಲೇ ನೆಲದ ಮೇಲೆ ರಕ್ತ ಬಿದ್ದಿರುವುದನ್ನು ನೋಡಿದರು. ಅದು ಪುಟ್ಟನ ಅಂಗಿಯಾಗಿರಬೇಕೆಂದೂ ರಕ್ತ ಪುಟ್ಟನ ದೇಹದಿಂದ ಬಿದ್ದ ರಕ್ತವಾಗಿರಬೇಕೆಂದೂ ಅವರು ಊಹಿಸಿದರು. ಅಲ್ಲಿಂದ ಮುಂದೆ ಸ್ವಲ್ಪ ದೂರದಲ್ಲಿ ಮತ್ತಷ್ಟು ರಕ್ತ ಬಿದ್ದಿತ್ತು. ಹುಡುಕುವವರ ಮನಸ್ಸಿಗೆ ನಾನಾ ಯೋಚನೆಗಳು ಹೊಳೆದವು. ಮಕ್ಕಳನ್ನು ತಿನ್ನುವ ಪ್ರಾಣಿಗಳು ಯಾವಾಗಲೂ ಆ ಕಾಡಿನಲ್ಲಿ ಇರಲಿಲ್ಲವೆಂಬುದು ಅವರಿಗೆಗೊತ್ತಿತ್ತು. ಆದರೆ ತಾವು ನೋಡಿದ ರಕ್ತ ಪುಟ್ಟನ ರಕ್ತವೇ ಆಗಿದ್ದಲ್ಲಿ ಯಾವುದೋ ಪ್ರಾಣಿ ಅವನನ್ನು ಅಪಹರಿಸಿರಬೇಕೆಂದು ಅವರು ಯೋಚಿಸುತ್ತಿದ್ದರು. ಸ್ವಲ್ಪ ದೂರ ಮುಂದೆ ಹೋದರು. ಕೆಸರು ಮಣ್ಣಿನ ಮೇಲೆ ಸ್ವಲ್ಪ ರಕ್ತ ಸುರಿದಿತ್ತು. ಮಣ್ಣಿನ ಮೇಲೆ ಒಂದು ಪ್ರಾಣಿಯ ಹೆಜ್ಜೆಯ ಗುರುತೂ ಕಾಣಿಸಿತು. ದಿಟ್ಟಿಸಿ ನೋಡುವಲ್ಲಿ ಅದು ಹುಲಿಯ ಪಂಜದ ಗುರುತಾಗಿತ್ತು. ಪುಟ್ಟನು ಹುಲಿಯ ಬಾಯಿಗೆ ತುತ್ತಾಗಿರಬೇಕೆಂದು ಸ್ವಾಭಾವಿಕವಾಗಿ ಅವರು ಭಾವಿಸಿದರು. ಮುಂದೆ ಹೋಗಲು ಅವರಿಗೆ ಧೈರ್ಯ ಬರಲಿಲ್ಲ. ಹಿಂದಕ್ಕೆ ಹೋಗಿ ಜಾಗ್ರತೆಯಾಗಿ ತೋಟಕ್ಕೆ ಹೋಗುವ ಕಾಲುದಾರಿಯನ್ನು ಸೇರಿ. ಉಳಿದ ತಂಡದವರನ್ನು ಕುರಿತು ಗಟ್ಟಿಯಾಗಿ ಕೂಗಿದರು. ಅರ್ಧಗಂಟೆಯೊಳಗಾಗಿ ಉಳಿದವರೆಲ್ಲರೂ ಅಲ್ಲಿಗೆ ಬಂದು ಸೇರಿದರು. ಹುಲಿಯ

ಪಂಜದ ಗುರುತನ್ನು ನೋಡಿದ ತಂಡದವರು ತಾವು ನೋಡಿದುದನ್ನು ಇತರರಿಗೆ ವಿವರಿಸಿದರು. ಎಲ್ಲರೂ ಕೂಡಿ ಸಮಾಲೋಚನೆ ನಡೆಸಿದ ನಂತರ ಮಧ್ಯಾಹ್ನ ಹುಲಿಯ ಷಿಕಾರಿಗೆ ಜನರನ್ನು ಸೇರಿಸಬೇಕೆಂದು ಗೊತ್ತುಮಾಡಿದರು.

ಮಧ್ಯಾಹ್ನ ಗ್ರಾಮದ ಮತ್ತು ಸುತ್ತಮುತ್ತಲ ಗ್ರಾಮಗಳ ಬೇಟೆಗಾರರು ಗಿರಿಯಪ್ಪಗೌಡರ ಮನೆಯ ಸಮೀಪ ಸೇರಿದರು. ಎಂಟು ಹತ್ತು ಜನರ ಕೈಯಲ್ಲಿ ಕೇಪಿನ ಕೋವಿಗಳಿದ್ದವು. ಉಳಿದವರ ಕೈಯಲ್ಲಿ ಕತ್ತಿ ದೊಣ್ಣೆಗಳಿದ್ದುವು. ಜೊತೆಗೆ ಎಂಟು ಹತ್ತು ಬೇಟೆಯ ನಾಯಿಗಳೂ ಇದ್ದುವು. ಬೇಟೆಯ ತಂಡದವರು ರಕ್ತ ಸುರಿದಿದ್ದ ಸ್ಥಳಕ್ಕೆ ಬಂದು ಬಿದ್ದಿದ್ದ ರಕ್ತವನ್ನೂ ಅಂಗಿಯ ಚೂರನ್ನು ನೋಡಿದರು. ಗಿರಿಯಪ್ಪಗೌಡರು ಅಂಗಿಯ ಚೂರನ್ನು ನೋಡಿ ಅದು ಪುಟ್ಟನು ಹಾಕಿದ್ದ ಅಂಗಿಯ ಚೂರೆಂದು ಹೇಳಿದರು. ಅನಂತರ ರಕ್ತ ಬಿದ್ದಿದ್ದ ಜಾಡನ್ನು ಹಿಡಿದು ತಂಡ ಮುಂದೆ ಸಾಗಿತ್ತು. ಮಾರ್ಗ ಬಹಳ ದುರ್ಗಮವಾಗಿತ್ತು. ಬಿದಿರ ಮೆಳೆ, ಕೆಂಜಿಗೆ ಉಡಿ, ಗುರಗಿ ಮಟ್ಟಿ ಇವುಗಳಿಂದ ಕೂಡಿದ ಪ್ರದೇಶದಲ್ಲಿ ಹುಲಿಯನ್ನು ಹುಡುಕಬೇಕಾಗಿತ್ತು. ಹುಲಿಯ ವಾಸನೆಯನ್ನರಸಿ ನಾಯಿಗಳು ಮುಂದೆ ಹೊರಟವು. ನಾಯಿಗಳ ಹಿಂದೆ ಬಂದೂಕಧಾರಿಗಳಿದ್ದರು. ಅವರ ಹಿಂದೆ ಉಳಿದವರಿದ್ದರು. ಅಲ್ಲಲ್ಲಿ ಬಿದ್ದಿದ್ದ ರಕ್ತದ ಕಲೆಯನ್ನು ಹುಡುಕುತ್ತಾ ಜನರು ಮುಂದೆ ಹೋಗುತ್ತಿದ್ದರೆ ನಾಯಿಗಳು ಅವುಗಳಿಗೆ ತಿಳಿದ ಮಾರ್ಗದಲ್ಲಿ ಹೋಗುತ್ತಿದ್ದುವು. ಅರ್ಧ ಮೈಲಿ ದೂರ ಹೋದನಂತರ ಒಂದು ಕಡೆ ಪುಟ್ಟನ ತಲೆಬರುಡೆಯೂ, ತಲೆಕೂದಲೂ ಕಾಣಿಸಿದುವು, ಕೆಲವು ಎಲುಬಿನ ಚೂರುಗಳೂ ಅಲ್ಲೇ ಪಕ್ಕದಲ್ಲಿ ಬಿದ್ದಿದ್ದುವು. ಹುಲಿಯು ಪುಟ್ಟನನ್ನು ಅದೇ ಜಾಗದಲ್ಲಿ ಪೂರೈಸಿತ್ತು. ಗಿರಿಯಪ್ಪಗೌಡರು ಕಂಬನಿಗರೆಯುತ್ತಾ, ತಮ್ಮ ಕಂಬಳಿಯ ಸೆರಗಿನಲ್ಲಿ ಉತ್ತರಕ್ರಿಯೆಗೋಸ್ಕರ ಎಲುಬಿನ ಚೂರುಗಳನ್ನೂ ತಲೆಬುರುಡೆಯನ್ನೂ ಕಟ್ಟಿಕೊಂಡರು. ಅಲ್ಲಿಂದ ಮುಂದೆ ಹುಲಿ ಎಲ್ಲಿಗೆ ಹೋಯಿತೆಂಬುದನ್ನು ಪತ್ತೆ ಹಚ್ಚಲಾಗಲಿಲ್ಲ. ಆದ್ದರಿಂದ, ಸುಮಾರು ಮೂರು ನಾಲ್ಕು ಚದುರ ಮೈಲಿಯ ವಿಸ್ತೀರ್ಣವುಳ್ಳ ಪ್ರದೇಶವನ್ನು ಶೋಧಿಸಬೇಕೆಂದು ಬೇಟೆಗಾರರು ನಿರ್ಧರಿಸಿದರು. ಹುಲಿಯನ್ನು ಸೋವುವವರು ಬಿಲ್ಲಿನವರ ಕಡೆಗೆ ಅದನ್ನು ಅಟ್ಟುವುದೆಂದೂ, ಬಿಲ್ಲಿನವರು ಗದ್ದೆಯ ಸಮೀಪದಲ್ಲಿ ನಿಂತಿರಬೇಕೆಂದೂ ಸೋವುವವರ ರಕ್ಷಣೆಗಾಗಿ ಕೋವಿಯಿದ್ದವರು ಕೆಲವರು ಅವರನ್ನು ಹಿಂಬಾಲಿಸಬೇಕೆಂದೂ ತೀರ್ಮಾನ ಮಾಡಿದರು.

ತೀರ್ಮಾನದ ಪ್ರಕಾರ ವ್ಯೂಹವನ್ನು ರಚಿಸಿ ಸೋವುವ ಜನರು ನಾಯಿಗಳ ಸಮೇತ ಕೂಗುತ್ತ ಕಾಡನ್ನು ಹೊಕ್ಕರು ಜನರ ಆರ್ಭಟವನ್ನು ಕೇಳಿ ಸಣ್ಣ ಪುಟ್ಟ ಪ್ರಾಣಿಗಳು ಚೆಲ್ಲಾಪಿಲ್ಲಿಯಾಗಿ ಓಡಿದುವು. ಕಾಡು ಹಂದಿಗಳ ಹಿಂಡು ಗದ್ದೆಯ ಕಡೆಗೆ ನುಗ್ಗುತ್ತಿದ್ದರೆ ಕಾಡು ಕುರಿಗಳೂ, ಜಿಂಕೆಗಳೂ ಸೋವುವವರನ್ನು ತಪ್ಪಿಸಿಕೊಂಡು ನಾಗಾಲೋಟದಿಂದ ಹಿಂದಕ್ಕೆ ಹೋಗುತ್ತಿದ್ದುವು, ಸೋವುವವರ ಹಿಂದುಗಡೆ ಇದ್ದ ಕೋವಿಯವರು ಒಂದೆರಡು ಜಿಂಕೆಗಳನ್ನು ಹೊಡೆದರು. ಆದರೆ ಬಿಲ್ಲಿನವರು ತಮ್ಮ

ಈಡುಗಳನ್ನು ಹುಲಿಗೋಸ್ಕರ ಮೀಸಲಾಗಿಟ್ಟಿದ್ದರಿಂದ ಹಂದಿಗಳನ್ನು ಹೊಡೆಯಲಾಗಲಿಲ್ಲ. ಬೇಟೆಗಾರರಿಗೆ ಅನೇಕ ಪ್ರಾಣಿಗಳ ದರ್ಶನವಾದರೂ ಹುಲಿಯ ದರ್ಶನವಾಗಲಿಲ್ಲ. ಸೋವುವವರ ಹಿಂಭಾಗದಲ್ಲಿದ್ದ ಕೋವಿಯವರು ಹಾರಿಸಿದ ಗುಂಡಿನ ಶಬ್ದವೂ ಕೂಡ ಹುಲಿಯನ್ನು ಚದುರಿಸುವಂತೆ ಮಾಡಿರಲಿಲ್ಲ. ಬೇಟೆಗಾರರಲ್ಲಿ ಕೆಲವರು ಹುಲಿಯು ಕಾಡನ್ನು ಬಿಟ್ಟು ಹೋಗಿರಬೇಕೆಂದು ತರ್ಕಿಸುತ್ತಿದ್ದರು. ಅಷ್ಟರಲ್ಲಿ ಒಂದು ದಟ್ಟವಾದ ಗುರಗಿಮಟ್ಟಿನ ಹತ್ತಿರ ನಾಯಿಗಳು ಬಗುಳಲಾರಂಭಿಸಿದವು. ಒಂದೆರಡು ನಾಯಿಗಳು ಮಟ್ಟಿನೊಳಗೆ ಇಣಿಕಿ ನೋಡಿ ಹಿಂದಕ್ಕೆ ಬಂದು ಬಗುಳುತ್ತಿದ್ದುವು. ಅವು ಬಗುಳುವುದನ್ನು ಕೇಳಿದ ಸೋವುವ ಜನರು ಆ ಕಡೆ ನುಗ್ಗಿದರು. ಜನರನ್ನು ನೋಡಿದ ನಾಯಿಗಳು ಧೈರ್ಯದಿಂದ ಮಟ್ಟಿನೊಳಗೆ ಮುನ್ನುಗ್ಗಿ ಒಂದೇ ಸಮನೆ ಬಗುಳುತ್ತಿದ್ದವು ಮಟ್ಟಿನಲ್ಲಿ "ಘುರ್-ರ್-" ಎಂಬ ಶಬ್ದ ಪ್ರಾರಂಭವಾಗಿ ಅನಂತರ ಸಿಡಿಲಿನ ಶಬ್ದದಂತೆ ಗರ್ಜನೆ ಕೇಳಿಸಿತು. ಸಮೀಪಕ್ಕೆ ಬಂದ ಜನರಿಗೆ ಹುಲಿಯು ಒಳಗಿದೆ ಎಂಬುದು ಗೊತ್ತಾಯಿತು. ಆ ಸ್ಥಳದಿಂದ ಅದನ್ನು ಕದಲಿಸುವುದು ಕಷ್ಟವೆಂದು ಅವರಿಗೆ ಅರ್ಥವಾಗಿತ್ತು. ಗಿರಿಯಪ್ಪಗೌಡರು ಸೋವುವವರ ಜೊತೆಯಲ್ಲಿ ಒಂದು ಒಂಟಿನಲ್ಲಿ ಕೇಪಿನ ಕೋವಿಯನ್ನು ಹಿಡಿದಿದ್ದರು. ಆ ಕೋವಿಯನ್ನು ಅವರು ಒಬ್ಬ ಗೇಣಿದಾರನಿಂದ ತಂದಿದ್ದರು. ಜನರು ಗುರಗಿಮಟ್ಟಿನ ಹತ್ತಿರ ಸೇರಿದ ಹಾಗೆಲ್ಲಾ ನಾಯಿಗಳು ಬಗುಳುವುದನ್ನು ಹೆಚ್ಚು ಮಾಡಿದುವು. ಇದ್ದಕ್ಕಿದ್ದ ಹಾಗೆ ಮೆಟ್ಟಿನೊಳಗೆ ಹೋಗಿದ್ದ ನಾಯಿಗಳ ಪೈಕಿ ಒಂದೆರಡು ಕಿಟ್ಟನೆ ಕಿರಚಿಕೊಂಡುವು. ಉಳಿದ ನಾಯಿಗಳು ಹಿಂದಕ್ಕೆ ಓಡಿಬಂದುವು ಅಷ್ಟು ಹೊತ್ತಿನಲ್ಲಿ ಪರಿಣಾಮವನ್ನು ಯೋಚಿಸದೆ ಹುಡುಗಾಟಿಕೆಯಿಂದ ಹುಡುಗರಿಬ್ಬರು ಮಟ್ಟಿನೊಳಗೆ ಕಲ್ಲುಗಳನ್ನು ಬೀರಿದರು. ಬಹುಶಃ ಅವರೆಸೆದ ಕಲ್ಲುಗಳ ಪೈಕಿ ಕೆಲವು ಹುಲಿಗೆ ತಗುಲಿರಬೇಕೆಂದು ತೋರುತ್ತದೆ. ಹುಲಿ ಆರ್ಭಟಿಸುತ್ತಾ ಮಟ್ಟನ್ನು ಬಿಟ್ಟು ಜನರಿದ್ದ ಕಡೆಗೆ ನುಗ್ಗಿತ್ತು. ಜನರ ತಂಡ ಕಣ್ಮುಚ್ಚಿ ಬಿಡುವುದರೊಳಗಾಗಿ ಕಣ್ಮರೆಯಾಗಿತ್ತು. ಕೆಲವರು ಅಕ್ಕಪಕ್ಕದ ಮರಗಳನ್ನು ಹತ್ತಿದರು. ಕೆಲವರು ದಿಕ್ಕಾಪಾಲಾಗಿ ಓಡಿದರು, ಗಿರಿಯಪ್ಪಗೌಡರು ಮಾತ್ರ ತಮ್ಮ ಮಗನನ್ನು ಕೊಂದ ಹುಲಿಯನ್ನು ತೀರಿಸಿಯೇ ಬಿಡಬೇಕೆಂದು ಮನಸ್ಸಿನಲ್ಲಿಯೇ ದೃಢ ಪ್ರತಿಜ್ಞೆ ಮಾಡಿ ಒಂದು ದೊಡ್ಡ ಮರದ ಹಿಂದುಗಡೆ ಕೋವಿಯನ್ನು ಬಾರು ಮಾಡಿಕೊಂಡು ನಿಂತಿದ್ದರು. ಮನಸ್ಸು ಮಾಡಿದ್ದರೆ ಅವರೂ ಸಹ ಓಡಿಹೋಗಬಹುದಾಗಿತ್ತು. ಆದರೆ ಮುದ್ದು ಮಗನನ್ನು ಕಳೆದುಕೊಂಡ ಅವರೆದೆಯಲ್ಲಿ ದುಗುಡ ಕುದಿಯುತ್ತಿತ್ತು. ಕ್ರೋಧ ಕೆರಳಿತ್ತು. "ನನ್ ಕೈಯಾಗೆ ಹುಲಿ ಸಾಯ್ಬೇಕು. ಇಲ್ದೆಹೋದ್ರೆ ಹುಲಿಕೈಯ್ಯಾಗೆ ನಾ ಸಾಯ್ಬೇಕು" ಎಂದು ಮನಸ್ಸಿನಲ್ಲಿ ಸಂಕಲ್ಪ ಮಾಡಿದರು. ಗಿರಿಯಪ್ಪಗೌಡರು ಮರದ ಹಿಂದುಗಡೆ ನಿಂತಿರುವುದನ್ನು ಹುಲಿ ನೋಡಿತ್ತು. ಗೌಡರೂ ಹುಲಿಯನ್ನು ನೋಡುತ್ತಿದ್ದರು. ಗೌಡರ ಕಣ್ಣುಗಳು ಹುಲಿಯ ಕಣ್ಣುಗಳನ್ನೂ ಹುಲಿಯ ಕಣ್ಣುಗಳು ಗೌಡರ ಕಣ್ಣುಗಳನ್ನೂ ನೋಡುತ್ತಿದ್ದವು. ಬಹಳ ಕಾಲ ಗೌಡರನ್ನು ನೋಡುವಷ್ಟು ಸಹನೆ ಹುಲಿಗಿರಲಿಲ್ಲ. ಕ್ರೌರ್ಯದ ಅವತಾರವೋ

ಎನ್ನುವ ರೀತಿಯಲ್ಲಿ ತನ್ನ ಸಮಸ್ತ ಶಕ್ತಿಯನ್ನೆಲ್ಲಾ ಅಳವಡಿಸಿ ಗೌಡರಿದ್ದೆಡೆಗೆ ಅದು ಕುಪ್ಪಳಿಸಿತು, ಗೌಡರು ಕೋವಿಯನ್ನು ಗುರಿಯಿಟ್ಟು ಬಿಲ್ಲನ್ನು ಯಾವಾಗ ಮೀಟಬೇಕೆಂದು ಹವಣಿಸುತ್ತಿದ್ದರು. ಇನ್ನೇನು ಹುಲಿ ಗೌಡರ ಮೈಮೇಲೆ ಹಾರಬೇಕು, ಅಷ್ಟರಲ್ಲಿ ಗೌಡರು ಕೋವಿಯ ಗುಂಡು ಹುಲಿಯ ಎದೆಯನ್ನು ಹೊಕ್ಕಿತು. ಸಾಯುವ ಕೊನೆ ಗಳಿಗೆಯಲ್ಲಿ ಹುಲಿ ಗೌಡರ ಮೇಲೆ ನೆಗೆದು ಅವರನ್ನು ಕೆಡವಿ ಅವರೆದೆಯಲ್ಲಿ ತನ್ನ ಪಂಜವನ್ನು ನಾಟಿ ಸತ್ತು ಬಿದ್ದಿತು. ಹುಲಿ ಸತ್ತಿದೆಯೆಂದು ಗಟ್ಟಿಯಾಗಿ ಗೌಡರು ಕೂಗಿದರು., ಅವರ ಕೂಗನ್ನು ಕೇಳಿ ಮರ ಹತ್ತಿದ್ದವರು ಧೈರ್ಯವಾಗಿ ಕೆಳಗಿಳಿದು ಬಂದರು. ಗೌಡರ ಎದೆಯಿಂದ ಬುಗ್ಗೆಯೋಪಾದಿಯಲ್ಲಿ ರಕ್ತ ಹರಿಯುತ್ತಿತ್ತು. ಬೇಟೆಗಾರರ ಪೈಕಿ ಮೂಲಿಕೆಗಳ ಪರಿಚಯವುಳ್ಳವರು ಕಾಡಿನಲ್ಲಿದ್ದ ಕೆಲವು ಮೂಲಿಕೆಗಳನ್ನು ಗಾಯಕ್ಕೆ ಹಾಕಿ, ಗೌಡರು ಉಟ್ಟಿದ್ದ ಪಂಚೆಯನ್ನು ಹರಿದು, ಅವರ ಎದೆಗೆ ಕಟ್ಟಿದರು. ಆದರೆ ರಕ್ತ ಸೋರುವುದು ನಿಲ್ಲಲಿಲ್ಲ. ಅರ್ಧಗಂಟೆಯೊಳಗಾಗಿ ಗೌಡರು ಪುಟ್ಟನನ್ನು ಹಿಂಬಾಲಿಸಿ ಪರಲೋಕದ ಯಾತ್ರೆಯನ್ನು ಕೈಗೊಂಡರು. ಬೇಟೆಗೆ ಸೇರಿದ್ದ ಜನರು ಹುಲಿಯ ಶವವನ್ನೂ, ಗೌಡರ ಶವವನ್ನೂ ಪಂಜರವಳ್ಳಿಗೆ ಹೊತ್ತುಕೊಂಡು ಹೋದರು.

## ೩. ಅರೆಹುಚ್ಚಿ ಈರಮ್ಮ

ಗಂಡನನ್ನು ಕಳೆದುಕೊಂಡ ನಿರ್ಭಾಗಿನಿ ಈರಮ್ಮನ ದುಃಖಕ್ಕೆ ಮಿತಿಯೇ ಇರಲಿಲ್ಲ. ಆಕೆಗೆ ಜಗತ್ತು ಬೇಡವಾಗಿತ್ತು. ಕುಟುಂಬದ ಆಸ್ತಿಯನ್ನು ಬಿಟ್ಟು ಬಂದು ಗೇಣಿ ಜಮೀನಿನ ಮೇಲೆ ನೆಲಸಿ, ಹುಲ್ಲು ಗುಡಿಸಿಲಿನಲ್ಲಿ ಕೂಲಿಯವರಂತೆ ಜೀವನ ದೂಡುತ್ತಿದ್ದರೂ, ವಿಧಿಗೆ ತೃಪ್ತಿಯಾಗದೆ ಹೆತ್ತ ಮಗನನ್ನೂ ಕೈಹಿಡಿದ ಗಂಡನನ್ನೂ ಸೆಳೆದುಕೊಂಡು ಹೋಯಿತೆಂದು ರೋಧಿಸಿದಳು. ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಯೋಚಿಸಿದಳು. ಆದರೆ ನಾಲ್ವರು ಮಕ್ಕಳನ್ನು ಅನಾಥರನ್ನಾಗಿ ಮಾಡಿ ಸಾಯಲು ಆಕೆ ಮನಸ್ಸು ಬರಲಿಲ್ಲ. ಬದುಕಬೇಕೆಂದು ನಿರ್ಧರಿಸಿದಳು. ಆದರೆ ಬದುಕುವುದೆಂತು? ಗಂಡನ ಮನೆಗೆ ಹೋಗುವ ಹಾಗಿರಲಿಲ್ಲ: ತೌರುಮನೆಯಲ್ಲಿ ಸ್ವಾಗತವಿರಲಿಲ್ಲ. ಮನೆಯಲ್ಲಿ ಅಕ್ಕಿಯೂ ಇರಲಿಲ್ಲ! ದುಡ್ಡು ಇರಲಿಲ್ಲ. ಗಂಡನ ಮನೆಯಲ್ಲಿ ತನಗಿರುವ ಹಕ್ಕನ್ನು ಸ್ಥಾಪಿಸಬೇಕೆಂದು ಈರಮ್ಮನು ಮನಸ್ಸು ಮಾಡಿದಳು. ತಾನೇ ಖುದ್ದಾಗಿ ಹೋಗಿ, ಕಾಳೇಗೌಡರನ್ನು ಕಂಡು, ತಾನೂ ಮಕ್ಕಳೂ ಮನೆಯಲ್ಲಿರಲು ಅವಕಾಶ ಕಲ್ಪಿಸಿಕೊಡಬೇಕೆಂದು ಕೇಳಲು ನಿರ್ಧರಿಸಿದಳು. ತಮ್ಮ ತಿಮ್ಮಣ್ಣನನ್ನು ಕರೆದುಕೊಂಡು, ಕಾಳೇಗೌಡರ ಮನೆಗೆ ಹೋಗಿ ಕಂಬನಿಗರೆದು, ತನ್ನ ಮಕ್ಕಳನ್ನು ಸಲಹುವ ಹೊರೆಯನ್ನು ಕಾಳೇಗೌಡರು ಹೊರಬೇಕೆಂದು ಅವರನ್ನು ಪ್ರಾರ್ಥಿಸಿದಳು. ಮಕ್ಕಳನ್ನು ಹೆತ್ತವರು ಮಕ್ಕಳನ್ನು ಸಾಕಬೇಕೆ ಹೊರತು ಇತರರು ಅವರನ್ನು ಸಲಹಲು ಯಾವ ಕಾರಣವೂ ಇಲ್ಲವೆಂದು ಕಾಳೇಗೌಡರು ಹೇಳಿಬಿಟ್ಟರು. ಅಲ್ಲದೆ, ಇನ್ನು ಮುಂದೆ ತಮ್ಮ ಮನೆಗೆ ಬರಬಾರದೆಂದು ಈರಮ್ಮನನ್ನು ಎಚ್ಚರಿಸಿದರು. ಕಣ್ಣೀರಿಡುತ್ತಾ ಈರಮ್ಮನು ಮನೆಗೆ ಬಂದಳು. ಅಕ್ಕನ ಗೋಳನ್ನು ನೋಡಲಾರದೆ, ತಿಮ್ಮಣ್ಣನು ಗೌರಮ್ಮನಿಗೆ ಗೊತ್ತಾಗದಂತೆ, ಇಪ್ಪತ್ತು ಕೊಳಗ ಕುಚ್ಚಲಕ್ಕಿಯನ್ನೂ, ಇಪ್ಪತ್ತು ರೂಪಾಯಿಗಳನ್ನು ತಂದು ಕೊಟ್ಟನು. ಆದರೆ ಈ ವಿಚಾರ ಗೌರಮ್ಮನಿಗೆ ಗೊತ್ತಾಗದೆ ಇರಲಿಲ್ಲ. ಕೆಲವು ದಿನಗಳ ನಂತರ ಈ ವಿಚಾರ ಹೇಗೋ ಅವಳ ಕಿವಿಗೆ ಬಿತ್ತು. ವಿಚಾರ ಗೊತ್ತಾದ ನಂತರ ಅವಳು ರಕ್ಕಸಿಯಂತೆ ಗಂಡನ ಮೇಲೆ ರೇಗಿದ್ದಳು. ಒಂದು ದಿನ ಸಿದ್ದಣ್ಣನು ಸೈದಳ್ಳಿಗೆ ಬಂದಿದ್ದಾಗ ಗೌರಮ್ಮನು ಅವನನ್ನು ಕುರಿತು "ನಮ್ಮನೆ ಪಾತ್ರೆಪಡ್ಗ, ಜಿಂದಗಿಜಾನ್ವಾರು, ದುಡ್ಡುಕಾಸು ಯಲ್ಲಾ ಬರ್ಬಿಬಾಚಿ ನಿಮ್ಮನೀಗೆ ತಗುಂಡು ಹೋಗ್ಯಾತು. ಈಗೇನ್ ಮತ್ತೆ ತಗುಂಡು ಹೋಗಾನ ಅಂತ ಬಂದೆ?" ಎಂದಳು.

ಅತ್ತೆಗೆ ಏನು ಜವಾಬು ಕೊಡಬೇಕೆಂದು ಮುಗ್ಧನಾದ ಸಿದ್ದಣ್ಣನಿಗೆ ಹೊಳೆಯಲಿಲ್ಲ. ಮನೆಗೆ ಹೋದನಂತರ ಅವನು ತಮ್ಮ ತಾಯಿಗೆ ಗೌರಮ್ಮ ಹೇಳಿದುದನ್ನು ವರದಿ

ಮಾಡಿದನು. ಒಡಹುಟ್ಟಿದ ತಮ್ಮನೂ ಕೂಡ ತನಗೆ ಸಹಾಯಮಾಡದಂತೆ ವಿಧಿಯು ಗೌರಮ್ಮನ ಮೂಲಕ ಅಡ್ಡಿ ಆತಂಕಗಳನ್ನು ತಂದೊಡ್ಡುತ್ತಿದೆಯೆಂದು ಈರಮ್ಮನು ವಿಧಿಯನ್ನು ಶಪಿಸಿದಳು. ಇನ್ನು ಮುಂದೆ ತನ್ನ ತಮ್ಮನಿಂದ ಯಾವ ಸಹಾಯವನ್ನೂ ಪಡೆಯಬಾರದೆಂದು ಆಕೆಯು ನಿರ್ಧರಿಸಿದಳು. ಆಕೆಯೂ, ಸಿದ್ದಣ್ಣನೂ ತಮ್ಮ ಗದ್ದೆತೋಟಗಳಲ್ಲಿ ಕೆಲಸ ಮಾಡುವುದರ ಜೊತೆಗೆ ಇತರರ ಭೂಮಿಯಲ್ಲಿ ಕೂಲಿಯಾಳುಗಳಂತೆ ಕೆಲಸಮಾಡುತ್ತಿದ್ದರು. ಗದ್ದೆ ಮತ್ತು ಅಡಕೆಯ ಕೊಯ್ಲುಗಳನ್ನು ಬಹಳ ಕಷ್ಟದಿಂದ ಪೂರೈಸಿದರು. ಅಂದು ಈರಮ್ಮನು ಒಂದು ದಿನ ಮಾಡುತ್ತಿದ್ದ ಕೆಲಸವನ್ನು ಆಧುನಿಕ ಮಹಿಳೆಯರು ಒಂದು ವಾರದ ಅವಧಿಯಲ್ಲಿ ಮಾಡಲಾರರು. ಕೊಯ್ಲು ಪೂರೈಸಿದ ನಂತರ, ಒಂದುದಿನ ತಿರುಮಲಭಟ್ಟರು ಗೇಣಿಯನ್ನು ಅಳೆಯಿಸಲು ಈರಮ್ಮನ ಮನೆಗೆ ಬಂದರು. ಅಂದಿನ ರಿವಾಜಿನಂತೆ ಅಕ್ಷಯಪಾತ್ರೆಯಂತಿದ್ದ ಕೊಳಗವನ್ನೂ, ನೀತಿನಿಯಮವಿಲ್ಲದ ಗುಂಡನ್ನೂ, ಏರುಪೇರಿನ ತಕ್ಕಡಿಯನ್ನು ಭಟ್ಟರ ಆಳುಗಳು ತಂದಿದ್ದರು. ಈ ಸಾಧನಗಳ ಸಹಾಯದಿಂದ, ನಾಲ್ಕು ಮಣ ಅಡಕೆಯನ್ನೂ ಹತ್ತು ಖಂಡುಗ ಬತ್ತವನ್ನೂ ತೆಗೆದುಕೊಳ್ಳುವ ನೆಪದಲ್ಲಿ ಭಟ್ಟರು ಆರು ಮಣ ಅಡಕೆಯನ್ನೂ. ಹದಿನೆಂಟು ಖಂಡುಗ ಬತ್ತವನ್ನೂ ದೋಚಿಕೊಂಡು ಹೋದರು. ಈರಮ್ಮನ ಬಡತನವಾಗಲೀ, ಆಕೆಯ ಅಂದಿನ ಸಂಕಟ ಪರಿಸ್ಥಿತಿಯಾಗಲೀ, ಭಟ್ಟರ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಿರಲಿಲ್ಲ. ಭಟ್ಟರು ತುಂಬಾ ಆಸ್ತಿಕರಾಗಿದ್ದರು. ಅವರು ದಿನಕ್ಕೆ ಎರಡು ಗಂಟೆಗಳಕಾಲ ಸ್ನಾನ, ಮಡಿ, ಸಂಧ್ಯಾವಂದನೆ, ಪೂಜೆ ಮುಂತಾದ ಆಸ್ತಿಕ ವ್ಯವಹಾರಗಳಲ್ಲಿ ನಿರತರಾಗಿರುತ್ತಿದ್ದರು. ಆದರೆ ನಿಜವಾದ ದೈವಭಕ್ತರಿಗೆ ಬಡಬಗ್ಗರ ಮೇಲೆ ಕನಿಕರವಿರಬೇಕೆಂಬ ಭಾವನೆ ಭಟ್ಟರ ತಲೆಯಲ್ಲಿ ಎಂದೂ ಹೊಳೆದಿರಲಿಲ್ಲ. ಅಂದು ಆಸ್ತಿಕರೆನಿಸಿಕೊಂಡಿದ್ದ ಕೆಲವರು ಬಡಬಗ್ಗರನ್ನು ಸುಲಿಗೆಮಾಡಿ ಶ್ರೀಮಂತರಾಗಿದ್ದರು. ಹಣವಿದ್ದವರು ಎಷ್ಟೇ ದುರ್ಮಾರ್ಗಿಗಳಾಗಿದ್ದರೂ, ನಾಗರಿಕರೆಂದೆನಿಸಿಕೊಂಡಿದ್ದರು. ಹಣವಿಲ್ಲದವರು ಎಷ್ಟೇ ಸದ್ಗುಣಿಗಳಾಗಿದ್ದರೂ, ಅನಾಗರಿಕರೆಂದೆನಿಸಿಕೊಂಡಿದ್ದರು. ಭಟ್ಟರೂ ಕೂಡ ಅದೇ ವಾತಾವರಣದಲ್ಲಿ ಬೆಳೆದು ಬಂದವರಾಗಿದ್ದರು. ಆದ್ದರಿಂದ ಅವರ ಆಧ್ಯಾತ್ಮಿಕ ಸಿದ್ಧಾಂತಗಳಲ್ಲಿ ದೀನದಲಿತರ ವಿಚಾರದಲ್ಲಿ ಕನಿಕರವಿರಬೇಕೆಂಬ ಭಾವನೆಗೆ ಎಳ್ಳಷ್ಟೂ ಆಸ್ಪದವಿರಲಿಲ್ಲ. ಭಟ್ಟರಿಗೆ ಗೇಣಿಯನ್ನು ಕೊಟ್ಟನಂತರ ಈರಮ್ಮನ ಬಳಿ ಎರಡು ಮಣ ಸಗಟು ಅಡಕೆಯೂ, ಆರು ತಿಂಗಳ ಗಂಜಿಗಾಗುವಷ್ಟು ಬತ್ತವೂ ಮಾತ್ರ ಉಳಿದಿತ್ತು.

ಆಗಿನ ಕಾಲದಲ್ಲಿ ಗೇಣಿದಾರರು ಬೆಳೆಯುತ್ತಿದ್ದ ಬಹುಭಾಗದ ಬೆಳೆಯು ಗೇಣಿಯ ರೂಪದಲ್ಲಿ ಭೂಮಾಲಿಕರಿಗೆ ಹೋಗುತ್ತಿತ್ತು. ಬಹುಮಂದಿ ಗೇಣಿದಾರರು ಊಟಕ್ಕಾಗಿ ಬತ್ತವನ್ನು ಭೂಮಾಲಿಕರಿಂದ ಅಥವಾ ಸಾಹುಕಾರರಿಂದ ಸಾಲವಾಗಿ ತರುತ್ತಿದ್ದರು. ಈರಮ್ಮನು ತನ್ನ ಬಳಿ ಉಳಿದಿದ್ದ ಎರಡು ಮಣ ಅಡಕೆಯನ್ನು ಸಾಹುಕಾರ್ ಬೆಳ್ಳೇಗೌಡರಿಗೆ ಕೊಟ್ಟು, ಅವರಲ್ಲಿ ಲೇವಾದೇವಿಯನ್ನು ಪ್ರಾರಂಭಿಸಿದಳು. ಗೌಡರು 'ಸೀಮೆಧಾರಣೆ'

ಪ್ರಕಾರ ಈರಮ್ಮನ ಅಡಕೆಯನ್ನು ಕೊಂಡುಕೊಂಡರು. ಆರು ತಿಂಗಳ ಕಾಲ ಹಾಗೂ ಹೀಗೂ ಈರಮ್ಮನ ಮತ್ತು ಸಿದ್ದಣ್ಣನ ಜೀವನರಥ ಸಾಗಿತು. ಅಷ್ಟು ಹೊತ್ತಿಗೆ ಮನೆಯಲ್ಲಿದ್ದ ಬತ್ತವೆಲ್ಲವೂ ಮುಗಿದು ಹೋಗಿತ್ತು. ಆದ್ದರಿಂದ ಈರಮ್ಮನು ಹುಲಿ ಬತ್ತಕ್ಕಾಗಿ ಬೆಳ್ಳೇಗೌಡರ ಆಶ್ರಯವನ್ನು ಪಡೆಯಬೇಕಾಗಿ ಬಂತು. ಬೆಳ್ಳೇಗೌಡರು ನಾಲ್ಕು ಖಂಡಗ ಬತ್ತವನ್ನು ಈರಮ್ಮನಿಗೆ ಸಾಲವಾಗಿ ಕೊಟ್ಟರು. ಸಾಲವಾಗಿ ಕೊಟ್ಟ ಬತ್ತವನ್ನು ನಾಲ್ಕು ಖಂಡುಗ ಹುಲಿ ಸಮೇತ ಗದ್ದೆ ಕೊಯ್ಲಾದ ನಂತರ ಕೊಡುವುದಾಗಿ ಈರಮ್ಮನಿಂದ ಗೌಡರು ಕರಾರು ಬರೆಯಿಸಿಕೊಂಡರು. ಆ ವರ್ಷ ಈರಮ್ಮನ ಗೇಣಿ ಜಮೀನಿನಲ್ಲಿ ಹುಲುಸಾದ ಬೆಳೆಯಾಗಿತ್ತು. ಆದರೆ ತಿರುಮಲಭಟ್ಟರಿಗೆ ಕೊಡತಕ್ಕ ಗೇಣಿಯನ್ನೂ, ಬೆಳ್ಳೇಗೌಡರಿಗೆ ಕೊಡತಕ್ಕ ಹುಲಿಬತ್ತವನ್ನೂ ಕೊಟ್ಟ ನಂತರ ಹಿಂದಿನ ವರ್ಷದಂತೆ ಆಕೆಯ ಬಳಿ ಆರು ತಿಂಗಳಿಗೆ ಸಾಕಾಗುವಷ್ಟು ಬತ್ತ ಮತ್ತು ಎರಡೂಮೂರು ಮಣ ಅಡಕೆ ಮಾತ್ರ ಉಳಿದಿತ್ತು. ಹೀಗೆಯೇ ಮೂರು ವರ್ಷಗಳು ಉರುಳಿದವು. ಪ್ರತಿ ವರ್ಷವೂ ಆರು ತಿಂಗಳಕಾಲ ಗೇಣಿಯ ಜಮೀನಿನಿಂದ ಜೀವನ ಸಾಗುತ್ತಿದ್ದರೆ, ಇನ್ನುಳಿದ ಆರು ತಿಂಗಳು ಕೂಲಿಯಿಂದ ಜೀವನವನ್ನು ಸಾಗಿಸಬೇಕಾಗಿತ್ತು. ಮೂರನೇ ವರ್ಷದ ಅಂತ್ಯಕ್ಕೆ ಬೆಳ್ಳೇಗೌಡರಲ್ಲಿ ಈರಮ್ಮನ ಲೆಕ್ಕದಲ್ಲಿ ಅರವತ್ತು ರೂಪಾಯಿಗಳ ಸಾಲ ಬಾಕಿಯಾಗಿತ್ತು. ಹುಲಿಬತ್ತವನ್ನು ಪ್ರತಿವರ್ಷವೂ ನೂರಕ್ಕೆ ನೂರರಷ್ಟು ಬಡ್ಡಿ ಸೇರಿಸಿ ಸಂದಾಯ ಮಾಡುತ್ತಿದ್ದಳು. ಆದರೆ ನಗದು ಸಾಲ ಮತ್ತು ಅದರ ಬಡ್ಡಿ ಪ್ರತಿವರ್ಷವೂ ಬೆಳೆಯುತ್ತಲೇ ಇತ್ತು.

ಈರಮ್ಮನೂ, ಸಿದ್ದಣ್ಣನೂ ಬಡತನದ ವಿರುದ್ಧ ಒಂದು ದೊಡ್ಡ ಹೋರಾಟವನ್ನೇ ನಡೆಯಿಸಿದ್ದರು. ಮುಂದೆ ಕೆಲವು ವರ್ಷಗಳಲ್ಲಿ ತಮ್ಮ ಬಾಳು ಉತ್ತಮವಾಗಬಹುದೆಂಬ ಆಸೆ ಅವರಲ್ಲಿ ಮೂಡಿತ್ತು. ಆದರೆ ವಿಪತ್ತು ಮತ್ತೊಮ್ಮೆ ಅವರಿಗಾಗಿ ಕಾದಿತ್ತು. ಗಿರಿಯಪ್ಪಗೌಡರು ಸತ್ತ ತರುವಾಯ, ನಾಲ್ಕನೆಯ ವರ್ಷದ ಮಳೆಗಾಲದಲ್ಲಿ ಪಂಜರವಳ್ಳಿ ಮತ್ತು ಸುತ್ತಮುತ್ತಲ ಗ್ರಾಮಗಳಲ್ಲಿ ವಿಷಮಶೀತ ಜ್ವರವು ಸಾಂಕ್ರಾಮಿಕವಾಗಿ ಹರಡಿತ್ತು. ಈರಮ್ಮನ ಮನೆಯಲ್ಲಿ, ಸಿದ್ದಣ್ಣನ ವಿನಾ ಉಳಿದವರೆಲ್ಲರೂ ಆ ಜ್ವರದಿಂದ ಹಾಸಿಗೆ ಹಿಡಿದು ಮಲಗಿದ್ದರು. ಈರಮ್ಮನಿಗೇನೋ ಏಳೇ ದಿನಗಳಲ್ಲಿ ಜ್ವರ ಬಿಟ್ಟಿತು. ಆದರೆ ಸುಬ್ಬಿಗೂ, ಆಕೆಯ ಇಬ್ಬರು ತಂಗಿಯರಿಗೆ ಎರಡು ವಾರಗಳಾದರೂ ಜ್ವರ ಬಿಡಲಿಲ್ಲ. ಮೊದಲೇ ಪುಷ್ಟಿಕರವಾದ ಆಹಾರವಿಲ್ಲದೆ ಬಡತನದ ಬೇಗೆಯಲ್ಲಿ ಬಳಲಿ ನಿಶ್ಶಕ್ತರಾಗಿದ್ದ ಮಕ್ಕಳಿಗೆ ಎರಡು ವಾರಗಳ ಕಾಲ ಸತತವಾಗಿ ಹಿಡಿದಿದ್ದ ಜ್ವರದ ತಾಪವನ್ನು ಸಹಿಸುವುದು ಬಹಳ ಕಷ್ಟವಾಗಿತ್ತು. ಬರಬರುತ್ತಾ ಅವರ ಸ್ಥಿತಿ ಚಿಂತಾಜನಕವಾಗುತ್ತಾ ಬಂತು.

ಈರಮ್ಮನು ಮಕ್ಕಳನ್ನು ಬದುಕಿಸಬೇಕೆಂದು ಸರ್ವ ಪ್ರಯತ್ನಗಳನ್ನೂ ಮಾಡಿದಳು. ಮೊದಲು ಎಲ್ಲಾ ದೇವರಿಗೂ ಹರಕೆಯನ್ನು ಹೊತ್ತಳು. ಅನಂತರ ಹಳ್ಳಿಯ ವೈದ್ಯರಿಂದ ಗಿಡಮೂಲಿಕೆ ಔಷಧವನ್ನು ಕೊಡಿಸಿದಳು. ಹರಕೆ ಪ್ರಾರ್ಥನೆಗಳಿಂದಾಗಲೀ, ಗಿಡಮೂಲಿಕೆಗಳಿಂದಾಗಲೀ ಖಾಹಿಲೆ ಗುಣಮುಖವಾಗುವ ಚಿಹ್ನೆ ತೋರಲಿಲ್ಲ.

ಇಂಗ್ಲೀಷ್ ಔಷಧವನ್ನಾದರೂ ತಂದು ಮಕ್ಕಳನ್ನು ಉಳಿಸಬೇಕೆಂದು ಈರಮ್ಮನು ಯೋಚಿಸಿದಳು. ಪವಿತ್ರಪುರದಲ್ಲಿ ಇಂಗ್ಲೀಷ್ ಔಷಧವನ್ನೂ ಕೊಡುವ ಡಾಕ್ಟರು ಹಣವನ್ನು ಕೊಡದೆ ಔಷಧವನ್ನು ಕೊಡುತ್ತಿರಲಿಲ್ಲವೆಂಬುದು ಈರಮ್ಮನಿಗೆ ಗೊತ್ತಿತ್ತು. ಆದರೆ ಆಕೆಯ ಬಳಿ ಒಂದು ರೂಪಾಯಿ ಸಹ ಇರಲಿಲ್ಲ. ಸಾಹುಕಾರ್ ಬೆಳ್ಳೀಗೌಡರು, ಬೆಳ್ಳಿ ಅಥವಾ ಬಂಗಾರದ ಮಾಲಿನ ಆಧಾರದ ಮೇಲೆ ಸಾಲ ಕೊಡಲು ಅಡ್ಡಿಯಿಲ್ಲವೆಂತಲೂ, ಹಾಗೆಯೇ ಸಾಲ ಕೊಡಲು ಸಾಧ್ಯವಿಲ್ಲವೆಂತಲೂ ಹೇಳಿದ್ದರು. ಈರಮ್ಮನ ಬಳಿ ಆಕೆಯ ವಿವಾಹದ ಕಾಲದಲ್ಲಿ ತಂದೆತಾಯಿಗಳು ಬಳುವಳಿಯಾಗಿ ಕೊಟ್ಟಿದ್ದ ಬಂಗಾರದ ಗೆಜ್ಜೆಡ್ಡಿಗೆ ಮಾತ್ರ ಇತ್ತು. ಅದನ್ನು ಆಕೆ ಆಪದ್ಧನವಾಗಿ ಇಟ್ಟಿದ್ದಳು. ಎಷ್ಟೇ ಕಷ್ಟಬಂದರೂ ಅದನ್ನು ಆಕೆಯು ಹೊರಗೆ ತೆಗೆದಿರಲಿಲ್ಲ. ಮಕ್ಕಳಿಗಿಂತಲೂ ಗೆಜ್ಜೆಡ್ಡಿಗೆ ಹೆಚ್ಚಲ್ಲವೆಂದು ತೀರ್ಮಾನಿಸಿ, ಅವಳು ಅದನ್ನು ಬೆಳ್ಳೀಗೌಡರಲ್ಲಿ ಅಡವು ಇಟ್ಟು, ಐವತ್ತು ರೂಪಾಯಿಗಳನ್ನು ಸಾಲವಾಗಿ ತಂದು, ಪವಿತ್ರಪುರದ ಇಂಗ್ಲೀಷ್ ಔಷಧವನ್ನು ಕೊಡುವ ಡಾಕ್ಟರ ಹತ್ತಿರ ಹೋಗಿ ಮಕ್ಕಳ ಸ್ಥಿತಿಯನ್ನು ವರ್ಣಿಸಿ, ಉತ್ತಮವಾದ ಔಷಧವನ್ನು ಕೊಡಬೇಕೆಂದು ಹೇಳಿ ಡಾಕ್ಟರಿಗೆ ಇಪ್ಪತ್ತು ರೂಪಾಯಿಗಳನ್ನು ಕೊಟ್ಟಳು. ಡಾಕ್ಟರು ನಾಲ್ಕು ದಿನಗಳ ಔಷಧವನ್ನು ಆಕೆಗೆ ಕೊಟ್ಟು, ಅದನ್ನು ದಿನಕ್ಕೆ ಮೂರು ಹೊತ್ತಿನಂತೆ ನಾಲ್ಕು ದಿನಗಳ ಕೊಟ್ಟರೆ ಜ್ವರ ಬಿಡುವುದೆಂದು ಹೇಳಿದರು. ಈರಮ್ಮನು ನಾಲ್ಕು ದಿನಗಳ ಕಾಲ ಆ ಔಷಧವನ್ನು ಮಕ್ಕಳಿಗೆ ಕುಡಿಸಿದಳು. ಆದರೆ ಔಷಧದಿಂದ ರೋಗ ಗುಣವಾಗವ ಬದಲು ಉಲ್ಬಣವಾಯಿತು.

ಯಾವುದರಿಂದಲೂ ಗುಣವಾಗದೆ ಇದ್ದ ರೋಗ ಮಂತ್ರ ಚಿಕಿತ್ಸೆಯಿಂದ ಗುಣವಾಗುತ್ತದೆಯೆಂದು ಈರಮ್ಮನು ನಂಬಿದ್ದಳು. ಬಂಗಲಾಪುರದಲ್ಲಿದ್ದ ಸುಪ್ರಸಿದ್ಧ ಮಂತ್ರವಾದಿ ಸೂರ್ಯಭಟ್ಟರ ವಿಚಾರವನ್ನು ಈರಮ್ಮನು ಕೇಳಿದ್ದಳು. ಸೂರ್ಯಭಟ್ಟರ ಹತ್ತಿರ ನಿಮಿತ್ತವನ್ನು ಕೇಳಿ, ಮಂತ್ರ ಚಿಕಿತ್ಸೆ ಮಾಡಿಸುವ ಸಲುವಾಗಿ, ತಮ್ಮ ತಿಮ್ಮಣ್ಣನನ್ನು ಬಂಗಲಾಪುರಕ್ಕೆ ಕಳುಹಿಸಿದಳು. ಭಟ್ಟರು ನಿಮಿತ್ತವನ್ನು ನೋಡಿ ದಾಯಾದಿಗಳು ಮಾಡಿಸಿರುವ ಮಾಟದ ದೆಸೆಯಿಂದ ಮೂವರು ಮಕ್ಕಳಿಗೂ ಒಂದೇ ಸಾರಿ ಖಾಹಿಲೆಯಾಗಿದೆಯೆಂದೂ ಮಾಟವನ್ನು ತೆಗೆಯಿಸಿದರೆ ಖಾಹಿಲೆ ವಾಸಿಯಾಗುವು ದೆಂದೂ ಹೇಳಿದರು. ಮಾಟವನ್ನು ತೆಗೆಯಿಸುವ ಕಾರ್ಯವನ್ನು ಭಟ್ಟರೇ ನಿರ್ವಹಿಸಬೇಕೆಂದು ತಿಮ್ಮಣ್ಣನು ಪ್ರಾರ್ಥಿಸಿದನು. ಭಟ್ಟರು ಮೊದಲು ನಿರಾಕರಿಸಿದವರಂತೆ ನಟಿಸಿ ಅನಂತರ ಒಪ್ಪಿಕೊಂಡರು. ಆದರೆ ದಕ್ಷಿಣೆ ಕಾಣಿಕೆ ಮುಂತಾಗಿ ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟರೆ ಮಾತ್ರ ತಾವು ಕಾರ್ಯವನ್ನು ನಿರ್ವಹಿಸಬಹುದೆಂದು ಹೇಳಿದರು. ತಿಮ್ಮಣ್ಣನು ತನ್ನ ಅಕ್ಕನ ಬಡತನವನ್ನು ವಿವರಿಸಿದ ನಂತರ ಭಟ್ಟರು ಹದಿನೈದು ರೂಪಾಯಿಗಳಿಗೆ ಮಾಟವನ್ನು ತೆಗೆಯುವುದಾಗಿ ಒಪ್ಪಿ, ಮರುದಿನ ಪಂಜರವಳ್ಳಿಗೆ ಬಂದರು. ಭಟ್ಟರು ಹೇಳಿಕೆಯ ಪ್ರಕಾರ ಈರಮ್ಮನು ಚರು, ಓಕಳಿ, ಕಕ್ಕಡ, ಕೆಂಪು ಹೂಗಳು, ಅಕ್ಕಿಯ ಹಿಟ್ಟು ಮುಂತಾದ ಸಲಕರಣೆಗಳನ್ನು ಸಜ್ಜುಗೊಳಿಸಿ, ಭಟ್ಟರ ಅಡುಗೆಗೆ ಬೇಕಾದ

ಲವಾಜಮೆಗಳನ್ನು ಸಿದ್ಧಗೊಳಿಸಿದಳು. ಭಟ್ಟರು ಮಂತ್ರದ ಮಳೆಯನ್ನೇ ಸುರಿಸಿದರು. ಮನೆಯ ಹತ್ತಿರ ಭೂಪ್ರೇತಗಳು ಸಂಚಾರ ಮಾಡದಂತೆ ಮಂತ್ರಗಳಿಂದ ತಡೆಯಾಜ್ಞೆಯನ್ನು ಜಾರಿಮಾಡಿ ಮಂತ್ರಿಸಿದ್ದ ತೆಂಗಿನಕಾಯನ್ನು ಮನೆಯ ಮುಂಭಾಗದ ಸೂರಿಗೆ ಕಟ್ಟಿದರು. ಪ್ರಜ್ಞೆ ಇಲ್ಲದೆ ಸಾಯುತ್ತಾ ಬಿದ್ದಿದ್ದ ಮೂರು ಮಕ್ಕಳಿಗೂ ಚೀಟುಗಳನ್ನು ಕಟ್ಟಿ, ಮಂತ್ರೋದಕವನ್ನು ಪ್ರೋಕ್ಷಣೆ ಮಾಡಿದರು. ಅನಂತರ ಭಟ್ಟರು ಈರಮ್ಮನು ಸಿದ್ಧಗೊಳಿಸಿದ್ದ ಲವಾಜಮೆಗಳಿಂದ ಸ್ವತಃ ಅಡಿಗೆಯನ್ನು ಮಾಡಿ, ಚೊಕ್ಕ ಭೋಜನವಾದನಂತರ ಹದಿನೈದು ರೂಪಾಯಿಗಳನ್ನು ಜೇಬಿಗಿಳಿಯಬಿಟ್ಟು, ಬಂಗಲಾಪುರದ ಹಾದಿಯನ್ನು ಹಿಡಿದರು. ಇತ್ತ ಒಂದು ವಾರದೊಳಗಾಗಿ, ಈರಮ್ಮನ ಮೂರುಮಕ್ಕಳೂ ಎರಡು ಮೂರು ದಿನಗಳ ಅಂತರದಲ್ಲಿ ಪರಲೋಕದ ಹಾದಿಯನ್ನು ಹಿಡಿದರು.

ಒಂದೇ ವಾರದಲ್ಲಿ ಮೂರು ಮಕ್ಕಳನ್ನು ಕಳೆದುಕೊಂಡಿದ್ದ ತಾಯಿಯ ದುಃಖವನ್ನು ಅಳೆಯುವವರಾರು? ಈರಮ್ಮನಿಗೆ ಜಗತ್ತು ಮತ್ತೊಮ್ಮೆ ಶೂನ್ಯವಾಗಿತ್ತು. ನಿರಾಶೆಯ ಕಾರ್ಗತ್ತಲು ಮತ್ತೊಮ್ಮೆ ಕವಿದಿತ್ತು. ಅದುವರೆಗಿನ ಅವಳ ಬಾಳು ನಿಟ್ಟುಸಿರಿನ ಗೋಳಾಗಿತ್ತು. ಗಂಡನನ್ನೂ, ಮುದ್ದುಮಗ ಪುಟ್ಟನನ್ನೂ ಕಳೆದುಕೊಂಡಾಗ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಆಕೆಯು ಮನಸ್ಸು ಮಾಡಿದಳು. ಮಕ್ಕಳನ್ನು ಅನಾಥರನ್ನಾಗಿ ಮಾಡಲು ಮನಸ್ಸು ಬಾರದೆ ಬದುಕಿದ್ದಳು. ಈಗ ಮತ್ತೊಮ್ಮೆ ಅವಳ ಮನಸ್ಸು ಆತ್ಮಹತ್ಯೆಯ ಕಡೆಗೆ ಹರಿದಿತ್ತು. ಆದರೆ ಉಳಿದಿರುವ ಒಬ್ಬನೇ ಮಗನನ್ನು ಬಿಟ್ಟು ಸಾಯಲು ಆಕೆಗೆ ಮನಸ್ಸು ಬರಲಿಲ್ಲ. ಆದ್ದರಿಂದ ಸಿದ್ದಣ್ಣನಿಗಾಗಿ ಬದುಕಬೇಕೆಂದು ಪುನಃ ನಿರ್ಧರಿಸಿದಳು. ಬಡವರಾದವರು ಬದುಕುವುದೆಂದರೆ ದುಡಿಯುವುದೆಂದರ್ಥ. ದುಡಿಮೆ ಇಲ್ಲದೆ ಬದುಕುವುದೆಂತು? ಮೂವರು ಮಕ್ಕಳನ್ನು ಮಣ್ಣುಪಾಲು ಮಾಡಿದ ಈರಮ್ಮನಿಗೆ ಮೂರು ದಿನಗಳ ವಿರಾಮವೂ ದೊರೆಯಲಿಲ್ಲ. ಹೊಟ್ಟೆಯ ಪಾಡಿಗಾಗಿ ಇತರರ ಗದ್ದೆ ತೋಟಗಳಲ್ಲಿ ಅವಳು ದುಡಿಯಬೇಕಾಗಿತ್ತು. ಒಂದು ದಿನ ಮುಯ್ಯಾಳಿನ ಕೆಲಸಕ್ಕಾಗಿ ಈರಮ್ಮನು ತನ್ನ ಮನೆಯಿಂದ ಒಂದು ಮೈಲಿ ದೂರದಲ್ಲಿದ್ದ ಪಂಜರವಳ್ಳಿ ತಮ್ಮಣ್ಣನ ಗದ್ದೆಗೆ ಹೋಗಿದ್ದಳು. ಬೆಳಿಗ್ಗೆ ದಾರಿಯ ಮಧ್ಯೆ ಇದ್ದ ಹಳ್ಳವೊಂದನ್ನು ಸರಾಗವಾಗಿ ದಾಟಿಕೊಂಡು ಹೋಗಿದ್ದಳು. ಸಾಯಂಕಾಲ ಮನೆಗೆ ವಾಪಸ್ಸು ಬರುತ್ತಿರುವಾಗ ಮಳೆಯ ದೆಶೆಯಿಂದ ಆ ಹಳ್ಳ ತುಂಬಿ ಹರಿಯುತ್ತಿತ್ತು. ಹಳ್ಳದ ಹತ್ತಿರ ಬಂದು ನೋಡಿದಾಗ ದಾಟುವುದು ಕಷ್ಟವೆಂದು ಅವಳಿಗೆ ತೋರಿತು. ಮನೆಯಲ್ಲಿ ಸಿದ್ದಣ್ಣನೊಬ್ಬನೇ ಇದ್ದುದರಿಂದ ಅವನನ್ನು ಬಿಟ್ಟು ಬೇರೆಯವರ ಮನೆಯಲ್ಲಿ ಉಳಿಯುವುದು ಅವಳಿಗೆ ಸರಿಯೆನಿಸಲಿಲ್ಲ. ಹೇಗಾದರೂ ಮಾಡಿ ಹಳ್ಳವನ್ನು ದಾಟಬೇಕೆಂದು ನಿಶ್ಚಯಿಸಿದಳು. ಮಳೆಗಾಗಿ ಸೂಡಿದ್ದ ಗೊರಬನ್ನು ತಲೆಯ ಮೇಲಿಟ್ಟುಕೊಂಡು, ಹತ್ತಿರದಲ್ಲಿ ಬಿದ್ದಿದ್ದ ಉದ್ದವಾದ ಕೋಲನ್ನು ಕೈಯಲ್ಲಿ ಊರಿಕೊಂಡು, ಹಳ್ಳದಲ್ಲಿ ಇಳಿದಳು. ನಡು ಹಳ್ಳವನ್ನು ಸೇರಿದಾಗ, ನೀರು ಆಕೆಯ ನಡುವನ್ನು ಮುಟ್ಟಿತು. ದೇಹ ತತ್ತರಿಸಿತು; ಮನಸ್ಸು ತಲ್ಲಣಿಸಿತು. ತಲೆಯ ಮೇಲಿದ್ದ ಗೊರಬು ನೀರಿಗೆ ಬಿದ್ದು ಪ್ರವಾಹದಲ್ಲಿ ಕೊಚ್ಚಿ ಹೋಯಿತು. ಆಕೆಯೂ

ಪ್ರವಾಹದಲ್ಲಿ ತೇಲಿ ಹೋಗುತ್ತಿದ್ದಳು. ಅಷ್ಟರಲ್ಲಿ ಹಳ್ಳದ ಆ ಕಡೆ ದಂಡೆಯಲ್ಲಿ ಬೆಳೆದಿದ್ದ ಮರವೊಂದು ಗಾಳಿಗೆ ಉರುಳಿ ಹಳ್ಳಕ್ಕೆ ಮಗುಚಿಕೊಂಡಿದ್ದು, ಈರಮ್ಮನನ್ನು ತಡೆಯಿತು. ಆ ಮರದ ಸಹಾಯದಿಂದ ಈರಮ್ಮನು ಹಳ್ಳವನ್ನು ದಾಟಿದಳು.

ಹಳ್ಳವನ್ನು ದಾಟಿದ ನಂತರ, ಆಕೆಯ ಮನಸ್ಸಿನಲ್ಲಿ ಯಾವೂದೋ ಒಂದು ವಿಧವಾದ ಬದಲಾವಣೆಯಾಗಿತ್ತು. ಅದುವರೆಗೆ ಕಷ್ಟಪರಂಪರೆಗಳಿಗೆ ಸಿಲುಕಿ ಭಾರವಾಗಿದ್ದ ಮನಸ್ಸು ಹಗುರವಾದಂತಾಗಿತ್ತು. ಮಕ್ಕಳನ್ನು ಕಳೆದುಕೊಂಡ ವಿಚಾರವೂ ಕೂಡ ಆಕೆಯ ಮನಸ್ಸಿನಲ್ಲಿರಲಿಲ್ಲ. ಇದ್ದಕ್ಕಿದ್ದಹಾಗೆ ಮಾನಸಿಕವಾಗಿ ದುಃಖ ಪರಂಪರೆಗಳ ಭಾರದಿಂದ ಆಕೆಯ ಚಿತ್ತಭಿತ್ತಿಯಲ್ಲಿ ಬಿರುಕುಂಟಾಗಿ ಹುಚ್ಚು ಹಿಡಿದಿತ್ತು. ರಾತ್ರಿ ಮನೆಗೆ ಬಂದ ತಾಯಿಯ ವಿಚಿತ್ರ ವರ್ತನೆಯನ್ನು ಕಂಡು ಸಿದ್ದಣ್ಣನು ವಿಸ್ಮಯಗೊಂಡನು. ಮಹಾಕಾಳಿಯಂತೆ ಕೈಯಲ್ಲಿ ಕತ್ತಿಯೊಂದನ್ನು ಹಿಡಿದುಕೊಂಡು, ಸಿದ್ದಣ್ಣನನ್ನು ಕಡಿಯುವುದಕ್ಕಾಗಿ ಅಟ್ಟಿಸಿಕೊಂಡು ಬಂದಳು. ಸಿದ್ದಣ್ಣನು ಬಹಳ ಗಾಬರಿಗೊಂಡರೂ, ಅಪಾಯದಿಂದ ತಪ್ಪಿಸಿಕೊಂಡು ಓಡಿಹೋಗಿ, ದನದ ಕೊಟ್ಟಿಗೆಯ ಅಟ್ಟವನ್ನು ಹತ್ತಿ ಕುಳಿತನು. ಮಗನನ್ನು ಕಾಣದ ತಾಯಿ ಕತ್ತಿಯನ್ನು ಬಿಸುಟು ಅಳಲಾರಂಭಿಸಿದಳು. ಅವಳು ಅಳುತ್ತಿರುವುದನ್ನು ನೋಡಿ ಸಿದ್ದಣ್ಣನು ಕೆಳಕ್ಕಿಳಿದು ಬಂದು, ಆಕೆಯನ್ನು ಸಂತೈಸಲಾರಂಭಿಸಿದನು. ಮರುಕ್ಷಣದಲ್ಲಿಯೇ ಈರಮ್ಮನು ಸಿದ್ದಣ್ಣನನ್ನು ಬಯ್ಯಲಾರಂಭಿಸಿದಳು. ಸ್ವಲ್ಪ ಹೊತ್ತಿನ ನಂತರ ಮತ್ತೆ ಅಳಲಾರಂಭಿಸಿದಳು. ಹೀಗೆ ನಡುರಾತ್ರಿಯವರೆಗೂ ನಡೆಯಿತು. ಇಬ್ಬರಿಗೂ ಆ ರಾತ್ರಿ ಊಟವಿರಲಿಲ್ಲ. ನಡುರಾತ್ರಿಯಾದೊಡನೆ ಈರಮ್ಮ ನಿದ್ದೆಹೋದಳು. ಹುಡುಗನಾದ ಸಿದ್ದಣ್ಣನ ಸ್ಥಿತಿ ವರ್ಣಿಸಲಸದಳವಾಗಿತ್ತು. ತಾಯಿಗೆ ದೆವ್ವ ಹಿಡಿದಿರಬೇಕೆಂದು ಊಹಿಸಿ ಭಯದಿಂದ ನಡುಗಿ ಶೋಕದಿಂದ ತಲ್ಲಣಿಸಿ ಹೋಗಿದ್ದನು. ಬಹಳ ಕಷ್ಟದಿಂದ ರಾತ್ರಿಯನ್ನು ಕಳೆದನು. ಮರುದಿನ ಸೋದರಮಾವ ತಿಮ್ಮಣ್ಣನನ್ನು ಬರಮಾಡಿಕೊಂಡು ದೆವ್ವವನ್ನು ಬಿಡಿಸುವುದಕ್ಕಾಗಿ ಮಂತ್ರವಾದಿಗಳಿಂದ ಯಂತ್ರ ಮಂತ್ರಗಳ ಚಿಕಿತ್ಸೆ ಮಾಡಿಸಿದನು. ಈ ಚಿಕಿತ್ಸೆಗಳಿಂದ ಯಾವ ಪ್ರಯೋಜನವೂ ಆಗಲಿಲ್ಲ. ಆದರೆ ಕೆಲವು ದಿನಗಳ ನಂತರ ತನ್ನಷ್ಟಕ್ಕೆ ತಾನೇ ಹುಚ್ಚು ಕಡಿಮೆಯಾಯಿತು. ಹುಚ್ಚು ಕಡಿಮೆಯಾದರೂ ಈರಮ್ಮನು ಯಾವಾಗಲೂ ಅರೆ ಹುಚ್ಚಿಯಂತೆ ವರ್ತಿಸುತ್ತಿದ್ದಳು.

## ೪. ಮನೆಮುರುಕ ಬೆಳ್ಳೀಗೌಡ

ತಾಯಿ ಹುಚ್ಚಿಯಾದುದರಿಂದ ಕೆಲಸಕಾರ್ಯಗಳ ಹೊರೆಯೆಲ್ಲವೂ ಸಂಪೂರ್ಣವಾಗಿ ಸಿದ್ದಣ್ಣನ ಮೇಲೆ ಬಿದ್ದಿತ್ತು. ಈರಮ್ಮನು ಮನಸ್ಸು ಬಂದಾಗ ಸಣ್ಣ ಪುಟ್ಟ ಕೆಲಸಗಳನ್ನು ಮಾಡುತ್ತಿದ್ದಳು. ಉಳಿದ ಕಾಲಗಳಲ್ಲಿ ದಾಯಾದಿ ಕಾಳೇಗೌಡರನ್ನು ಶಪಿಸುತ್ತಾ, ತನ್ನಷ್ಟಕ್ಕೆ ತಾನೆ ಮಾತನಾಡುತ್ತಾ ಕಾಲ ಕಳೆಯುತ್ತಿದ್ದಳು. ಹದಿಮೂರು ವರ್ಷಗಳ ಬಾಲಕನಾಗಿದ್ದ ಸಿದ್ದಣ್ಣನು ಹಿಂದಿನ ನಾಲ್ಕು ವರ್ಷಗಳ ಅವಧಿಯಲ್ಲಿ ಅನುಭವಿಸಿದ್ದ ದೈಹಿಕ ಕಷ್ಟ ಮತ್ತು ಮಾನಸಿಕ ಯಾತನೆಗಳನ್ನು ಇತರರು ಇಡಿಯ ಜೀವಮಾನದಲ್ಲಿ ಅನುಭವಿಸುವುದು ಅಪರೂಪ. ತಂದೆಯ ಮನೆಯ ಸುಖವಸತಿಯಲ್ಲಿ ಬೆಳೆದು ಬಂದವನಿಗೆ, ಏಕಾಏಕಿ ಗೇಣಿದಾರನ ಮಗನಾಗಿ, ದನಗಳ ವಾಸಕ್ಕೂ ಯೋಗ್ಯವಲ್ಲದ ಗುಡಿಸಿಲಿನಲ್ಲಿ ಜೀವಿಸಿ, ಹೊಟ್ಟೆಯ ಪಾಡಿಗಾಗಿ ಹಗಲಿರುಳೂ ದುಡಿಯುವ ದುರವಸ್ಥೆಯು ಒದಗಿತ್ತು. ನರಭಕ್ಷಕ ಹುಲಿಯೊಂದು ತಮ್ಮನನ್ನು ತಿಂದು ತಂದೆಯನ್ನು ಕೊಂದು ಹಾಕಿದ ಪ್ರಸಂಗವು ಸಿದ್ದಣ್ಣನ ಕೋಮಲ ಹೃದಯದ ಮೇಲೆ ಒಂದು ಗದಾ ಪ್ರಹಾರವಾದಂತೆ ಆಗಿತ್ತು. ಆ ಅಸಾಧಾರಣ ಭಯಂಕರ ಪ್ರಸಂಗವನ್ನು ಅವನು ಎಂದೂ ಮರೆಯುವಂತಿರಲಿಲ್ಲ. ಹುಲಿ ತನ್ನ ತಮ್ಮನನ್ನೂ, ತಂದೆಯನ್ನೂ ಕೊಂದು ಹಾಕಿದ ಪ್ರಸಂಗವನ್ನು ಜ್ಞಾಪಿಸಿಕೊಂಡಾಗ ಸಿದ್ದಣ್ಣನಿಗೆ ಅಪರಿಮಿತ ದುಃಖವೂ ಭಯವೂ ಉಂಟಾಗುತ್ತಿತ್ತು. ಹುಣ್ಣಿನ ಮೇಲೆ ಬರೆಯನ್ನೆಳೆದಂತೆ ತಂದೆ ಸತ್ತ ನಾಲ್ಕು ವರ್ಷಗಳಲ್ಲಿ ಉಳಿದ ಒಡಹುಟ್ಟಿದವರನ್ನೂ ಸಹ ಕಳೆದುಕೊಂಡು ಏಕಾಂಗಿಯಾಗಿದ್ದನು. ಅನಂತರ ಜಗತ್ತಿನಲ್ಲಿ ಸಿದ್ದಣ್ಣನಿಗೆ ಉಳಿದ ಬಂಧು ತಾಯಿಯೊಬ್ಬಳೇ ಆಗಿದ್ದಳು. ಅವಳೂ ಕೂಡ ಹುಚ್ಚಿಯಾಗಿದ್ದಳು. ಸಿದ್ದಣ್ಣನು ಎದುರಿಸಬೇಕಾಗಿದ್ದ ಆಪತ್ತುವಿಪತ್ತುಗಳಿಗೂ, ಕಷ್ಟಕಾರ್ಪಣ್ಯಗಳಿಗೂ ಮಿತಿಯೇ ಇರಲಿಲ್ಲ. ವಿವಿಧ ದುಃಖಗಳಿಂದ ಅವನ ಹೃದಯ ಬೆಂದು ಹೋಗಿತ್ತು; ಮನಸ್ಸು ನೊಂದು ಹೋಗಿತ್ತು. ಆಟಪಾಠಗಳಲ್ಲಿ ಮಗ್ನನಾಗಿ ಸುಖವಾಗಿ ಬೆಳೆಯಬೇಕಾದ ಕಾಲದಲ್ಲಿ ಸಿದ್ದಣ್ಣನು ಯಾರೂ ಊಹಿಸಲಾರದ ಅಪರಿಮಿತ ಯಾತನೆಗೆ ಒಳಗಾಗಿದ್ದನು.

ಆದರೂ ಆತನು ಧೈರ್ಯಗೆಡಲಿಲ್ಲ. ಅಗಾಧವಾದ ಕಷ್ಟಗಳನ್ನು ಅನುಭವಿಸಿದ್ದ ಅವನು ಸಣ್ಣ ಪುಟ್ಟ ಕಷ್ಟಗಳಿಗೆ ಹೆದರುವಂತಿರಲಿಲ್ಲ. ಧೈರ್ಯ ಸ್ಥೈರ್ಯ, ಕನಿಕರ ಮುಂತಾದ ಹಲವು ಸದ್ಗುಣಗಳನ್ನು ಆತನು ಸಂಪಾದಿಸಿದ್ದನು. ಜೀವನದಲ್ಲಿ ಕಷ್ಟ ಪರಂಪರೆಗಳನ್ನು ಅನುಭವಿಸಿದವರಿಗೆ ಮಾತ್ರ ಜೀವನವು ಸರಿಯಾಗಿ ಅರ್ಥವಾಗುತ್ತದೆ. ಯಾವ ಕಷ್ಟವೂ ಇಲ್ಲದೆ ಸುಖವಾಗಿ ಬೆಳೆದವರಿಗೆ ಜೀವನವೂ ಅರ್ಥವಾಗುವುದಿಲ್ಲ;

ಇತರರ ಕಷ್ಟವೂ ಅರ್ಥವಾಗುವುದಿಲ್ಲ. ಕುಟುಂಬದ ಮನೆಯನ್ನು ಬಿಡುವ ಪೂರ್ವ ಸಿದ್ದಣ್ಣನು ಪಂಜರವಳ್ಳಿಯಲ್ಲಿದ್ದ ಐಗಳ ಮಠದಲ್ಲಿ ಮೂರು ವರ್ಷಗಳ ಕಾಲ ಅಕ್ಷರಾಭ್ಯಾಸಮಾಡಿ, ಓದುಬರೆಹವನ್ನೂ ಮಗ್ಗಿಯನ್ನೂ ಕಲಿತಿದ್ದನು. ಕಷ್ಟಜೀವನವು ಅವನಿಗೆ ಹಲವು ಪಾಠಗಳನ್ನು ಕಲಿಸಿದ್ದಿತು. ಕಷ್ಟದಿಂದ ಅವನಲ್ಲಿ ವಿಚಾರಶಕ್ತಿ ಕುದುರಿತ್ತು. ತನ್ನ ತಾಯಿತಂದೆಗಳನ್ನೂ, ತನ್ನನ್ನೂ ಬೀದಿಯ ಭಿಕಾರಿಗಳನ್ನಾಗಿ ಮಾಡಿದ ಕಾಳೇಗೌಡರನ್ನೂ, ಬಡಬಗ್ಗರನ್ನು ಸುಲಿಗೆ ಮಾಡುತ್ತಿದ್ದ ಬೆಳ್ಳೇಗೌಡರನ್ನೂ, ತಿರುಮಲ ಭಟ್ಟರನ್ನೂ ನೆನೆಸಿಕೊಂಡಾಗ ಅವನ ರಕ್ತ ಕುದಿಯುತ್ತಿತ್ತು. ತಾನು ದೊಡ್ಡವನಾದ ಮೇಲೆ ದೇವರ ಅನುಗ್ರಹದಿಂದ ಆ ತ್ರಿಮೂರ್ತಿಗಳಿಗೆ ಬುದ್ಧಿ ಕಲಿಸುವ ಕಾಲ ಒದಗಬಹುದೆಂದು ಅವನು ಯೋಚಿಸುತ್ತಿದ್ದನು. ತಾನೊಬ್ಬ ಗಣ್ಯವ್ಯಕ್ತಿಯಾಗದ ಹೊರತು ಅವರಿಗೆ ಬುದ್ಧಿಯನ್ನು ಕಲಿಸುವುದು ಸಾಧ್ಯವಿಲ್ಲವೆಂದು ಅವನಿಗೆ ಗೊತ್ತಿತ್ತು. ಎಲ್ಲಕ್ಕಿಂತ ಮೊದಲು ತಾನು ಬೆಳ್ಳೇಗೌಡರ ಋಣಬಾಧೆಯಿಂದ ಮುಕ್ತನಾಗಬೇಕೆಂದು ನಿರ್ಧರಿಸಿದನು. ಮುಂಬರುವ ಮಾಘ ಬಹುಳ ಅಮಾವಾಸ್ಯೆಯ ಒಳಗೆ ತಾಯಿ ಈರಮ್ಮನು ಬೆಳ್ಳೇಗೌಡರಲ್ಲಿ ಅಡವು ಇಟ್ಟಿದ್ದ ಗೆಜ್ಜೆಡ್ಡಿಕೆಯನ್ನು ಬಿಡಿಸಿಕೊಂಡು ಸಾಲವನ್ನು ತೀರಿಸಬೇಕೆಂಬ ಹಟದಿಂದ ಬೇಸಾಯದ ಕಾರ್ಯವನ್ನು ಇಮ್ಮಡಿ ಶ್ರದ್ಧೆಯಿಂದ ಮಾಡುತ್ತಿದ್ದನು. ಅವನ ಅದೃಷ್ಟಕ್ಕೆ ಸರಿಯಾಗಿ ಆ ವರ್ಷ ತೋಟಗದ್ದೆಗಳಲ್ಲಿ ಚೆನ್ನಾಗಿ ಫಸಲಾಗಿತ್ತು. ಪೈರು ಕಟಾವಾದನಂತರ ಮಾಮೂಲಿನಂತೆ ತಿರುಮಲಭಟ್ಟರಿಗೆ ಕೊಡಬೇಕಾದ ಗೇಣಿಯನ್ನು ಕೊಟ್ಟನಂತರ, ಉಳಿದ ಅಡಕೆಯನ್ನು ಪವಿತ್ರಪುರದ ಅಡಕೆ ವ್ಯಾಪಾರಿ ಅಲ್ಲಾವುದ್ದೀನ್ ಸಾಹೇಬರಿಗೆ ಒಳ್ಳೆಯ ಬೆಲೆಗೆ ಮಾರಿದ್ದನು. ಅಡಕೆಯನ್ನು ಬೆಳ್ಳೇಗೌಡರಿಗೆ ಕೊಟ್ಟಿದ್ದರೆ ಅವರು "ಸೀಮೆ ಧಾರಣೆಯನ್ನು" ನಿಗದಿ ಮಾಡುತ್ತಿದ್ದರು. ಸೀಮೆ ಧಾರಣೆಯನ್ನು ತಪ್ಪಿಸಿಕೊಳ್ಳುವ ಸಲುವಾಗಿ ಅಡಕೆಯನ್ನು ಅಲ್ಲಾವುದ್ದೀನ್ ಸಾಹೇಬರಿಗೆ ಮಾರಿದನು. ಅಡಕೆಯನ್ನು ತಮಗೆ ಕೊಡಲಿಲ್ಲವೆಂಬ ಕಾರಣದಿಂದ ಬೆಳ್ಳೇಗೌಡರಿಗೆ ಸಿದ್ದಣ್ಣನ ಮೇಲೆ ವಿಪರೀತ ಸಿಟ್ಟು ಬಂದಿತು. ಸಾಲದುದಕ್ಕೆ ಮಾಘ ಬಹುಳ ಅಮಾವಾಸ್ಯೆಯ ಒಳಗೆ ಸಿದ್ದಣ್ಣನು ಬೆಳ್ಳೇಗೌಡರ ಸಾಲವನ್ನು ತೀರ್ಮಾನ ಮಾಡಲಾಗಲಿಲ್ಲ. ಯಾಕೆಂದರೆ, ಅಲ್ಲಾವುದ್ದೀನ್ ಸಾಹೇಬರಿಂದ ಬರಬೇಕಾಗಿದ್ದ ಹಣವನ್ನು ಸಾಹೇಬರು ಸಿದ್ದಣ್ಣನಿಗೆ ಕಳುಹಿಸುವುದು ಸ್ವಲ್ಪ ವಿಳಂಬವಾಯಿತು. ಮಾಘ ಬಹುಳ ಅಮಾವಾಸ್ಯೆಯು ಕಳೆದ ಮರುದಿನವೇ ಬೆಳ್ಳೇಗೌಡರೂ ಅವರ ಹೆಂಡತಿ ನಾಗಮ್ಮಹೆಗ್ಗಡ್ತಿಯವರೂ ಈರಮ್ಮನು ಅಡವು ಇಟ್ಟಿದ್ದ ಬಂಗಾರದ ಅಡ್ಡಿಕೆ ತಮ್ಮದಾಯಿತೆಂದು ಸಂತೋಷಪಟ್ಟಿದ್ದರು.

ಬೆಳ್ಳೇಗೌಡರು ಬಡವರ ರಕ್ತವನ್ನು ಹೀರಿ ಶ್ರೀಮಂತರಾಗಿದ್ದರೆಂಬ ವಿಚಾರ ಸಿದ್ದಣ್ಣನಿಗೆ ಗೊತ್ತಿತ್ತು. ಆದರೆ ವಾಯಿದೆ ಗತಿಸಿದೆಯೆಂಬ ಕಾರಣದಿಂದ ಅವರು ಕೇವಲ ನೂರು ಅಥವಾ ನೂರಿಪ್ಪತ್ತು ರೂಪಾಯಿಗಳ ಸಾಲಕ್ಕಾಗಿ ಮೂರುನೂರು ಅಥವಾ ನಾಲ್ಕುನೂರು ರೂಪಾಯಿಗಳ ಬೆಲೆಬಾಳುವ ಬಂಗಾರದ ಆಭರಣವನ್ನು ಅಪಹರಿಸುತ್ತಾರೆಂಬ ಕಲ್ಪನೆ ಅವನಿಗಿರಲಿಲ್ಲ.

ತನ್ನ ತರ್ಕ ತಪ್ಪಾಗಿತ್ತೆಂದು ಸಿದ್ದಣ್ಣನಿಗೆ ಅನಂತರ ಗೊತ್ತಾಯಿತು. ಬೆಳ್ಳೇಗೌಡರು ಸಾಮಾನ್ಯ ಸಾಹುಕಾರರಾಗಿಲಿಲ್ಲ. ಅವರ ಕಥೆಯ ಆದಿಭಾಗವನ್ನು ಸ್ವಲ್ಪಮಟ್ಟಿಗೆ ಓದುಗರಿಗೆ ಈ ಹಿಂದೆಯೇ ತಿಳಿಸಲಾಗಿದೆ. ಆ ಕಥೆಯನ್ನು ಮುಂದುವರಿಸುವುದು ಇಲ್ಲಿ ಅಗತ್ಯ. ಬಡಬಗ್ಗರನೇಕರು ಅವರ ಬಳಿ ಸಾಲಕ್ಕಾಗಿ ಬರುತ್ತಿದ್ದರು. ಸಾಲವಾಗಿ ಕೊಟ್ಟ ಹಣಕ್ಕೆ ಬೆಳ್ಳೇಗೌಡರು ನೂರಕ್ಕೆ ಹದಿನೆಂಟು ರೂಪಾಯಿಗಳಿಂದ ಹಿಡಿದು ಇಪ್ಪತ್ತನಾಲ್ಕು ರೂಪಾಯಿಗಳ ವರೆಗೆ ಬಡ್ಡಿಯನ್ನು ವಿಧಿಸುತ್ತಿದ್ದರು. ಸಾಲಗಾರರು ಬರೆದುಕೊಟ್ಟ ಪ್ರಾಮಿಸರಿ ನೋಟುಗಳಲ್ಲಿ ಬರೆದುಕೊಟ್ಟ ದಿನದಿಂದ ಬಡ್ಡಿಯನ್ನು ಕೊಡಬೇಕೆಂಬ ಷರತ್ತು ಇದ್ದರೂ ಗೌಡರು ಬಡ್ಡಿಯನ್ನು ಮುಂಗಡವಾಗಿಯೇ ಅಸಲಿನಲ್ಲಿ ಕಳೆದುಕೊಂಡು, ಉಳಿದ ಮೊಬಲಗನ್ನು ಸಾಲಗಾರರಿಗೆ ಕೊಡುತ್ತಿದ್ದರು. ಹಣದ ಅವಶ್ಯಕತೆ ಇದ್ದವರು ಗೌಡರ ಷರತ್ತುಗಳಿಗೆಲ್ಲಾ ಒಪ್ಪುತ್ತಿದ್ದರು. ಪ್ರಾಮಿಸರಿ ನೋಟುಗಳನ್ನು ಬರೆಯಿಸಿಕೊಳ್ಳುವಾಗ ಗೌಡರ ಬಾಯಲ್ಲಿ ಜೇನು ಸುರಿಯುವಂತೆ ಮಾತುಗಳು ಹೊರಡುತ್ತಿದ್ದವು. ಸಾಲಗಾರರ ಭಾಗ್ಯ ವಿಧಾತನಂತೆ ಅವರು ವರ್ತಿಸುತ್ತಿದ್ದರು. ಅಹಂಕಾರದ ಜೊತೆಗೆ ನಯವಿನಯ, ಕೃತ್ರಿಮದ ಜೊತೆಗೆ ದರ್ಪ, ಒಮ್ಮೊಮ್ಮೆ ಬೆಣ್ಣೆಯಲ್ಲಿ ಕೂದಲನ್ನೆಳೆದಂತೆ ಆಡುವ ಮಾತುಗಳು ಗೌಡರ ಗುಣಗಳನ್ನು ಪ್ರತಿಬಿಂಬಿಸುತ್ತಿದ್ದವು. ಗೌಡರು ಹಿಕ್ಮತ್ತಿನವರು. ಪ್ರಾಮಿಸರಿ ನೋಟುಗಳನ್ನು ಬರೆಸಿಕೊಂಡನಂತರ ಅವರು ಸಾಲುಗಾರರಿಗೆ ಯಾವ ತಗಾದೆಯನ್ನೂ ಮಾಡುತ್ತಿರಲಿಲ್ಲ. ಗದ್ದೆಯ ಅಥವಾ ಅಡಕೆಯ ಕೊಯಿಲು ಪ್ರಾರಂಭವಾಗುವ ಒಂದೆರಡು ತಿಂಗಳ ಮುಂಚೆ ಕೋರ್ಟಿನಲ್ಲಿ ದಾವೆಯನ್ನು ದಾಖಲುಮಾಡುತ್ತಿದ್ದರು. ದಾವೆಯು ದಾಖಲಾದ ನಂತರ ಕಾನೂನು ಪ್ರಕಾರ ಕೋರ್ಟಿನವರು ಪ್ರತಿವಾದಿಗೆ ಸಮನ್ಸ್ ಕಳುಹಿಸಬೇಕು. ಸಮನ್ಸ್ ತಲುಪಿದ ನಂತರ ಪ್ರತಿವಾದಿಯು ತನ್ನ ಹೇಳಿಕೆಯನ್ನು ಹೀಯರಿಂಗು ದಿನ ಕೋರ್ಟಿಗೆ ಹಾಜರು ಮಾಡಬೇಕು. ಒಂದು ವೇಳೆ ಪ್ರತಿವಾದಿಯು ತನ್ನ ಹೇಳಿಕೆಯಲ್ಲಿ ವಾದಿಯ ಹಕ್ಕನ್ನು ನಿರಾಕರಿಸಿದರೆ, ನ್ಯಾಯಾಧೀಶರು ವಿಚಾರಣೆ ನಡೆಸಿ ಅನಂತರ ತೀರ್ಪನ್ನು ಕೊಡಬೇಕು. ಸಮನ್ಸ್ ಜಾರಿಯಾದನಂತರ ಪ್ರತಿವಾದಿಯು ಹೀಯರಿಂಗು ದಿನ ಕೋರ್ಟಿಗೆ ಹಾಜರಾಗದಿದ್ದಲ್ಲಿ ಪ್ರತಿವಾದಿಯ ಗೈರು ಹಾಜರಿನಲ್ಲಿ ವಾದಿಯ ಪರ ಡಿಕ್ರಿಯಾಗುತ್ತದೆ. ಕಾನೂನಿನ ಈ ನಿಬಂಧನೆಗಳನ್ನು ಗೌಡರು ಚೆನ್ನಾಗಿ ತಿಳಿದುಕೊಂಡಿದ್ದರು. ಪ್ರತಿವಾದಿಗೆ ಸಮನ್ಸ್ ಜಾರಿ ಮಾಡುವುದು ಕೋರ್ಟಿನ ಉದ್ದೇಶವಾಗಿದ್ದರೆ, ಸಮನ್ಸ್ ಜಾರಿಯಾಗದಂತೆ ಮಾಡುವುದು ಗೌಡರ ಉದ್ದೇಶವಾಗಿತ್ತು.

ಕೋರ್ಟಿನಿಂದ ಸಮನ್ಸ್ ಹೊರಡುವುದನ್ನೇ ಗೌಡರು ಕಾಯ್ದು ನೋಡುತ್ತಿದ್ದರು. ಸಮನ್ಸ್ ಹೊರಟೊಡನೆ ಅದನ್ನು ಜಾರಿ ಮಾಡುವ ಜವಾನನನ್ನು ಗೌಡರು ತಮ್ಮ ಬುಟ್ಟಿಗೆ ಹಾಕಿಕೊಳ್ಳುತ್ತಿದ್ದರು. ಅನಂತರ ಜವಾನನನ್ನು ಗೌಡರು ತಮ್ಮ ಮನೆಗೆ ಕರೆದೊಯ್ಯುತ್ತಿದ್ದರು. ಗೌಡರ ಮನೆಯಲ್ಲಿ ಜವಾನನಿಗೆ ಔತಣದ ಊಟವಾಗುತ್ತಿತ್ತು. ಅವನಿಗೆ ಕುಡಿಯುವ ಚಟವಿದ್ದಿದ್ದರೆ ಬಗನೆ ಕಳ್ಳನ್ನು ಅಥವಾ ಅಕ್ಕಿಯ ಭೋಜವನ್ನು ಕುಡಿಸುತ್ತಿದ್ದರು. ಅನಂತರ ಇಬ್ಬರೂ ಷರೀಕಾಗಿ ಸಮನ್ಸ್ ಮೇಲೆ “ಪ್ರತಿವಾದಿಯು

ಸಮನ್ಸ್ ತೆಗೆದುಕೊಳ್ಳಲು ತಿರಸ್ಕಾರ ಮಾಡಿದ್ದರಿಂದ ನಕಲನ್ನು ಆತನ ವಾಸದ ಮನೆಗೆ ಚಿಗಟಾಯಿಸಿ ಅಸಲಿಗೆ ಹಾಜರಿದ್ದವರ ರುಜು ಪಡೆಯಲಾಯಿತು" ಎಂದು ಸುಳ್ಳು ಷರಾ ಬರೆಯಿಸಿ, ಕಳ್ಳಿನ ನಾಗನಾಯ್ಕ, ವಸೂಲಿಯ ಅಬ್ದುಲ್ಲಾ ಮೊದಲಾದ ಅವರ ಕಡೆ ಗಣಂಗಳ ರುಜು ಹಾಕಿಸುತ್ತಿದ್ದರು. ಮೋಸದ ನಡೆವಳಿಕೆ ಮುಗಿದ ನಂತರ, ಗೌಡರು ಸಮನ್ಸ್ ಜವಾನನಿಗೆ ಮೂರು ನಾಲ್ಕು ರೂಪಾಯಿಗಳನ್ನೂ, ಅಡಕೆ, ಬಾಳೆಯಗೊನೆ, ಬಾಳೆಯ ಎಲೆ ಮುಂತಾದವುಗಳನ್ನೂ ಕೊಟ್ಟು ಕಳುಹಿಸುತ್ತಿದ್ದರು. ಸಾಲಗಾರ ಪ್ರತಿವಾದಿಗೆ ದಾವೆಯ ವಿಚಾರ ಕನಸಿನಲ್ಲಿಯೂ ಗೊತ್ತಾಗುವಂತಿರಲಿಲ್ಲ. ಹೀಯರಿಂಗು ದಿನ ಕೋರ್ಟಿನವರು ಪ್ರತಿವಾದಿಯ ಹೆಸರನ್ನು ಕೂಗಿಸುತ್ತಿದ್ದರು. ಪ್ರತಿವಾದಿಯು ಸಮನ್ಸನ್ನು ತಿರಸ್ಕಾರ ಮಾಡಿದ್ದಾನೆಂಬ ಜವಾನನು ವರದಿ ಮಾಡಿರುತ್ತಿದ್ದನು, ಪ್ರತಿವಾದಿಯು ಹಾಜರಿಲ್ಲವೆಂಬ ಕಾರಣದಮೇಲೆ ನ್ಯಾಯಾಧೀಶರು ವಾದಿಯ ಪರ ಡಿಕ್ರಿಯನ್ನು ಮಾಡುತ್ತಿದ್ದರು.

ಡಿಕ್ರಿಯಾದನಂತರ, ಸಾಲಗಾರನು ಅಡಕೆ ಬತ್ತಗಳನ್ನು ರೇಖೆಮಾಡುತ್ತಿರುವುದನ್ನು ಗೌಡರು ಬೆಕ್ಕಿನಂತೆ ಸದ್ದಿಲ್ಲದೆ ನೋಡುತ್ತಾ ಇದ್ದರು. ಸಂಪೂರ್ಣ ರೇಖೆಯಾದೊಡನೆ ಕೋರ್ಟಿನಲ್ಲಿ ಅಮಲ್ಜಾರಿ ದಾಖಲ್ಮಾಡಿಸುತ್ತಿದ್ದರು. ಕೋರ್ಟಿನಿಂದ ಜಫ್ತಿ ವಾರಂಟು ಹೊರಟೊಡನೆ ವಾರಂಟನ್ನು ಜಾರಿಮಾಡುವ ಅಮೀನರನ್ನು ಗೌಡರು ತಮ್ಮ ಕಿಸೆಗೆ ಹಾಕಿಕೊಳ್ಳುತ್ತಿದ್ದರು. ಅಮೀನರಿಗೆ ಗೌಡರ ಮನೆಯಲ್ಲಿ ಔತಣದ ಊಟವಾಗುತ್ತಿತ್ತು. ಅಮೀನರು ಬ್ರಾಹ್ಮಣರಾಗಿದ್ದರೆ, ಬ್ರಾಹ್ಮಣರಿಂದ ತಯಾರಾದ ಭೋಜನ ಅವರಿಗೆ ಸಿಕ್ಕುತ್ತಿತ್ತು. ಉಳಿದವರಾಗಿದ್ದರೆ ಕೋಳಿ, ಕಡಬು, ಬಗನೆಕಳ್ಳು ಅಥವಾ ಅಕ್ಕಿಯ ಭೋಜ, ಇವುಗಳಿಂದ ಕೂಡಿದ ಭೋಜನ ದೊರೆಯುತ್ತಿತ್ತು. ಒಮ್ಮೊಮ್ಮೆ ಅಮೀನರಿಗೆ ಗೌಡರ ಮನೆಯಲ್ಲಿ ಅಭ್ಯಂಜನವೂ ಆಗುತ್ತಿತ್ತು. ಇಷ್ಟೆಲ್ಲಾ ಉಪಚಾರವಾದನಂತರ, ಮರುದಿನ ಬೆಳಗಿನಜಾವ ಅಮೀನರಿಗೆ ಒಳ್ಳೆಯ ಕಾಫಿಯನ್ನು ಕೊಡಿಸಿ, ಅವರನ್ನೂ, ಜೊತೆಯಲ್ಲಿ ಕಳ್ಳಿನ ನಾಗನಾಯ್ಕ, ವಸೂಲಿಯ ಅಬ್ದುಲ್ಲಾ, ಗಾಡಿಯ ಕಿಟ್ಟ, ಮಾದಾರ ಚೆನ್ನ ಮುಂತಾದ ಪರಿವಾರದವರನ್ನೂ ಗೌಡರು ಕರೆದುಕೊಂಡು ಸಾಲಗಾರನ ಮನೆಗೆ ಹೋಗುತ್ತಿದ್ದರು.

ಕೋಳಿಯ ಮರಿಯ ಮೇಲೆ ಗಿಡುಗನೆರಗುವಂತೆ, ಬಡ ಕುರಿಯ ಮೇಲೆ ತೋಳ ಬೀಳುವಂತೆ, ಎಲ್ಲರೂ ಸೇರಿ ಸಾಲಗಾರನ ಮನೆಯನ್ನು ಸುತ್ತುವರಿಯುತ್ತಿದ್ದರು. ಸಾಲಗಾರನ ಮನೆಯಲ್ಲಿದ್ದ ಎಲ್ಲಾ ಸಾಮಾನುಗಳನ್ನೂ ಜಫ್ತಿಯ ನೆಪದಲ್ಲಿ ದೋಚಿಕೊಳ್ಳುತ್ತಿದ್ದರು. ಹೆಂಗಸರು ಮೈಮೇಲಿದ್ದ ಬೆಂಡೋಲೆ, ಮಂಗಳಸೂತ್ರಗಳನ್ನೂ ಸಹ ಗೌಡರು ಬಿಡುತ್ತಿರಲಿಲ್ಲ. ತಾವು ದೋಚಿಕೊಂಡ ಎಲ್ಲಾ ಮಾಲುಗಳನ್ನು ಗೌಡರು ಜಫ್ತಿ ಪಟ್ಟಿಯಲ್ಲಿ ನಮೂದಿಸುತ್ತಿರಲಿಲ್ಲ. ಹತ್ತು ಮಾಲುಗಳನ್ನು ತೆಗೆದುಕೊಂಡರೆ ಐದು ಮಾಲುಗಳನ್ನು ಜಫ್ತಿ ಪಟ್ಟಿಯಲ್ಲಿ ನಮೂದಿಸುತ್ತಿದ್ದರು. ಉಳಿದವುಗಳನ್ನು ಹಾಗೆಯೇ ಮನೆಗೆ ಕೊಂಡೊಯ್ಯುತ್ತಿದ್ದರು. ಮೋಸದ ಜಫ್ತಿಯ ಕ್ರಮ ನಡೆದನಂತರ, ಗೌಡರು

ಅಮೀನರಿಗೆ ಇಪ್ಪತ್ತು ಅಥವಾ ಮೂವತ್ತು ರೂಪಾಯಿಗಳನ್ನು ಕೊಡುತ್ತಿದ್ದರು. ನೂರಾರು ರೂಪಾಯಿಗಳ ಅಕ್ರಮಲಾಭ ದೊರೆತಾಗ, ಅಮೀನರಿಗೆ ಇಪ್ಪತ್ತು ಅಥವಾ ಮೂವತ್ತು ರೂಪಾಯಿಗಳನ್ನು ಕೊಡುವುದು ಗೌಡರಿಗೆ ನಷ್ಟವೆನಿಸುತ್ತಿರಲಿಲ್ಲ. ಕಂಡ ಮಾಲುಗಳನ್ನು ಹರಾಜು ಮಾಡಿದ ನಂತರವೂ ಕೂಡ, ಡಿಕ್ರಿಯ ಮೊಬಲಗು ಪೂರ್ತಿಯಾಗಿ ಸಂದಾಯವಾಗುತ್ತಿರಲಿಲ್ಲ. ಬೆಳ್ಳೀಗೌಡರು, ಡಿಕ್ರಿಯನ್ನು ಅನೇಕ ವರ್ಷಗಳ ಕಾಲ ಜೀವಂತವಾಗಿ ಇಡುತ್ತಿದ್ದರು. ಎಂದಾದರೊಮ್ಮೆ ಸಾಲಗಾರ ಮತ್ತೊಮ್ಮೆ ಚಿಗುರಿದಾಗ ಗೌಡರು ಅಮಲ್ಜಾರಿ ಪ್ರಯೋಗವನ್ನು ಮಾಡಿ ಸಾಲಗಾರನ ಜೀವನದ ಕುಡಿಯನ್ನು ಚಿವುಟಿಹಾಕುತ್ತಿದ್ದರು.

ಅಲ್ಲಾವುದ್ದೀನ್ ಸಾಹೇಬರಿಂದ ಹಣಬಂದ ಮರುದಿನವೇ ಸಿದ್ದಣ್ಣನು ಹಣವನ್ನು ತೆಗೆದುಕೊಂಡು ಗೆಜ್ಜೆಡ್ಡಿಕೆಯನ್ನು ಬಿಡಿಸಿಕೊಳ್ಳುವ ಉದ್ದೇಶದಿಂದ ಬೆಳ್ಳೀಗೌಡರ ಮನೆಗೆ ಹೋದನು. ಅಂದಿಗೆ ಮಾಘ ಬಹುಳ ಅಮಾವಾಸ್ಯೆ ಕಳೆದು ಕೇವಲ ಐದು ದಿನಗಳಾಗಿದ್ದವು. ಸಿದ್ದಣ್ಣನು ಬೆಳ್ಳೀಗೌಡರ ಮನೆಗೆ ಹೋದಾಗ, ಚೌಕಿಯ ಹೆಬ್ಬಾಗಿಲಿನ ಹತ್ತಿರ ಅವರ ಹೆಂಡತಿ ನಾಗಮ್ಮ ಹೆಗ್ಗಡಿತಿಯವರು ಒಂದು ಹಗ್ಗದ ಮೇಲೆ ತಮ್ಮ ಜರಿ ಸೀರೆಯನ್ನು ಹರಡುತ್ತಿದ್ದರು, ನಾಗಮ್ಮಹೆಗ್ಗಡಿತಿಯವರು ಆ ಪ್ರದೇಶಕ್ಕೆ ತಾನೊಬ್ಬಳು ರಾಣಿಯೆಂದು ತಿಳಿದಿದ್ದರು. ಆ ಪ್ರದೇಶದಲ್ಲಿ ಪ್ರಥಮ ಶ್ರೇಣಿಯ ಸಾಹುಕಾರರಾಗಿದ್ದ ಬೆಳ್ಳೀಗೌಡರ ಕೈಹಿಡಿದ ತಾನು ರಾಣಿಗೇನೂ ಕಡಿಮೆಯಿಲ್ಲವೆಂದು ಆಕೆಯ ಭಾವನೆಯಾಗಿತ್ತು. ತನ್ನ ಗಂಡನು ನೂರಾರು ಮನೆಗಳನ್ನು ಮುರಿದು ಹಣವಂತನಾಗಿದ್ದನೆಂಬ ವಿಚಾರ ಆಕೆಯ ತಲೆಯಲ್ಲಿ ಎಂದೂ ಹೊಳೆದಿರಲಿಲ್ಲ. ಗಂಡನು ಒಳ್ಳೊಳ್ಳೆಯ ಸೀರೆಗಳನ್ನು ತಂದು ಕೊಡುತ್ತಿದ್ದನು. ಜೊತೆಗೆ ಬಡವರು ಅಡವು ಇಟ್ಟ ಕಾಲಕ್ಕೆ ಸರಿಯಾಗಿ ಬಿಡಿಸಿಕೊಳ್ಳದೆ ಇದ್ದ ಒಡವೆಗಳು ಅವರವಾಗುತ್ತಿದ್ದವು. ಸಿಂಗರಿಸಿಕೊಂಡಾಗ ತಾನೊಬ್ಬಳು ಸುಸಂಸ್ಕೃತಿಯ ಪ್ರತಿಮೆಯೆಂಬ ಭಾವನೆ ಆಕೆಗೆ ಬರುತ್ತಿತ್ತು. ಬಡವರೆಲ್ಲರೂ ಅನಾಗರಿಕ ಮೃಗಗಳೆಂದು ಹೆಗ್ಗಡ್ತಿಯವರು ತಿಳಿದಿದ್ದರು. ನಾಗಮ್ಮ ಹೆಗ್ಗಡ್ತಿಯವರು ಸಿದ್ದಣ್ಣನನ್ನು ನೋಡಿದೊಡನೆ ಅಹಂಕಾರದ ವಾಣಿಯಲ್ಲಿ "ಏನ್ ಸಿದ್ದಾ, ಯಾಕ್ಬಂದ್ಯೋ" ಎಂದು ಕೇಳಿದರು. ಸಿದ್ದಣ್ಣನು "ಸಾಹುಕಾರ್ರಿಗಿಂತ ಸಾಹುಕಾರ್ರ ಮನೆ ಹೆಂಗಸರಿಗೇ ಸೊಕ್ಕು ಹೆಚ್ಚು" ಎಂದು ಮನಸ್ಸಿನಲ್ಲಿಯೇ ಅಂದುಕೊಂಡನು. ಹೆಗ್ಗಡ್ತಿಯವರನ್ನು ಕುರಿತು "ಏನಿಲ್ಲಾ ಹೆಗ್ಗಡ್ತರೆ, ನಮ್ಮಪ್ಪ ಹ್ವಾದ್ವಾಲ ವುಂದು ಗೆಜ್ಜಡ್ಕಿ ಅಡು ಇಟ್ಟು, ನಿಮ್ಮಲ್ಲಿ ಸಾಲ ತಗುಂಡಿತ್ತು. ಆ ಅಡ್ಕಿ ಬಿಡ್ಸುಗುಣಾನ ಅಂತ ಬಂದೆ".

"ಏನಂದೆ? ಗೆಜ್ಜಡ್ಕಿ! ಎಲ್ಯದೆ? ಅದನ್ನ ಬಿಡ್ಸುಗುಳು ವಾಯ್ದೆ ಹೋಗಿ ಎಂಟ್‌ದಿನ ಆತು. ನಮ್ದುಡ್ಡು ನಿಂಗಾತು; ನಿನ್ನಡ್ಕಿ ನಮ್ಗಾತು."

"ಮಕ್ಳು ಮರಿ ಇದ್ದೋರು ನೀವೇ ಹೀಂಗಂದ್ರೆ ದೇವ್ರು ಮೆಚ್ಚೋಕಿಲ್ಲಾ ಹೆಗ್ಗಡ್ತರೆ."

"ಕೊಟ್ಟೋರ್ಗಂಟು ವಾಯ್ದೀಗೆ ಸಮ್ನಾಗಿ ಕೊಟ್ರೆ ದೇವ್ರು ಮೆಚ್ತಾನೆ ಇಲ್ದೆ ಇದ್ರೆ ದೇವ್ರು ಹ್ಯಾಂಗೆ ಮೆಚ್ತಾನೋ ಸಿದ್ದಾ?"

"ನಿಮ್ಮತ್ರ ಯಾಕವ್ವಾ ಮಾತು. ನಾ ಗೌಡ್ರ ಹ್ವತ್ರಾನೆ ಹೋತೀನಿ."

"ಹೋಗ್ ಹೋಗ್. ಗೌಡ್ರೇನು ಬ್ಯಾರೆ ಹೇಳ್ತಾರೆ ಅಂತಾ ಮಾಡಿಯೇನು?"

ಸಿದ್ದಣ್ಣನು ಹೆಬ್ಬಾಗಿಲನ್ನು ದಾಟಿ ಮುಂದಕ್ಕೆ ಹೋದನು. ಬೆಳ್ಳೇಗೌಡರು ಜಗಲಿಯಲ್ಲಿ ಜಮಖಾನೆಯ ಮೇಲೆ ಒಂದು ದಿಂಬಿಗೊರಗಿ ಕುಳಿತಿದ್ದರು. ಅವರ ಮುಂದೆ ಇಳಿಜಾರಾದ ಮೇಜಿನಂತೆ ಒಂದು ಪೆಟ್ಟಿಗೆಯಿತ್ತು. ಪೆಟ್ಟಿಗೆಯ ಮೇಲೆ ಎರಡು ಮೂರು ಲೆಕ್ಕದ ಪುಸ್ತಕಗಳಿದ್ದವು. ಸಿದ್ದಣ್ಣನು ತೆಣೆಯ ಮೇಲೆ ನಿಂತು, ಬಗ್ಗಿ ಭಕ್ತಿಯಿಂದ ಗೌಡರಿಗೆ ನಮಸ್ಕರಿಸಿದನು. ಗೌಡರು ಪ್ರತಿ ನಮಸ್ಕಾರ ಮಾಡಲಿಲ್ಲ. ಪ್ರತಿ ನಮಸ್ಕಾರಕ್ಕೆ ಬದಲಾಗಿ ಸಿದ್ದಣ್ಣನನ್ನು ದುರುಗುಟ್ಟಿಕೊಂಡು ನೋಡುತ್ತ ದರ್ಪದ ವಾಣಿಯಲ್ಲಿ "ಯಾಕ್ಬಂದೆ?" ಎಂದು ಕೇಳಿದರು.

"ನಮ್ಮವ್ವ ನಿಮ್ಮ ಹ್ವತ್ರ ಹ್ವಾದಕಾಲ ಅಡು ಇಟ್ಟ ಗೆಜ್ಜಡ್ಕಿ ಬಿಡ್ಸುಗುಳಾನ ಅಂತ ಬಂದೆ."

"ನಿನ್ನವ್ವ, ಮಾಗ್ಳೋಳ ಅಮಾಸೆ ವಳ್ಗೆ ಬಿಡ್ಸುಗುಳದೆ ಇದ್ರೆ ಮಾಲ್ ನಂಗೇ ಅಂತ ಸರ್ತ್ ಹಾಕಿ ಕರಾರು ಬರ್ಕೊಟ್ಟದೆ. ವಾಯ್ದೆ ಹೋಗಿ ಇಂದೀಗೆ ಐದ್ ದಿನಾತು. ಮದ್ಲೇ ನೀ ಬಂದಿದ್ರೆ ನಿನ್ ಮಾಲ್ ನಿಂಗೇ ಕೊಡ್ತಿದ್ದೆ ಈಗೇನ್ ಮಾಡೂದು? ನಾ ಆಗ್ಲಿ ನೀ ಆಗ್ಲಿ ಮಾತಿನ್ ಪರ್ಕಾರ ನಡ್ಕೂಬೇಕಲ್ಲಾ. ಈಗೇನ್ಮಾಡೂದು? ನಂದೇನ್ ತಪ್ಪಿಲ್ಲಪ್ಪ"

"ಏನ್ ಸ್ವಾಮಿ, ನೂರ್ ನೂರಿಪ್ಪತ್ತು ರೂಪಾಯಿಗೆ, ಮುನ್ನೂರು ನಾನೂರು ರೂಪಾಯಿನ ಮಾಲ್ ನೀವು ಮುರ್ಗ್ದೆ ಹಾಕುಣೂದು ಯಾವ್ ನ್ಯಾಯ? ನನ್ ತಿತಿ ಗತಿ ನಿಮ್ಗೆ ಗೊತ್ತೇ ಅದೆ. ನಾ ವಬ್ಬಂಟಿಗ. ಅವ್ವಗೆ ಹುಚ್ಚು. ಬಡತನ ಹ್ವಟ್ಟೆ ಮ್ಯಾಲೆ ಹ್ವಡೀ ಬ್ಯಾಡಿ ಸ್ವಾಮಿ."

"ನೋಡ್ ಸಿದ್ದಾ, ನಿನ್ನೆ ಹುಟ್ಗುಂಡು ಇಂದ್ ಕಣ್ ಬಿಡಾವ ನೀನು ನಂಗೆ ಧರ್ಮಾ ಕರ್ಮದ ಯಿಚಾರ ಹೇಳೂದ್ ಬ್ಯಾಡ. ನಿಂಗಿಂತ ನಂಗೆ ಹೆಚ್ಚು ಮಣಗಾಲ ಆಗ್ಯದೆ. ಧರ್ಮಾ ಕರ್ಮ ಇಟ್ಗುಂಡು ಯವ್ಹಾರ ನಡಿಸ್ಗುಂಡು ಬತ್ತಾ ಇರೋದ್ಕೇ, ನಂಗೆ ದೇವ್ರು ಆಸ್ತಿ ಪಾಸ್ತಿ, ಮಕ್ಕಳು ಮರಿ, ಚಂದಾಗಿ ಕೊಟ್ಟಾನೆ. ಅದೆಲ್ಲಾ ಹೆಚ್ ಮಾತಾಡ್ಬೇಡ. ಸುಮ್ಮನೆ ಹೊಲ್ಟೋಗು."

ಸಿದ್ದಣ್ಣನಿಗೆ ಗೌಡರ ಮಾತುಗಳನ್ನು ಕೇಳಿ ಆಶ್ಚರ್ಯವೂ ಸಿಟ್ಟು ಒಂದೇ ಸಾರಿ ಉಂಟಾಗಿತ್ತು. ಗೌಡರು ಆಗಿನ ಕಾಲದ ಸುಸಂಸ್ಕೃತರಂತೆ ಉಡುಪನ್ನು ಧರಿಸುತ್ತಿದ್ದರು. ಆಗಾಗ ಸತ್ಯನಾರಾಯಣವ್ರತ ಮುಂತಾದ ದೇವರಿಗೆ ಪ್ರಿಯವಾದ ಪೂಜೆ ಪುನಸ್ಕಾರಗಳನ್ನು ಭಕ್ತಿಯಿಂದ ನಡೆಯಿಸುತ್ತಿದ್ದರು. ಇಂತಹ ವ್ಯಕ್ತಿ ತನ್ನಂತಹ ಬಡವನನ್ನು ಈ ರೀತಿಯಲ್ಲಿ ಮೋಸಗೊಳಿಸುವುದು ಹೇಗೆ ಸಾಧ್ಯವೆಂದು ಸಿದ್ದಣ್ಣನು ಚಿಂತಿಸುತ್ತಿದ್ದನು. ಪಾಪ! ದೊಡ್ಡ ಮೋಸಗಾರರು ಒಮ್ಮೊಮ್ಮೆ ದೊಡ್ಡ ದೈವ ಭಕ್ತರಂತೆ ನಟಿಸುತ್ತಾರೆಂಬುದು ಆಗ ಸಿದ್ದಣ್ಣನಿಗೆ ಗೊತ್ತಿರಲಿಲ್ಲ. ಸಿದ್ದಣ್ಣನು ಎಷ್ಟೋ ವಿಧಗಳಲ್ಲಿ ಗೌಡರನ್ನು ಅಂಗಲಾಚಿ ಬೇಡಿಕೊಂಡರೂ ಗೌಡರ ಹೃದಯ ಕರಗಲಿಲ್ಲ.

ಸಿದ್ದಣ್ಣನು ಮಂಕಾಗಿ ತೆಣೆಯ ಮೇಲೆ ಕುಳಿತುಬಿಟ್ಟನು. ಬಹಳ ಹೊತ್ತಾದರೂ ಅವನು ಅಲ್ಲಿಂದ ಕದಲಲಿಲ್ಲ. ಗೌಡರಿಗೆ ಕನಿಕರ ಹುಟ್ಟಬಹುದೆಂಬ ಆಶೆಯಿಂದ ಅವನು ಕುಳಿತಿದ್ದನು. ಆದರೆ ಗೌಡರಿಗೆ ಕನಿಕರದ ಬದಲು ಕೋಪ ಬಂದಿತು. ವಸೂಲಿ ಅಬ್ದುಲ್ಲಾ ಸಾಬುವನ್ನು ಕರೆದು "ಇವನ್ ಕುತ್ಗಿ ಚಂಡೀಗೆ ಕೈ ಹಾಕಿ ಹೊರಗೆ ದಬ್ಬೋ" ಎಂದರು. ಚೌಕಿಯಲ್ಲಿದ್ದ ಅಬ್ದುಲ್ಲಾ ಸಾಬಿಯು ತೆಣೆಗೆ ಬಂದು ಸಿದ್ದಣ್ಣನನ್ನು ಕುರಿತು "ಏ ಸುವ್ವಾ ಭಚ್ಚಾ, ನೀ ಸುಮ್ಕೆ ಹೋಗ್ತೀಯಾ ನಹೀತೋ ಚಪ್ಪಲ್ಕಾ ಪೂಜೆ ಬೇಕೋ" ಎಂದು ಗರ್ಜಿಸಿದನು. ಸಿದ್ದಣ್ಣನಿಗೆ ಕೋಪ ನೆತ್ತಿಯವರೆಗೆ ಹತ್ತಿತ್ತು. ಆದರೆ ಕೋಪವನ್ನು ಪ್ರದರ್ಶಿಸುವ ಸಮಯ ಅದಾಗಿರಲಿಲ್ಲ. ಮಾತನಾಡದೆ ಗೌಡರಿಗೆ ನಮಸ್ಕರಿಸಿ ತನ್ನ ಮನೆಗೆ ಹೊರಟುಹೋದನು.

ಬೆಳ್ಳೀಗೌಡರ ನಡತೆಯಿಂದ ಸಿದ್ದಣ್ಣನಿಗೆ ಆಶ್ಚರ್ಯವಾದರೂ ಅವನು ಧೈರ್ಯಗೆಡಲಿಲ್ಲ. ಅರೆಮರುಳು ಈರಮ್ಮನಿಗೆ ಬೆಳ್ಳೀಗೌಡರು ಬಂಗಾರದ ಗೆಜ್ಜೆಡ್ಡಿಯನ್ನು ಅಪಹರಿಸಿದ ವಿಚಾರ ಮಗನಿಂದ ಗೊತ್ತಾಯಿತು. ವಿವಾಹದ ಕಾಲದಲ್ಲಿ ತೌರು ಮನೆಯವರು ತನಗೆ ಕೊಟ್ಟಿದ್ದ ಒಡವೆಯನ್ನು ಬೆಳ್ಳೀಗೌಡರು ನಿರಾಯಾಸವಾಗಿ ದಕ್ಕಿಸಿಕೊಳ್ಳದಂತೆ ಮಾಡಬೇಕೆಂಬ ಉದ್ದೇಶದಿಂದ ಈರಮ್ಮನು ಬೆಳ್ಳೀಗೌಡರ ಮನೆಗೆ ಹೋದಳು. ಬೆಳ್ಳೀಗೌಡರನ್ನೂ, ನಾಗಮ್ಮಹೆಗ್ಗಡ್ತಿಯನ್ನೂ ಕಂಡು ತನ್ನ ಒಡವೆಯನ್ನು ವಾಪ್ಸುಕೊಡಬೇಕೆಂದು ದೈನ್ಯದಿಂದ ಬೇಡಿದಳು. ದೈನ್ಯತೆಗೆ ಬೆಲೆ ಬಾರದಿದ್ದುದರಿಂದ ಮೊದಲೇ ಹುಚ್ಚಿಯಾಗಿದ್ದ ಈರಮ್ಮನಿಗೆ ಮತ್ತಷ್ಟು ಹುಚ್ಚು ಕೆಣಕಿತು. ಹುಚ್ಚು ಹುಚ್ಚಾಗಿ "ಮನೆ ಮುರುಕ, ರಾಕ್ಷಸ, ನಿನ್ಮನೆ ಹಾಳಾಗ, ನಿನ್ಹಿಡ್ತಿ ಮುಂಡ್ಯಾಗ" ಮುಂತಾದ ಶಬ್ದಗಳಿಂದ ಬೆಳ್ಳೀಗೌಡರನ್ನು ಬಹಳ ಬೈದಳು. ಗೌಡರಿಗೆ ಕೋಪ ಬಂತು. ತಮ್ಮ ಹತ್ತಿರವಿದ್ದ ಹಂದಿ ಬೆತ್ತದ ಕೋಲಿನಿಂದ ಈರಮ್ಮನಿಗೆ ರಕ್ತ ಬರುವ ರೀತಿಯಲ್ಲಿ ಹೊಡೆದರು. ಈರಮ್ಮನು ಮನೆಗೆ ಬಂದು ಮಗನಿಗೆ ಗಾಯಗಳನ್ನು ತೋರಿಸಿ "ಮಗನೇ, ಬೆಳ್ಳೀಗೌಡ ನಂಗೆ ದನ್ಗೋಲೆ ಹೊಡ್ದ" ಎಂದು ಹೇಳಿದಳು. ಸಿದ್ದಣ್ಣನಿಗೆ ಸಹಿಸಲಾರದ ಸಿಟ್ಟು ಬಂತು, "ಬಡವನ ಸಿಟ್ಟು ದವಡೆಗೆ ಮೂಲ" ಎನ್ನುವ ಹಾಗೆ ಬಡವನಾದ ಸಿದ್ದಣ್ಣನ ಸಿಟ್ಟು ಶ್ರೀಮಂತರಾದ ಬೆಳ್ಳೀಗೌಡರನ್ನು ಏನು ಮಾಡುವ ಹಾಗೆಯೂ ಇರಲಿಲ್ಲ. ಸಿದ್ದಣ್ಣನು ತನ್ನ ಸಿಟ್ಟನ್ನು ತಾನೇ ನುಂಗಿದನು. ಬೆಳ್ಳೀಗೌಡರಿಂದ ತನಗೂ ತನ್ನ ತಾಯಿಗೂ ಆದ ಅವಮಾನ ಯಾತನೆಗಳನ್ನು, ಚಕ್ರ ಬಡ್ಡಿಯ ಸಮೇತ ತೀರಿಸುವುದಾಗಿ ಶಪಥ ಮಾಡಿದನು. ಜನಸಾಮಾನ್ಯರಲ್ಲಿ ಜಾಗೃತಿಯುಂಟಾಗಿ, ಅವರಲ್ಲಿ ಒಗ್ಗಟ್ಟು ಬರುವವರೆಗೂ ಬೆಳ್ಳೀಗೌಡರಂತಹ ನರಪಿಶಾಚಿಗಳ ದೌರ್ಜನ್ಯ ಕಡಿಮೆ ಯಾಗುವುದಿಲ್ಲವೆಂದು ಸಿದ್ದಣ್ಣನಿಗೆ ಮನವರಿಕೆಯಾಗಿತ್ತು. ಆದರೆ ಆ ಕಾಲದಲ್ಲಿ ಜನಸಾಮಾನ್ಯ ರನ್ನು ಒಂದುಗೂಡಿಸುವುದು ಸುಲಭವಾಗಿರಲಿಲ್ಲ. ಕುರಿಗಳು ತಮ್ಮನ್ನು ಕೊಲ್ಲುವ ಕಟುಕರನ್ನೇ ಆಶ್ರಯಿಸುವಂತೆ, ಬಡಬಗ್ಗರೂ ಕೂಡ ತಮ್ಮನ್ನು ಸುಲಿಯುವ ಸಾಹುಕಾರರನ್ನೇ ಆಶ್ರಯಿಸುತ್ತಿದ್ದರು. ಆದರೂ ಸಿದ್ದಣ್ಣನು ಪಂಜರವಳ್ಳಿಯ ಮತ್ತು ಸುತ್ತಮುತ್ತಲ ಗ್ರಾಮಗಳ ಒಕ್ಕಲು ಮಕ್ಕಳನ್ನು ಒಂದುಗೂಡಿಸುವ ಕಾರ್ಯದಲ್ಲಿ ತೊಡಗಿದನು.

# ೫. ಗೇಣಿದಾರ ಸಿದ್ದಣ್ಣ

ಒಂದೆರಡು ವರ್ಷಗಳಲ್ಲಿ ಸಿದ್ದಣ್ಣನ ಆರ್ಥಿಕ ಪರಿಸ್ಥಿತಿ ಉತ್ತಮವಾಗುತ್ತಾ ಬಂತು. ಶ್ರದ್ಧೆಯಿಂದ ಭೂಮಿಯನ್ನು ಸಾಗುವಳಿ ಮಾಡಿ ಶಿಸ್ತಿನಿಂದ ಜೀವನ ನಡೆಯಿಸಿ, ಮೂರು ನಾಲ್ಕು ವರ್ಷಗಳಲ್ಲಿ ಅವನು ಖರ್ಚು ಕಳೆದು ಹಣವನ್ನು ದಾಸ್ತಾನು ಮಾಡುವ ಸ್ಥಿತಿಗೆ ಬಂದಿದ್ದನು. ಕೆಲವರು ಗೇಣಿದಾರರು ವಾರಕೊಮ್ಮೆ ಅಥವಾ ಪ್ರತಿದಿನ ಹತ್ತಿರದಲ್ಲಿದ್ದ ಸಾರಾಯಿ ಅಥವಾ ಕಳ್ಳಿನ ಅಂಗಡಿಗೆ ಹೋಗಿ ಕುಡಿಯುತ್ತಿದ್ದುದರಿಂದ ಅವರಿಗೆ ಅವರ ಆಯವ್ಯಯದ ಮೇಲೆ ಯಾವ ಹಿಡಿತವೂ ಇರಲಿಲ್ಲ. ಅವರು ಹಣದ ಅಡಚಣೆಗಾಗಿ ದುಬಾರಿ ಬಡ್ಡಿಯಲ್ಲಿ ಸಾಲವನ್ನು ಪಡೆಯುತ್ತಿದ್ದರಲ್ಲದೆ ತಮ್ಮಲ್ಲಿದ್ದ ಅಡಕೆ ಬತ್ತಗಳನ್ನು ಖರೀದಿಗೆ ಬ್ಯಾರಿಗಳಿಗೆ ಅಥವಾ ಸ್ಥಳದ ಸಾಹುಕಾರರಿಗೆ ಕೊಡುತ್ತಿದ್ದರು. ಸಿದ್ದಣ್ಣನೂ ಯಾವಾಗಲಾದರೊಮ್ಮೆ ಅಪರೂಪವಾಗಿ ಕುಡಿಯುತ್ತಿದ್ದನು. ಅಪರೂಪವಾಗಿ ಕುಡಿದರೂ ಮಿತವಾಗಿ ಕುಡಿಯುತ್ತಿದ್ದನು. ಐಗಳ ಮಠದಲ್ಲಿ ಕಲಿತ ವಿದ್ಯೆಯನ್ನು ಅವನು ಸ್ವಂತ ಶ್ರಮದಿಂದ ಈಚೆಗೆ ಊರ್ಜಿತ ಮಾಡಿಕೊಂಡಿದ್ದನು. ತಾಯಿ ಅಡವಿಟ್ಟಿದ್ದ ಒಡವೆಯನ್ನು ಬಿಡಿಸಿಕೊಳ್ಳದೆ ಇದ್ದ ಸಾಲಗಾರ ಸಿದ್ದಣ್ಣನು ಕೆಲವೇ ವರ್ಷಗಳಲ್ಲಿ ಬೇರೆಯವರಿಗೆ ಅಲ್ಪ ಸ್ವಲ್ಪ ಸಾಲವನ್ನು ಕೊಡುವ ಶಕ್ತಿಯನ್ನು ಪಡೆದಿದ್ದನು. ಸೋದರಮಾವ ಸೈದಳ್ಳಿ ತಿಮ್ಮಣ್ಣನಿಗೂ ಸಹ ಮೂರು ನೂರು ರೂಪಾಯಿಗಳವರೆಗೆ ಸಾಲವನ್ನು ಕೊಟ್ಟಿದ್ದನು. ಹಿಂದೆ ರಾಕ್ಷಸಿಯಂತೆ ವರ್ತಿಸುತ್ತಿದ್ದ ಸೋದರ ಅತ್ತೆ ಗೌರಮ್ಮನು ಕೂಡ ಸಿದ್ದಣ್ಣನನ್ನು ಬಹಳ ಗೌರವ ಅಕ್ಕರೆಗಳಿಂದ ಕಾಣುತ್ತಿದ್ದಳು. ಆ ಪ್ರದೇಶದ ಉಳಿದ ಗೇಣಿದಾರರಿಗಿಂತ ಸಿದ್ದಣ್ಣನು ಬುದ್ಧಿವಂತನಾಗಿ ಸ್ಥಿತಿವಂತನಾಗಿದ್ದುದರಿಂದ ಗೇಣಿದಾರರು ಸ್ವಾಭಾವಿಕವಾಗಿ ಅವನನ್ನು ತಮ್ಮ ನಾಯಕನೆಂದು ಭಾವಿಸಿದ್ದರು. ಅವನು ಅವರ ಕಷ್ಟಕಾರ್ಪಣ್ಯಗಳಲ್ಲಿ ನೆರವಾಗುತ್ತಿದ್ದನು.

ಬೇಟೆಯಲ್ಲಿ ಸಿದ್ದಣ್ಣನು ಗಟ್ಟಿಗನೆಂದೆನಿಸಿಕೊಂಡಿದ್ದನು. ಅವನು ತನ್ನ ಒಂಟಿನಲ್ಲಿಯ ಕೇಪಿನ ಕೋವಿಯಿಂದ ಹಲವು ಕಾಡು ಹಂದಿಗಳನ್ನೂ ನೂರಾರು ಸಣ್ಣ ಪ್ರಾಣಿಗಳನ್ನೂ ಕೊಂದಿದ್ದನು. ಒಳ್ಳೆಯ ಈಡುಗಾರನೆಂದು ಇಡೀ ಹೋಬಳಿಯಲ್ಲಿ ಹೆಸರುವಾಸಿಯಾಗಿದ್ದನು. ದೀವಳಿಗೆ ಹಬ್ಬದ ಕಾಲದಲ್ಲಿ ನಡುರಾತ್ರಿಯಲ್ಲಿ ಹಾಡು ಹೇಳಿಕೊಂಡು ತಿರುಗುತ್ತಿದ್ದ ಅಂಟಿಗೆ ಪಂಟಿಗೆ ತಂಡಗಳಿಗೆಲ್ಲಾ ಸಿದ್ದಣ್ಣನೇ ಯಜಮಾನನಾಗಿದ್ದನು. ಗೇಣಿದಾರರ ಮನೆಗಳಲ್ಲಾಗುತ್ತಿದ್ದ ಮದುವೆ ಮುಂಜಿಗಳಲ್ಲಿ ಅವನ ಪಾರುಪತ್ಯ ವಿಶೇಷವಾಗಿತ್ತು. ಕೆಲವು ಗಿಡಮೂಲಿಕೆ ಔಷಧಗಳನ್ನು ಅವನು ತಿಳಿದುಕೊಂಡಿದ್ದನು. ನಾಳಿ ಸಂಕೋಲೆ, ಚಳಿಜ್ವರ, ರೇಷ್ಮೆಜ್ವರ, ಗಂಟಲುಬೇನೆಗಳಿಗೆ

ಸಿದ್ದಣ್ಣನ ಮೂಲಿಕೆಗಳು ಸಿದ್ಧೌಷಧವಾಗಿದ್ದುವು. ರೋಗರುಜಿನಗಳಿಂದ ನರಳುತ್ತಿದ್ದವರೂ, ಇತರ ವಿಧವಾದ ಆಪತ್ತುಗಳಿಗೊಳಗಾಗಿದ್ದವರೂ ಸಿದ್ದಣ್ಣನನ್ನು ಆಶ್ರಯಿಸುತ್ತಿದ್ದರು. ಹೀಗಾಗಿ ಕೆಲವೇ ವರ್ಷಗಳಲ್ಲಿ ಯುವಕನಾಗಿದ್ದ ಸಿದ್ದಣ್ಣನು ಜನಸಾಮಾನ್ಯರ ಮುಖಂಡನಾಗಿದ್ದನು. ಕಾಳೇಗೌಡರಿಗೂ, ಬೆಳ್ಳೇಗೌಡರಿಗೂ ಅವನ ಏಳಿಗೆಯನ್ನು ನೋಡಿ ಸಹನೆ ಇರಲಿಲ್ಲ. ಸಿದ್ದಣ್ಣನು ಪ್ರಾಬಲ್ಯಕ್ಕೆ ಬಂದನಂತರ ಅವರಿಬ್ಬರ ಪ್ರಾಮುಖ್ಯತೆ ಸ್ವಲ್ಪ ಮಟ್ಟಿಗೆ ಇಳಿಮುಖವಾಗಿತ್ತು. ಅವಕಾಶ ಸಿಕ್ಕಾಗ ಸಿದ್ದಣ್ಣನನ್ನು ಸದೆಬಡಿಯಬೇಕೆಂದು ಅವರಿಬ್ಬರೂ ಹವಣಿಸುತ್ತಿದ್ದರು.

ಸಿದ್ದಣ್ಣನಿಗೆ ಆಗಲೇ ಇಪ್ಪತ್ತಾರು ವರ್ಷಗಳಾಗಿತ್ತು. ಒಂದೆರಡು ವರ್ಷಗಳಿಂದ ಸೋದರಮಾವ ತಿಮ್ಮಣ್ಣನು ಸಿದ್ದಣ್ಣನ ವಿವಾಹದ ವಿಚಾರದಲ್ಲಿ ಯೋಚಿಸುತ್ತಿದ್ದನು. ಈರಮ್ಮ ಅರೆಮರುಳಾದರೂ ಮಗನ ಭವಿಷ್ಯ ವಿಚಾರದಲ್ಲಿ ಆಗಾಗ ಚಿಂತಿಸುತ್ತಿದ್ದಳು. ಹುಚ್ಚು ಕಡಿಮೆಯಾಗಿ ಮನಸ್ಸು ತಿಳಿಯಾಗಿದ್ದಾಗ ಮಗನೊಡನೆ ಅವನ ಮದುವೆಯ ವಿಚಾರವನ್ನು ಪ್ರಸ್ತಾಪಿಸುತ್ತಿದ್ದಳು. ಕೆಲವು ಮದುವೆಯ ಹುಂಡಿಗಳೂ ಸಿದ್ದಣ್ಣನಿಗೆ ಬಂದಿದ್ದವು. ಮದುವೆಯ ಖರ್ಚಿಗಾಗಲೀ, ಮದುಮಗಳ ತೆರಕ್ಕಾಗಲೀ ಸಿದ್ದಣ್ಣ ಸಾಲ ಮಾಡಬೇಕಾದ ಪ್ರಮೇಯವಿರಲಿಲ್ಲ. ಹಿಂದಿನ ವರ್ಷ ಅಮೃತೂರಿನ ಹತ್ತಿರ ಬೇಟೆಗೆ ಸೇರಿದ್ದಾಗ ತಿಮ್ಮಣ್ಣನೂ ಸಿದ್ದಣ್ಣನೂ ಅಮೃತೂರು ಚೆನ್ನಪ್ಪ ಗೌಡರ ಮನೆಗೆ ಹೋಗಿದ್ದರು. ಅಲ್ಲಿ ಅವರಿಬ್ಬರೂ ಚೆನ್ನಪ್ಪಗೌಡರ ಮಗಳು ಚೆನ್ನಮ್ಮನನ್ನು ನೋಡಿದ್ದರು. ಅವಳು ಚೆಂದದ ಚೆಲುವೆಯಾಗಿರದಿದ್ದರೂ ಲಕ್ಷಣವಾಗಿದ್ದಳು. ಚೆನ್ನಪ್ಪಗೌಡರ ಹೆಂಡತಿ ನಿಂಗಮ್ಮನು ಸಿದ್ದಣ್ಣನನ್ನು ನೋಡಿ "ನಮ್ಮ ಚನ್ನೂಗೆ ಈ ಗಂಡು ಆದರೂ ಆಗ್ಬೇದು" ಎಂದು ಮನಸ್ಸಿನಲ್ಲಿ ಅಂದುಕೊಂಡಿದ್ದಳು. ನಿಂಗಮ್ಮನ ಅಣ್ಣ ಬಡಿಯಪ್ಪಗೌಡರೂ ಸಹ ಒಂದೆರಡು ಸಾರಿ, ಬೇಟೆಗೆ ಸೇರಿದ್ದಾಗ ಸಿದ್ದಣ್ಣನನ್ನು ನೋಡಿದ್ದರು. ಅನಂತರ ಒಂದು ಕಡೆ, ಹೊಸ್ತಿನ ಮನೆಯ ಸಮಾರಂಭದಲ್ಲಿ ಸೈದಳ್ಳಿ ತಿಮ್ಮಣ್ಣನೂ ಬಡಿಯಪ್ಪಗೌಡರೂ ಸಂಧಿಸಿದ್ದಾಗ, ತಿಮ್ಮಣ್ಣನು ಬಹಳ ಸೂಕ್ಷ್ಮವಾಗಿ ಚೆನ್ನಮ್ಮನ ವಿಚಾರವನ್ನು ಬಡಿಯಪ್ಪಗೌಡರೊಡನೆ ಪ್ರಸ್ತಾಪಿಸಿದ್ದನು.

ಚೆನ್ನಮ್ಮನು ಅಮೃತೂರು ಚೆನ್ನಪ್ಪಗೌಡರ ಮತ್ತು ನಿಂಗಮ್ಮನ ಮುದ್ದಿನ ಮಗಳಾಗಿದ್ದಳು. ಅವಳ ತಂದೆ ತಾಯಿಗಳು ಗೇಣಿಯ ಒಕ್ಕಲುಗಳಾಗಿದ್ದರೂ, ಅವಳನ್ನು ತೋಟದ ಅಥವಾ ಗದ್ದೆಯ ಕೆಲಸಕ್ಕೆ ಕಳುಹಿಸಿರಲಿಲ್ಲ. ಚೆನ್ನಮ್ಮನು ತಾನೊಬ್ಬ ಖಾತೆದಾರನನ್ನು ಕೈ ಹಿಡಿಯಬೇಕೆಂದು ಕನಸಿನ ಸುಪ್ಪತ್ತಿಗೆಯನ್ನು ನಿರ್ಮಿಸಿದ್ದಳು. ಖಾತೆದಾರನ ಕೈ ಹಿಡಿದವಳಿಗೆ ಹೆಂಚಿನ ಮನೆಯ ಸುಖವಸತಿಯೂ, ಮನೆ ತುಂಬಾ ಆಳುಗಳೂ, ಮೈತುಂಬಾ ವಸ್ತ್ರಾಭರಣಗಳೂ ದೊರೆಯುತ್ತಿದ್ದವು. ಗೇಣಿದಾರನನ್ನು ಮದುವೆಯಾದವಳಿಗೆ ಹುಲ್ಲು ಜೋಪಡಿಯ ವಾಸ, ಹಗಲಿರುಳೂ ದುಡಿಮೆ, ಅರೆ ಹೊಟ್ಟೆ, ಅರೆ ಬಟ್ಟೆ ಇವುಗಳಿಂದ ಕೂಡಿದ ದಾರಿದ್ರ್ಯದ ಜೀವನ ಮೀಸಲಾಗಿರುತ್ತಿತ್ತು. ತಾನು ಆಸ್ತಿವಂತನನ್ನು ಕೈ ಹಿಡಿಯುವಂತೆ ಮಾಡಬೇಕೆಂದು ಚೆನ್ನಮ್ಮನು ತಿರುಪತಿ

ತಿಮ್ಮಪ್ಪನಿಗೂ, ಪಂಜರವಳ್ಳಿಯ ಭೂತರಾಯನಿಗೂ, ಧರ್ಮಸ್ಥಳದ ಮಂಜಪ್ಪನಿಗೂ ಹರಕೆಯನ್ನು ಹೊತ್ತಿದ್ದಳು. ಚೆನ್ನಮ್ಮನು ಪಂಜರವಳ್ಳಿಯ ಸಾಹುಕಾರ್ ಬೆಳ್ಳೇಗೌಡರ ಹೆಂಡತಿ ನಾಗಮ್ಮ ಹೆಗ್ಗಡ್ತಿಯವರನ್ನೂ, ಅವರ ಮಗಳು ಬಂಗಾರಮ್ಮನನ್ನೂ ನೋಡಿದ್ದಳು. ನಾಗಮ್ಮ ಹೆಗ್ಗಡ್ತಿಯವರು ಮೈ ತುಂಬಿಕೊಂಡು, ಜರಿ ಸೀರೆಯನ್ನುಟ್ಟು, ಮೈ ತುಂಬಾ ಆಭರಣಗಳನ್ನು ಧರಿಸುತ್ತಿದ್ದಳು. ಅವರ ಮಗಳು ಬಂಗಾರಮ್ಮನು ಜರಿ ಲಂಗವನ್ನು ಹಾಕಿ, ಕತ್ತಿಗೆ ಕಂಠೀ ಸರವನ್ನೂ ಕಿವಿಗೆ ವಜ್ರದ ಬೆಂಡೋಲೆಗಳನ್ನೂ ಕೈಗೆ ಬೊಂಬಾಯಿ ಬಳೆಗಳನ್ನೂ ಹಾಕುತ್ತಿದ್ದಳು. ನಾಗಮ್ಮ ಹೆಗ್ಗಡ್ತಿಯವರಂತೆ ತಾನೂ ಸುಖಸಂಪತ್ತಿನಲ್ಲಿ ಬಾಳಬೇಕೆಂದು ಚೆನ್ನಮ್ಮನು ಹಂಬಲಿಸುತ್ತಿದ್ದಳು. ಆಗಿನ ಕಾಲದಲ್ಲಿ ಮಲೇರಿಯಾ ರೋಗದ ಹಾವಳಿಯ ದೆಸೆಯಿಂದ ಬಸುರಿ ಬಾಣಂತಿಯರು ಹೆಚ್ಚು ಸಂಖ್ಯೆಯಲ್ಲಿ ಸಾಯುತ್ತಿದ್ದರು. ಆದ್ದರಿಂದ ವರ್ಷೇ ವರ್ಷೇ ಹೆಂಗಸರ ಸಂಖ್ಯೆ ಕಡಿಮೆಯಾಗುತ್ತಿತ್ತು. ಅಂದಿನ ಕಾಲದಲ್ಲಿ, ಇಂದು ವರದಕ್ಷಿಣೆಯನ್ನು ಕೊಡುವಂತೆ ಕನ್ಯಾ ಶುಲ್ಕವನ್ನು ಕೊಡಬೇಕಾಗಿತ್ತು. ಮದುವೆಯ ಮಾರುಕಟ್ಟೆಗಳಲ್ಲಿ ಹೆಣ್ಣಿಗೆ ಒಂದು ನೂರು ರೂಪಾಯಿಗಳಿಂದ ಹಿಡಿದು ಎಂಟುನೂರು ರೂಪಾಯಿಗಳವರೆಗೆ ದರವಿತ್ತು. ಚೆನ್ನಮ್ಮನ ತಂದೆ ಚಿನ್ನಪ್ಪಗೌಡರಿಗೆ ತಿರುಮಲಭಟ್ಟರಲ್ಲಿ ಪಿತ್ರಾರ್ಜಿತವಾಗಿ ಬಂದ ನಾಲ್ಕು ನೂರು ರೂಪಾಯಿಗಳ ಸಾಲವಿತ್ತು. ಅಂದು ಸಾಹುಕಾರರ ಮಕ್ಕಳಿಗೆ ಪಿತ್ರಾರ್ಜಿತವಾದ ಆಸ್ತಿ ದೊರಕಿದರೆ, ಒಕ್ಕಲು ಮಕ್ಕಳಿಗೆ ಪಿತ್ರಾರ್ಜಿತವಾದ ಸಾಲದ ಹೊರೆ ದೊರಕುತ್ತಿತ್ತು. ಮಗಳನ್ನು ಮಾರಿ ಭಟ್ಟರ ಸಾಲವನ್ನು ತೀರಿಸಬೇಕೆಂದು ಚಿನ್ನಪ್ಪಗೌಡರು ಯೋಚಿಸುತ್ತಿದ್ದರು. ಹೆಚ್ಚು ತೆರಕೊಡುವ ಅಳಿಯ ಸಿಕ್ಕಲೆಂದು ಅವರು ಹಾರೈಸುತ್ತಿದ್ದರು.

ಅಮೃತೂರಿಗೆ ಹತ್ತು ಮೈಲಿಗಳ ದೂರದಲ್ಲಿ ಸಿರವಂತೆ ಎಂಬ ಊರಿತ್ತು. ಆ ಊರಿನ ಪಟೇಲರಾದ ದ್ಯಾವೇಗೌಡರು ಸಾಧಾರಣ ಸ್ಥಿತಿವಂತರಾಗಿದ್ದರು. ಅವರು ಸರ್ಕಾರಕ್ಕೆ ಸುಮಾರು ನೂರೈವತ್ತು ರೂಪಾಯಿಗಳ ಕಂದಾಯವನ್ನು ಕೊಡುತ್ತಿದ್ದರು. ದ್ಯಾವೇಗೌಡರಿಗೆ ಆಗಲೇ ಮೂರು ಮದುವೆಗಳಾಗಿ ಮೂರು ಜನ ಹೆಂಡತಿಯರೂ ಕಾಲವಾಗಿದ್ದರು. ಮೊದಲನೆಯ ಹೆಂಡತಿಗೆ ಒಬ್ಬಳು ಹೆಣ್ಣು ಮಗಳೂ ಇಬ್ಬರು ಗಂಡು ಮಕ್ಕಳೂ, ಎರಡನೆಯ ಹೆಂಡತಿಗೆ ಇಬ್ಬರು ಹೆಣ್ಣು ಮಕ್ಕಳೂ, ಮೂರನೆಯ ಹೆಂಡತಿಗೆ ಮೂರು ಗಂಡು ಮಕ್ಕಳೂ ಹುಟ್ಟಿದ್ದು ಆ ಪೈಕಿ ನಾಲ್ಕು ಮಕ್ಕಳು ಮಾತ್ರ ಬದುಕಿದ್ದವು. ದ್ಯಾವೇಗೌಡರಿಗೆ ಐವತ್ತೈದು ವರ್ಷವಾಗಿತ್ತು. ಅವರು ಹೆಣ್ಣಿಗಾಗಿ ಹುಡುಕುತ್ತಿದ್ದರು. ಅವರ ಮೈ ಮೇಲೆ ಪ್ರತಿ ಶನಿವಾರ ಗಣ ಬರುತ್ತಾ ಇತ್ತು. ಗಣವನ್ನು ಕೇಳಲು ನೂರಾರು ಜನರು ಸಿರಿವಂತೆಗೆ ಬರುತ್ತಿದ್ದರು. ಅಲ್ಲದೆ, ದ್ಯಾವೇಗೌಡರಿಗೆ ಕೆಲವು ಗಿಡಮೂಲಿಕೆಗಳ ಪರಿಚಯವಿತ್ತು. ಔಷಧಿಕ್ಕಾಗಿ ಅವರನ್ನು ಅನೇಕರು ಆಶ್ರಯಿಸುತ್ತಿದ್ದರು. ಆದ್ದರಿಂದ ದ್ಯಾವೇಗೌಡರು ಆ ಸರಹದ್ದಿನಲ್ಲಿ ಒಬ್ಬ ಗಣ್ಯವ್ಯಕ್ತಿಯಾಗಿದ್ದರು. ಒಂದು ದಿನ ಚೆನ್ನಮ್ಮನ ತಂದೆ ಚಿನ್ನಪ್ಪಗೌಡರು, ಔಷಧಕ್ಕಾಗಿ ಸಿರವಂತೆ ದ್ಯಾವೇಗೌಡರ ಮನೆಗೆ ಹೋಗಿದ್ದರು. ದ್ಯಾವೇಗೌಡರು ಮನೆಗೆ ಬಂದ

ಚಿನ್ನಪ್ಪಗೌಡರಿಗೆ ಅಕ್ಕಿಯ ಹೆಂಡವನ್ನೂ, ಕರಿಮೀನು ಚಟ್ಣಿಯನ್ನೂ ಕೊಟ್ಟು ಅವರನ್ನು ಉಪಚರಿಸುತ್ತಾ ಅವರೊಡನೆ ಮಾತುಕತೆಯಾಡುತ್ತಾ ಕುಳಿತಿದ್ದರು. ಚಿನ್ನಪ್ಪಗೌಡರು ಹೆಂಡವನ್ನು ಕುಡಿಯುತ್ತಿದ್ದಾಗ ದ್ಯಾವೇಗೌಡರು ಆ ಮಾತು ಈ ಮಾತುಗಳನ್ನು ಹೇಳಿ, ಕೊನೆಗೆ ತಾವು ಮದುವೆಯಾಗಬೇಕೆಂದಿರುವ ವಿಚಾರವನ್ನು ಪ್ರಸ್ತಾಪಿಸಿ ಈ ರೀತಿ ನುಡಿದರು.

"ಚಿನ್ನಪ್ಪಗೌಡ್ರೇ, ನೋಡ್ದ್ರಲ್ಲಾ ನನ್ ತಾಪತ್ರಾನಾ. ಮೂರ್ ಸಲ ನಗ್ನಾದೆ. ಮೂರ್ ಜನ ಹಿಂಡ್ರೂ ಸಾಕು ಅಂತ ಕಣ್ಮುಚ್ಚಿಗುಂಡ್ರು. ನಂಗೋ, ವುಂದ್ಗಳ್ಗಿ ಪುರ್ರೊತ್ತಿಲ್ಲ. ಗಣ ಕೇಳೋರ್ ನೋಡ್ತೀರೋ, ಔಸ್ತೀಗೆ ಬರೋರ್ನ ನೋಡ್ತೀರೋ, ಸರ್ಕಾರಿ ಕೆಲ್ಸಗೆ ಕರ್‍ಯೋರ್ ನೋಡ್ತೀರೋ, ನಂಗಂತೂ ಸಾಕಾಗಿ ಹೋಗ್ಯದೆ. ಮನೇಲೋ ಕೈ ಕೊಟ್ರೆ ಕೈ ತಿನ್ನವು, ಬಾಯ್ಕೊಟ್ರೆ ಬಾಯ್ತಿನ್ನವು, ಮಕ್ಕಳು, ನನ್ ತಂಗಿ ವಬ್ಬಳು. ಕೆಟ್ಟು ಮುರ್ದು ನನ್ ಮನೆ ಸೇರ್‍ಕೊಂಡ್ಯದೆ. ಅದು ಎಷ್ಟೂ ಅಂತ ಮಾಡ್ತದೆ. ಅದ್ರ್ ಕೈಲಿ ಹರಿಯೂದೂ ಇಲ್ಲ. ಎಷ್ಟಾಗ್ಲಿ ಗೌಡ್ರೇ ಕೈ ಹಿಡ್ದ ಹಿಂಡ್ತಿ ಇದ್ರೆ ಅದರ ತರಾನೆ ಬ್ಯಾರೆ. ನಂಗೂ ವಯ್ಸಾತ ಬಂತು. ನಾ ಇಲ್ದ್ ಬೆಳಿಗ್ಗೆ, ಮಕ್ಕಳು ಮರಿ, ಭೂಮಿ ಕಾಣಿ, ದುಡ್ಡೂ ಕಾಸು, ನೋಡ್ಕೊ ಹೋಗರು ನನ್ನೋರಾಗಿ ವಬ್ಬರು ಬೇಕಲ್ಲಾ ಗೌಡ್ರ. ನಿಂ ಮಗಳು ಯಿಚಾರ ಯೋಚ್ನೆ ಮಾಡ್ತಾ ಇದ್ದೆ. ದೇವ್ರು ಕರ್‍ಕು ಬಂದಾಗೆ ನೀವು ಯಿಂದ್ ಬಂದೀರಿ. ನಿಮ್ಮನ್ನ ಹ್ಯಾಂಗದಿಯೋ ಏನೋ! ಹಿಣ್ಣೀಗೆ ತಿರ ನೀವ್ ಕೇಳ್ದಷ್ಟು ಕೊಡ್ತೀನಿ. ಅದ್ಕೇನ್ ನೀವ್ ಯೋಚ್ನೆ ಮಾಡೂದ್ ಬ್ಯಾಡ."

"ದ್ಯಾವೇಗೌಡ್ರೆ, ನಿಮ್ಗೆನ್ ಕಡ್ಮೆ ಆಗ್ಯದೋ? ಆಸ್ತ್ಯದೆ, ಮನೆ ಅದೆ, ಸಾಲ ಸೂಲ ಇಲ್ಲ. ಸೀಮೆ ಸಮುದ್ರೆಲ್ಲಾ ನಿಮ್ಮ ಹೆಸ್ರು ಕೊಂಡಾಡ್ತದೆ. ನಂ ಮಗೀನ ಕೊಡ್ದೆ ಇನ್ಯಾರಿಗೆ ಕೊಡ್ಲಿ? ಹಿಂಡ ಬ್ಹಾಳ ಹವ್ಣಾಗ್ಯದೆ. ನಮ್ಮನೇಲಿ ಹಿಂಡಿಷ್ಟು ವಯ್ನಾಗಿರೂದಿಲ್ಲ. ಇನ್ನೊಂದು ಪಾತ್ರೆ ತರ್ಸಿ"

"ಚಿನ್ನಪ್ಪಗೌಡ್ರೆ, ಹಂಗ್ಯಾರೆ ಇನ್ ಎಂಟ್ಹತ್ತು ದಿನ ಬಿಟ್ಟು ನಗ್ನ ಇಡೋಕೆ ಬತ್ತಿನಿ, ನಿಮ್ಮಾತ್ ಕೇಳಿ ನಂಗೆ ಸಂತೋಸಾತು. ಎಲ್ಲೇ ರಾಮೀ. ವುಂದ್ ಸಲ್ಪ ಹಿಂಡ ತಗೂಬಾ. ಗೌಡ್ರೆ ನಮ್ಮನೇಲಿ, ಹಿಂಡ ಮಾಡುಕೆ ಅವ್ಕಿ ಹಿಟ್ಟೀನ್ ಜೊತೀಗೆ ಬರೀ ಸಣ್ಣಾಲೇ ಸದಗ, ಮಂಗನ ಬಳ್ಳಿ, ಇಲಿ ಕಿವಿ ಬೇರು ಹಾಕ್ತೀವಿ. ಅದ್ಕೇ ಹಿಂಡ ಹವ್ಣಾಗಿರ್ತದೆ. ಅವರ ಇವರ ಹಂಗೆ ನಾವು ಮಡ್ಲೆ ತೆಪ್ಪೆ, ಕಾರೆಚಕ್ಕೆ, ಕೊರಂಗಲ ತೆಪ್ಪೆ, ಸುಡುಗಾಡ್ ಸುಂಟಿಕೊಂಬು, ಅಮ್ಲು ಬರೂಕೆ ಅಂತ ಹಾಕೂದಿಲ್ಲ."

ಹೆಂಡವನ್ನು ಮುಗಿಸಿದ ನಂತರ ಚಿನ್ನಪ್ಪಗೌಡರು ದ್ಯಾವೇಗೌಡರಿಂದ ಔಷಧಿಯನ್ನು ಪಡೆದು ಅಮೃತೂರಿಗೆ ಹಿಂತಿರುಗಿದರು. ರಾತ್ರಿ ಮನೆಗೆ ಹೋದನಂತರ ಅಡುಗೆಯ ಮನೆಯಲ್ಲಿ, ಒಲೆಯ ಮುಂದೆ ಬೆಂಕಿಯನ್ನು ಕಾಯಿಸುತ್ತ ಕುಳಿತಿದ್ದವರು, ಹೆಂಡತಿಯನ್ನು ಕುರಿತು "ನಿಂಗೀ, ಇಂದುಂದು ಸಂಗ್ತಿ ನಡೀತು. ನಾ ದ್ಯಾವೇಗೌಡ್ರ ಮನೀಗೆ ಔಸ್ತೀಗೆ ಅಂತ ಹೋಗಿದ್ನಲ್ಲ. ಆಗ ಅವ್ರು ನಮ್ ಚೆನ್ನೂ ಇಚಾರ ಪರಸ್ತಾಪ ಮಾಡುದ್ರು. ನಾ

ಆಗ್ಬೇದು ಅಂದೆ" ಎಂದು ಹೇಳಿದರು. ಗಂಡನ ಮಾತನ್ನು ಕೇಳಿ ನಿಂಗಮ್ಮನಿಗೆ ಸಿಟ್ಟು ಬಂದು, ಗಂಡನನ್ನು ಕುರಿತು ಈ ರೀತಿ ನುಡಿದಳು.

"ಆ ಮುದಿ ಹದ್ದೂಗೆ ಕ್ಯಾದ್ಗಿಗಿರಿ ಅಂತ ಮಗೀನ ಕೊಡೂಕಾರೂ ನಿಮ್ಗೆ ಹ್ಯಾಂಗೆ ಮನ್ಸಾತೋ ನಂಗೊತ್ತಾಗುದಿಲ್ಲ. ನಾ ಯೇನ್ ಒಪ್ಪೊದಿಲ್ಲ. ನೀವೇನ್ ಬೇಕಾರು ಮಾಡಿ."

"ನಿಂಗೇನ್ ತಲೆ ಸಮ ಅದ್ಯೋ ಇಲ್ಲೋ? ದ್ಯಾವೇಗೌಡ್ರಿಗೆ ಸಂತು ಭೂಮಿ ಕಾಣಿ ಅದೆ. ನಾಕ್ ಜನ ಸಂಪಾಳ್ಸಿಕೊಂಡೋರು. ವಳ್ಳೆಕಾರ್ಬಾರಿಮನ್ಸ, ನಾವ್ ಕೇಳ್ದಷ್ಟು ತಿರ ಕೊಡ್ತಾರೆ. ಭಟ್ರ ಸಾಲಾನೂ ತೀರಸಬೇದು. ದ್ಯಾವೇಗೌಡ್ರು ಸತ್ಮ್ಯಾಲೆ ನಮ್ ಚೆನ್ನೂಗೆ ಮನೆ ವಯ್ವಾಟು ಸಿಗ್ತದೆ. ನಿಂಗೇನು ಆಬೇಕು ಮತ್ತೆ?"

"ನನ್ ತಲೆ ಸಮ್ನಾಗಿಲ್ಲೋ, ನಿಮ್ ತಲೆ ಸಮ್ನಾಗಿಲ್ಲೋ? ಆ ದ್ಯಾವೇಗೌಡ್ನ ಮನೇಲಿ ವಯ್ನಾಗಿ ಹಿಂಡಾ ಹುಯ್ಕುಂಡು ಬಂದೀರಿ. ತಲೆಹ್ಯಾಂಗೆ ಸಮ ಇರ್ತದೆ. ತಿರ ಸಿಕ್ತದೆ ಅಂತ ಸಾಯೂ ಮುದ್ಕಕೆ ಮಗ ಮಾರಾನ ಅಂತ ಮಾಡೀರೇನು? ದ್ಯಾವೇಗೌಡ್ಗೆ ಮಗ್ಳ ಕೊಟ್ಗುಂಡು ಚಂದಾಗಿ ಹಿಂಡಾ ಕುಡ್ಕುಂಡು, ಅವರ ದುಡ್ ಯಳಿಯಾನ ಅಂತ ಮಾಡೀರಿ. ಬಡಿಯಣ್ಣ ಹೇಳ್ತಿದ್ದ, "ಪಂಜ್ರೋಳ್ಳಿ ಈರಮ್ಮ ಹೆಗ್ಗಡ್ತಿ ಮಗ ವುಂದ್ ಗಂಡು ವಯ್ನಾಗಿ ಅದ್ಯಾನೆ" ಅಂತ, ಗೇಣಿ ಗದ್ದೆ ಗುತ್ಗಿತ್ವಾಟ ಮಡ್ಕೊಂಡಿದ್ರು ನಿರುಂಬ್ಳಾಗದ್ಯಾನಂತೆ. ನಾ ಹ್ವಾದ್ ಕಾಲ ಹುಡ್ಗುನ್ನ ನೋಡಿದ್ದೆ. ಚಂದಾಗದ್ಯಾನೆ."

ಅಷ್ಟುಹೊತ್ತಿಗೆ ಚೆನ್ನಮ್ಮನು ಅಡುಗೆಯ ಮನೆಯೊಳಗೆ ಬಂದಳು. ಅವಳನ್ನು ನೋಡಿದ ನಿಂಗಮ್ಮನು, "ನೋಡೇ ಚೆನ್ನೂ, ಆ ಸಿರಿವಂತ ಗಣ್ಮಗಗೆ, ಆ ಮುದ್ಕ ದ್ಯಾವೇಗೌಡ್ಗೆ, ನಿನ್ ಕೊಡ್ತೀನಿ ಅಂತ ಇವ್ರು ಹೇಳ್ಯಾರಂತೆ. ಆ ಹದ್ದೂನ ನೀ ಒಪ್ತೀಯೇನೆ?" ಎಂದಳು. ತಾಯಿಯ ಮಾತನ್ನು ಕೇಳಿದ ಚೆನ್ನಮ್ಮನು ಮುಖವನ್ನು ಹಾಕಿಕೊಂಡು "ಅಪ್ಪಯ್ಯ, ನಿಂಗೆ ನಾ ಬ್ಯಾಡಾಗಿದ್ರೆ ಹ್ವಳೀಗೋ ಕ್ಯರೀಗೋ ನನ್ನ ಹೊತ್ಗುಂಡ್ಹೋಗಿ ಹಾಕು" ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟು ಹೋದಳು. ಚೆನ್ನಪ್ಪಗೌಡರಿಗೆ ಹೆಂಡದ ಅಮಲು ಕಡಿಮೆಯಾಗುತ್ತಾ ಬಂದಿತ್ತು. ಹೆಂಡತಿಯನ್ನು ಹೆದರಿಸಿ ಮಗಳನ್ನು ಒತ್ತಾಯದಿಂದ ದ್ಯಾವೇಗೌಡರಿಗೆ ಕೊಡಬಹುದೆಂದು ಅವರಿಗೆ ಭರವಸೆಯಿತ್ತು. ಆದರೆ ನಿಂಗಮ್ಮನ ಅಣ್ಣ ಬಡಿಯಪ್ಪಗೌಡರನ್ನು ಒಪ್ಪಿಸುವುದು ಕಷ್ಟವಾಗಿತ್ತು. ಬಡಿಯಪ್ಪಗೌಡರು ಒಪ್ಪದಿದ್ದರೆ ದ್ಯಾವೇಗೌಡರಿಗೆ ತಾವು ಕೊಟ್ಟ ಮಾತನ್ನು ಉಳಿಸಿಕೊಳ್ಳಲಾಗುತ್ತಿರಲಿಲ್ಲ. ಬಡಿಯಪ್ಪಗೌಡರ ಮಾತನ್ನು ಮೀರಿ ಚೆನ್ನಪ್ಪ ಗೌಡರು ಏನು ಮಾಡುವ ಹಾಗೆಯೂ ಇರಲಿಲ್ಲ. ಆದ್ದರಿಂದ ಬಡಿಯಪ್ಪಗೌಡರನ್ನು ಹೇಗಾದರೂ ಒಪ್ಪಿಸಿ, ಅನಂತರ ನಿಂಗಮ್ಮನೊಡನೆ ಮಾತನಾಡಬೇಕೆಂದು ಯೋಚಿಸಿ ಅವರು ಸುಮ್ಮನಾದರು.

ದ್ಯಾವೇಗೌಡರು ಚೆನ್ನಪ್ಪಗೌಡರ ಮಾತನ್ನು ನಂಬಿ ಹಿಗ್ಗಿ ಹೆಬ್ಬಾಗಿಲಾಗಿದ್ದರು. ಚೆನ್ನಮ್ಮನು ತಮ್ಮ ಹೆಂಡತಿಯಾದಳೆಂದು ಅವರು ಮನಸ್ಸಿನಲ್ಲೇ ಹಿಗ್ಗುತ್ತಿದ್ದರು. ಚೆನ್ನಪ್ಪಗೌಡರಿಗೆ ತನ್ನಂತಹ ಅಳಿಯನು ದೊರಕಿದ್ದುದು ಅವರ ಪೂರ್ವ ಪುಣ್ಯದ

ಫಲವೆಂದು ಯೋಚಿಸುತ್ತಿದ್ದರು. ಆದಷ್ಟು ಜಾಗ್ರತೆ ಲಗ್ನವನ್ನು ನಿಶ್ಚಯಿಸಬೇಕೆಂದು ದ್ಯಾವೇಗೌಡರು ತವಕಪಡುತ್ತಿದ್ದರು. ಹೆಚ್ಚುಕಾಲ ತಾಳುವಷ್ಟು ತಾಳ್ಮೆ ಅವರಲ್ಲಿ ಉಳಿದಿರಲಿಲ್ಲ. ಒಂದು ವಾರದ ನಂತರ ಲಗ್ನ ನಿಶ್ಚಯಕ್ಕೋಸ್ಕರ ಹೇಳದೆ ಕೇಳದೆ ಅಮೃತೂರಿಗೆ ಹೋದರು. ಅವರು ಅಮೃತೂರಿಗೆ ಹೋದ ದಿನ ಅವರ ದುರದೃಷ್ಟವಶಾತ್ ಚೆನ್ನಪ್ಪಗೌಡರು ಮನೆಯಲ್ಲಿರದೆ ಪವಿತ್ರಪುರದ ಸಂತೆಗೆ ಹೋಗಿದ್ದರು.

ದ್ಯಾವೇಗೌಡರು ಚೆನ್ನಪ್ಪಗೌಡರ ಮನೆಗೆ ಬಂದಾಗ ಬೆಳಿಗ್ಗೆ ಸುಮಾರು ಹತ್ತು ಗಂಟೆಯಾಗಿರಬಹುದು. ಬರುವಾಗ ದಾರಿಯಲ್ಲಿ ದ್ಯಾವೇಗೌಡರು ನಾನಾ ಯೋಚನೆಗಳನ್ನು ಮಾಡಿದ್ದರು. ಭಾವೀ ಅತ್ತೆಯಾದ ನಿಂಗಮ್ಮನು ತಮ್ಮನ್ನು ಸಂಭ್ರಮದಿಂದ ಸ್ವಾಗತಿಸಬಹುದೆಂದೂ, ಭಾವೀ ಪತ್ನಿ ಚೆನ್ನಮ್ಮನು ಎಲೆ ಅಡಕೆಗಳ ತಟ್ಟೆಯನ್ನು ತಂದಿಡಬಹುದೆಂದೂ, ಔತಣ ಊಟ ಸಿಕ್ಕಬಹುದೆಂದೂ ಮನಸ್ಸಿನಲ್ಲೇ ಮಂಡಿಗೆಯನ್ನು ಸವಿದಿದ್ದರು. ದ್ಯಾವೇಗೌಡರು ಕಚ್ಚೆ ಪಂಚೆಯನ್ನುಟ್ಟು, ಕೋಟನ್ನು ಹಾಕಿ, ರೇಷ್ಮೆಯ ಕೆಂಪು ಚೌಕದ ರುಮಾಲನ್ನು ತಲೆಗೆ ಕಟ್ಟಿದ್ದರು. ಚೆನ್ನಮ್ಮನಿಗೆ ತಮಗಾಗಿದ್ದ ವಯಸ್ಸು ಅಪ್ರಿಯವಾಗಬಹುದಾದರೂ, ತಾವು ಹಾಕಿದ್ದ ಬಟ್ಟೆ ಪ್ರಿಯವಾಗಬಹುದೆಂದು ಗೌಡರು ತಿಳಿದಿದ್ದರು. ದ್ಯಾವೇಗೌಡರು ಮನೆಗೆ ಬಂದೊಡನೆ ನಿಂಗಮ್ಮನು ಜಗಲಿಯಲ್ಲಿ ಜಮಖಾನೆಯೊಂದನ್ನು ಹಾಕಿ, ಒಂದು ಚೆಂಬು ನೀರನ್ನು ತಂದಿಟ್ಟು "ಬಂದ್ರಾ, ಕೂತುಗೂಳಿ. ಮನೆಯಾಗ್ಯಲ್ಲಾ ಚಂದಾಗದ್ಯಾರಾ? ಅವರ ಪ್ಯಾಟೀಗ್ಹೋಗ್ಯಾರೆ" ಎಂದಳು. ಚೆನ್ನಪ್ಪಗೌಡರು ಮನೆಯಲ್ಲಿ ಇಲ್ಲದೆ ಇರುವುದು ದ್ಯಾವೇಗೌಡರಿಗೆ ಸ್ವಲ್ಪ ನಿರುತ್ಸಾಹವನ್ನುಂಟು ಮಾಡಿತ್ತು. ಆದರೂ ನಿರುತ್ಸಾಹವನ್ನು ತೋರ್ಪಡಿಸದೆ "ಅವರು ಪ್ಯಾಟೀಗ್ಹೋದ್ರೆ ಏನಾತು? ನೀವಿದೀರಲ್ಲ" ಎಂದು ನುಡಿದರು. ನಿಂಗಮ್ಮನು ಒಂದು ಲೋಟ ಬಿಸಿ ಹಾಲಿಗೆ ತುಪ್ಪವನ್ನು ಹಾಕಿ ದ್ಯಾವೇಗೌಡರಿಗೆ ಕುಡಿಯಲು ಕೊಟ್ಟಳು. ಅನಂತರ ತಟ್ಟೆಯಲ್ಲಿ ಅಡಕೆ, ವೀಳೆದೆಲೆ, ಹೊಗೆ ಸೊಪ್ಪುಗಳನ್ನು ತಂದಿಟ್ಟಳು. ಕಾಲು ಗಂಟೆಯೊಳಗಾಗಿ ಅರ್ಧಎಸಳು ಹೊಗೆ ಸೊಪ್ಪನ್ನೂ, ಎಂಟು ಹತ್ತು ವೀಳೆದೆಲೆಗಳನ್ನೂ ಗೌಡರು ಕಬಳಿಸಿದರು. ಚೆನ್ನಪ್ಪಗೌಡರು ಇಲ್ಲದೆ ಇರುವುದನ್ನು ಕೇಳಿ ದ್ಯಾವೇಗೌಡರು ಹೊರಟು ಹೋಗಬಹುದೆಂದು ನಿಂಗಮ್ಮನು ನಿರೀಕ್ಷಿಸಿದಳು. ಆದರೆ ದ್ಯಾವೇಗೌಡರು ಗಟ್ಟಿಯಾಗಿ ಕುಳಿತೇ ಬಿಟ್ಟರು. ನಿಂಗಮ್ಮನು ಅವಿದ್ಯಾವಂತೆಯಾದರೂ ಜಾಣೆ. ದ್ಯಾವೇಗೌಡರು ಮದುವೆಯ ನಿಶ್ಚಯಕ್ಕಾಗಿ ಬಂದಿದ್ದಾರೆಂದು ಅವಳು ಊಹಿಸಿದಳು. ಅವರಿಗೆ ಲಗ್ನದ ಹುಚ್ಚನ್ನು ಬಿಡಿಸಬೇಕೆಂದು ಸಂಕಲ್ಪಮಾಡಿದಳು. ಕೂತಿರಬೇಕೆಂದೂ, ಊಟ ಮಾಡಿಕೊಂಡು ಹೋಗಬೇಕೆಂದೂ ಅವಳು ಔಪಚಾರಿಕವಾಗಿ ದ್ಯಾವೇಗೌಡರನ್ನು ಕೇಳಿಕೊಂಡಳು. ದ್ಯಾವೇಗೌಡರು "ಇನ್ನೇನೆ ಬಂದ್ಮ್ಯಾಲೆ ಉಂಡ್ಕುಂಡೇ ಹೋಗೂದು, ಅಟ್ರೊಳ್ಗೆ ನಿಮ್ ಗೌಡ್ರು ಬಂದ್ರೂ ಬರ್ಬೇದು" ಎಂದು ನುಡಿದರು.

ನಿಂಗಮ್ಮನು, ದ್ಯಾವೇಗೌಡರಿಗಾಗಿ ರುಚಿಕರವಾದ ಅಡಿಗೆಯನ್ನೇ ಮಾಡಿದ್ದಳು. ಅಕ್ಕಿಯ ರೊಟ್ಟಿ, ಕೋಳಿಯ ಪಲ್ಯ, ಹಣಿ ಹೆಂಡ ಮುಂತಾದುವುಗಳನ್ನು ಸಿದ್ಧಗೊಳಿಸಿ,

ಅವರನ್ನು ಊಟಕ್ಕೆ ಆಹ್ವಾನಿಸಿದಳು. ಗೌಡರು ಊಟಕ್ಕೆ ಹೋಗಿ ಕುಳಿತ ನಂತರ ಅಡುಗೆಯ ಮನೆಯ ಕಡೆಗೇ ಅವರ ದೃಷ್ಟಿ ಬಿದ್ದಿತ್ತು. ಚೆನ್ನಮ್ಮನ ದರ್ಶನಕ್ಕಾಗಿ ಅವರ ಕಣ್ಣುಗಳು ತವಕಿಸುತ್ತಿದ್ದವು. ಹೊರಗಡೆ ಕುಳಿತಿದ್ದಾಗಲೂ ಅವರು ಪದೇ ಪದೇ ನಡುಮನೆಯ ಕಡೆಗೆ ದೃಷ್ಟಿಯನ್ನು ಬೀರುತ್ತಿದ್ದರು. ಆದರೆ ಒಂದು ಸಾರಿಯಾದರೂ ಕೂಡ ಚೆನ್ನಮ್ಮನ ದರ್ಶನವಾಗಲಿಲ್ಲ. ಊಟವನ್ನು ಬಡಿಸಲು ಚೆನ್ನಮ್ಮನು ಬರಬಹುದೆಂದು ಗೌಡರು ನಿರೀಕ್ಷಿಸಿದ್ದರು, ಅವರ ನಿರೀಕ್ಷೆಗೆ ವಿರೋಧವಾಗಿ ಪ್ರತಿಸಲವೂ ನಿಂಗಮ್ಮನೇ ಬಡಿಸುತ್ತಿದ್ದಳು. ಗೌಡರಿಗೆ ನಿರಾಶೆಯಾಯಿತು. ಊಟ ಮುಗಿಯುವ ಹೊತ್ತಿಗೆ ಗೌಡರು ನಿಂಗಮ್ಮನೊಡನೆ ಚೆನ್ನಪ್ಪಗೌಡರು ತಮಗೆ ಮಾತು ಕೊಟ್ಟಿದ್ದನ್ನು ಪ್ರಸ್ತಾಪಿಸಿ ಲಗ್ನ ನಿಶ್ಚಯಕ್ಕಾಗಿ ತಾವು ಬಂದಿರುವುದಾಗಿ ಹೇಳಿದರು. ತನ್ನ ಮಾತುಗಳನ್ನು ಕೇಳಿ ನಿಂಗಮ್ಮನು ಸಂತಸಗೊಳ್ಳುವಳೆಂದು ಗೌಡರು ಭಾವಿಸಿದ್ದರು. ಆದರೆ ಅವರ ಭಾವನೆ ತಪ್ಪಾಗಿತ್ತು. ನಿಂಗಮ್ಮನ ಮತ್ತು ದ್ಯಾವೇಗೌಡರ ಸಂಭಾಷಣೆ ಈ ರೀತಿ ಇತ್ತು.

"ದ್ಯಾವೇಗೌಡ್ರೇ, ನೀವು ಆರ್ವತ್ತುರುಸದ ಸಾಂತಿ ಮಾಡ್ಕುಳೂದು ಬಿಟ್ಟು ಲಗ್ನದ ಯೋಚನೆ ಯಾಕ್ಮಾಡ್ತೀರಿ? ನಿಮ್ ಹಿರಿಹಿಡ್ತಿ ಮಗಳು ಸಾವಂತ್ರೀಗೂ, ನಮ್ ಚೆನ್ನಿಗೂ ವುಂದೆ ವರ್‍ಗಿ. ನಿಮ್ಗೇನ್ ಆಶೆ ಹೆಚ್ತದೇನ್ರೋ? ನಿಮಗೆ ಅಂತ ಲಗ್ಗನ್ದ ಹುಚ್ಚು ಇದ್ರೆ ಯಾರಾರೂ ಗಂಡ್ಸತ್ತೋಳ್ನ ಕೂಡ್ಕಿ ಮಾಡ್ಕೂಳಿ. ಹಾಂಗ್ಯಂತ ಮರ್‍ತಿದ್ದೆ. ನಮ್ ಬಳಿ, ನಿಮ್ ಬಳಿ ಎಲ್ಲೂ ವುಂದೇ. ನಮ್ ಬಳಿಯೂ ಗಂಗರ್‍ಬಳಿ, ನಿಮ್ ಬಳಿಯೂ ಗಂಗರ್‍ಬಳಿ."

"ಹೆಗ್ಗಡ್ತೇರೇ ನಾಯೇನ್ ನಿಮ್ಗೆ ಜುಲ್ಮೆ ಮಾಡೂದಿಲ್ಲ. ಮನ್ನೆ, ನಿಮ್ ಗೌಡ್ರು ನಮ್ಮನೀಗೆ ಬಂದಾಗ, ಮಾತಾಡ್ತ 'ನಮ್ಮಗೀನ ನಿಮ್ಗಲ್ದೆ ಇನ್ನಾರೀಗೆ ಕೊಡ್ಲಿ' ಅಂತ ಹೇಳ್ದ್ರು. ಅದ್ಕೇ ನಿಮ್ಮತ್ರ ಪರಸ್ತಾಪಮಾಡ್ದೆ. ಇನ್ನೂ ಯೇಚ್ನೆ ಮಾಡಿ. ನನ್ನಾಸ್ತಿ ಪಾಸ್ತಿ, ಮನೆ ಮಟ ಯಲ್ಲಾ ನಿಂ ಮಗಳದೇ ಆತ್ಯದೆ. ತಿರ ನೀವ್ ಹೇಳ್ದಷ್ಟ್ ಕೊಡ್ತೀನಿ. ಚೆನ್ನೂಗೆ ನೀವ್ ಹೇಳ್ದಾಂಗೆ ಚಿನ್ನ ಬೆಳ್ಳಿ, ಬಟ್ಟೆ ಬರಿ ಕೊಡ್ತಿನಿ. ನೀವೇನ್ ಈಗ್ಲೆ ನಂಗೆ ಜಬಾವು ಹೇಳೂದ್‌ಬ್ಯಾಡ. ನಿಮ್ ಗೌಡ್ರು ಬಂದ್ಮ್ಯಾಲೆ, ಅವ್ರೂ ನೀವೂ ಮಾತಾಡಿ ನಂಗೆ ಹೇಳಿ ಕಳಿಸಿ."

"ದ್ಯಾವೇಗೌಡ್ರೆ, ನಾ ಈಗ್ಲೆ ಜಬಾವ್ ಕೊಟ್ಟೀನಲ್ಲ. ಬ್ಯಾರೆ ಜಬಾವ್ ಏನಿಲ್ಲಾ. ನೀವ್ ನಮ್ ಚೆನ್ನೂ ಯೇಚ್ನೆ ಬಿಟ್ಬಿಡಿ. ಇಲ್ಲೆ ನಮ್ಮೂರ್ ಹ್ವತ್ರ ರಂಗಿ ಅಂತ ಒಬ್ಳದೆ. ಹ್ವಾದ್ಕಾಲ ಅದರ್‍ಗಂಡ ತೀರಿ ಹೋದ. ಅದಿನ್ನೂ ಪರಾಯದ ಹುಡ್ಗಿ. ಅದ್ಕೆ ಮಕ್ಕು ಮರಿ ಇಲ್ಲ. ಸರಿಯಾದ್ ಗಂಡ್ ಸಿಕ್ರೆ ಸೀರುಡ್ಕಿ ಮಾಡ್ಕುತೀನಿ. ಅಂತ ಹೇಳ್ತಿತ್ತಂತೆ. ಮನ್ಸಿದ್ರೆ ಹೇಳಿ, ನಾ ಬೇಕಾರೆ ಇಚಾರ ಮಾಡ್ತೀನಿ."

"ವಳ್ಳೆ ಮಾತಂತೀರಿ. ಸೀರುಡ್ಕಿ ಮಾಡ್ಕು ಬೇಕು ಅಂತ ಆದ್ರೆ, ಎಷ್ಟ್ ಹಿಣ್‌ಬೇಕು. ಅದೂ ನಂಗೆ! ಅದ್ಕೆ ನಿಮ್ಮತ್ರ ನಾಯಾಕೆ ಬರ್‍ಬೇಕು? ನಿಮ್ಗೆ ತ್ವಂದ್ರೆ ಕೊಟ್ಟೆ ಅಂತ ಕಾಣ್ತದೆ. ನಾ ಬತ್ತೀನಿ. ಹಂಗ್ಯಾರೆ ನಿಮ್ ಗೌಡ್ರು ಪ್ಯಾಟಿಗ್ಹೋದೋರು ಬಂದ್ಮ್ಯಾಲೆ ನಾ ಬಂದಿದ್ದಾ ಅಂತ ಹೇಳಿ."

ದ್ಯಾವೇಗೌಡರು, ಯಃಕಶ್ಚಿತ್ ಒಬ್ಬ ಬಡ ಗೇಣಿದಾರನ ಹೆಂಡತಿಯ ಕೈಯಲ್ಲಿ ತಮಗೆ ಇಷ್ಟೊಂದು ಅವಮಾನವಾಗುತ್ತದೆ ಎಂದು ತಿಳಿದಿರಲಿಲ್ಲ. ಅವರ ಮನಸ್ಸಿನಲ್ಲಿ ಕಟ್ಟಿದ್ದ ನಾಲ್ಕನೆಯ ಮದುವೆಯ ಮಂಟಪವು ಕಳಚಿ ಬಿದ್ದಿತ್ತು. ಅಭಿಮಾನಕುಂಠಿತರಾಗಿ ಅವರು ನಿರಾಶೆಯಿಂದ ಸಿರವಂತೆಗೆ ಪ್ರಯಣ ಬೆಳೆಸಿದರು.

ದ್ಯಾವೇಗೌಡರ ಪ್ರಕರಣವಾದ ನಂತರ ಚೆನ್ನಮ್ಮನಿಗೆ ಖಾತೇದಾರನನ್ನು ಕೈ ಹಿಡಿಯಬೇಕೆಂದಿದ್ದ ಹುಚ್ಚು ಸಂಪೂರ್ಣವಾಗಿ ಬಿಟ್ಟು ಹೋಗಿತ್ತು. ಹಣವಂತ ಮುದುಕನಿಗಿಂತ ಹಣವಿಲ್ಲದ ಯುವಕ ಲೇಸೆಂದು ನಿಂಗಮ್ಮ ಹೇಳುತ್ತಿದ್ದುದನ್ನು ಅವಳು ಸಂಪೂರ್ಣವಾಗಿ ಅನುಮೋದಿಸಿದ್ದಳು. ಒಂದು ದಿನ ಚೆನ್ನಮ್ಮನ ಸೋದರ ಮಾವ ಬಡಿಯಪ್ಪಗೌಡರು ಅಮೃತೂರಿಗೆ ಬಂದಿದ್ದಾಗ ತಂಗಿ ನಿಂಗಮ್ಮನೊಡನೆ ಮಾತನಾಡುತ್ತಿದ್ದಾಗ, ಸಿದ್ದಣ್ಣನ ವಿಚಾರವನ್ನು ಪ್ರಸ್ತಾಪಿಸಿದ್ದರು. ನಿಂಗಮ್ಮನು "ಅಂಕಾ ನೋಡಾನ ಇನ್ನೂ ಕಾಲ ಅದಿಯಲ್ಲ" ಎಂದು ಹೇಳಿದ್ದಳು. ಈ ಮಾತುಗಳನ್ನು ಚೆನ್ನಮ್ಮನು ಕೇಳಿದ್ದಳು. ಚೆನ್ನಮ್ಮನು ಸಿದ್ದಣ್ಣನನ್ನು ಒಮ್ಮೆ ನೋಡಿದ್ದಳು. ಅವನ ರೂಪು ಅವಳಿಗೆ ಒಪ್ಪಿಗೆಯಾಗಿತ್ತು. ದ್ಯಾವೇಗೌಡರು ಅಮೃತೂರಿಗೆ ಬಂದು ಹೋದನಂತರ ಚೆನ್ನಮ್ಮನ ಮನಸ್ಸು ನಿಧಾನವಾಗಿ ಸಿದ್ದಣ್ಣನ ಕಡೆಗೆ ಹರಿದಿತ್ತು. ಆದರೆ ಮನಸ್ಸನ್ನು ಬಿಚ್ಚಿ ತಂದೆ ತಾಯಿಗಳಿಗೆ ಹೇಳುವಷ್ಟು ಧೈರ್ಯ ಅವಳಿಗಿರಲಿಲ್ಲ. "ಮನಸ್ಸಿದ್ದಂತೆ ಮಾದೇವ" ಎನ್ನುವ ಗಾದೆಗನುಗುಣವಾಗಿ, ಅವಳ ಸೋದರಮಾವ ಬಡಿಯಪ್ಪಗೌಡರೂ ಕೆಲವು ದಿನಗಳನಂತರ ಅಮೃತೂರಿಗೆ ಬಂದರು. ಊಟ ಉಪಚಾರಗಳಾದ ನಂತರ ನಿಂಗಮ್ಮನೂ, ಚೆನ್ನಪ್ಪಗೌಡರೂ, ಬಡಿಯಪ್ಪಗೌಡರೂ ಜಗಲಿಯ ಮೇಲೆ ಎಲೆ ಅಡಕೆಗಳನ್ನು ಸವಿಯುತ್ತಾ ಕುಳಿತಿದ್ದರು. ಬಡಿಯಪ್ಪಗೌಡರು ಚಿನ್ನಪ್ಪಗೌಡರನ್ನು ಕುರಿತು,

"ಚಿನ್ನಪ್ಪಾವ, ಚೆನ್ನೂನ ಆ ಪಂಜ್ರೊಳ್ಳಿ ಸಿದ್ದಗೆ ಯಾಕ್ ಕೊಡ್ಬಾರ್ದು?" ಎಂದು ಕೇಳಿದರು.

"ಮಗೀನ, ಈಬ್ಯಾರೆ, ಸಿರವಂತೆ ದ್ಯಾವೇಗೌಡ್ರೀಗೆ ಕೊಟ್ಟು, ತಿಮ್ಲ ಬಟ್ರ ಋಣ ತೀರ್ಸಾನ ಅಂತ ಮಾಡಿದ್ದೆ. ದ್ಯಾವೇಗೌಡ್ರ ಹೆಸ್ರು ಹೇಳಿದರೆ ಸಾಕು, ನಿಮ್ ತಂಗಿ ನಿಂಗಿ, ಸಿಂಗರ ಬೆಕ್ಕಿನ ಹಾಗೆ ಮಾಡ್ತದೆ. ನಿಮಗೂ ಮನ್ಸಿಲ್ಲಾ ಅಂತ ನಿಂಗಿ ಹೇಳ್ತಾ ಇತ್ತು. ನಿಂಬಿಟ್ಟು ನಾ ಯೇನ್ ಮಾಡೂದು. ನೀವೊಪ್ಪೊದಾದ್ರೆ ಸಿರುವಂತೆ ದ್ಯಾವೇಗೌಡ್ರಿಗೆ ಕೊಡಾನಾ ಅಂತ ನನ್ಮನ್ಸು. ದ್ಯಾವೇಗೌಡ್ರನ್ನ ನೀವ್ ಬಲ್ರಿ, ಆಸ್ತಿ ಮನೆ ಮಸ್ತಾಗ್ಯದೆ. ನಂಮ್ಮಗೂನೂ ಸುಕ್ವಾಗೆ ಇರ್ಬೇದು. ನೋಡಿ"

"ನಾ ದ್ಯಾವೇಗೌಡ್ರನ್ನ ನೋಡೀನಿ. ಅವರೀಗೆ ಅರವತ್ತು ವುರ್ಸದ ಹ್ವತ್ರ ಬಂದದೆ. ಬಡ್ಕಲಾಗಿ ಅದ್ಯಾರೆ. ಆಸ್ತಿ ಇಂದ್ ಇರ್ತದೆ: ನಾಳೆ ಹೋತದೆ. ಆಸ್ತಿ ಕಟ್ಗೊಂಡು ಏನಾಗಬೇಕು? ಹಿಣ್ಣೀಗೆ ಗಂಡ್ಮುಕ್ಯ."

"ನಿಮ್ಗೆ, ನಿಮ್ ತಂಗೀಗೆ ಮನ್ಸಿಲ್ದೆ ಇದ್ರೆ. ನಾ ಏನ್ ಮಾಡ್ಲಿ? ನಿಮ್ಗೆ ತಿಳ್ದಾಗೆ ಮಾಡಿ. ನನ್ನ ಅಪ್ಪನೂ ಋಣ ಬಾಧೆ ಇಟ್ಗುಂಡೇ ಸತ್ತ. ನಾನೂ ಬಟ್ಟರ ಋಣದಾಗೇ ಬಿದ್ ಸಾಯೂದು. ಆಗ್ಲಿಬಿಡಿ. ಇನ್ನೇನ್ ಮಾಡ್ಲಿ?"

"ಭಾವ, ಮಲ್ಸೀಮೇಲಿ ಕೊಟ್ಟೋರ್ಗ್ಗಂಟು ಪೂರಾ ಕೊಟ್ಟೋರು, ವಕ್ಕಲ್ಮಕ್ಳು ಎಲ್ಲಿ ಅದ್ಯಾರೆ? ಋಣ ತೀರ್ರೂಸ್ಕೆ. ಸಾಹುಕಾರ್ರು ಬಿಡ್ಬೇಕಲ್ಲಾ ನಾವ್ ಬೆಳೆದ್ದೆಲ್ಲಾ ಕೊಟ್ರೂ ಅವ್ರ ಬಡ್ಡಿ ಗೀಟೂದಿಲ್ಲಾ. ನಾವೇಟ್ ಕೊಟ್ರು ಅವ್ರ ಹೊಟ್ಟುಂಬೂದಿಲ್ಲ. ನಂದ್ ನೋಡಿ, ನಮ್ಮಪ್ಪ ಸಾಯಾಗ ತಿಮ್ಲಬಟ್ರ್ ಹ್ವತ್ರ ಅಸ್ಲೂ ಬಡ್ಡಿ ಸೇರಿ, ಇನ್ನೂರ್ ರೂಪಾಯಿ ಸಾಲಿತ್ತು. ಅಪ್ಪ ಸತ್ತು ಎಂಟು ವುರ್ಸಾತು. ಅವ ಸತ್ ಮ್ಯಾಲೆ, ನಾ ವುರ್ಸಾ ವುರ್ಸಾ ಬಟ್ರೀಗೆ ಯಲ್ಡ್ ಮಣ ಅಡಕೆ ಕೊಡ್ತಾ ಬಂದೀನಿ. ಮನ್ನೆ, ಮುನ್ನೂರು ರೂಪಾಯಿ ಬಾಕಿ ಆಗ್ಯದೆ ಅಂತ ಬಟ್ರು ವಸೂಲಿ ಸಾಬ್ರ ಹ್ವತ್ರ ವುಂದ್ ಸಂಪರ್ತಿ ಪಟ್ಟಿ ಕಳ್ಸಿದ್ರು, ಏನ್ ಮಾಡ್ಲಿ? ಹೆಬ್ಬೆಟ್ ವತ್ತಿಕೊಟ್ಟೆ ಹೊಳೆ ಇಳ್ದವಗೆ ಚಳಿಯೇನ್ ಮಳೆಯೇನ್? ಸಾಲ ನೂರು ಮುಟ್ಟು ತಂಕ ಸಾಲ್ಗಾರ; ಅಮ್ಯಾಲೆ ಲೋಲ್ಗಾರ. ನಮ್ಮಪ್ಪನ ಕಾಲ್ಕೆ, ತಿಮ್ಲಬಟ್ರ ಅಪ್ಪ ನಾಗೀಂದ್ರಬಟ್ರು ಮೋಸಮಾಡಿ ನಮ್ ಭೂಮಿ ಬರ್ಸುಗುಂಡು, ನಮ್ಮನ್ನ ಗೇಣಿ ವಕ್ಕಲ್ಮಾಡದರು. ಈಗ ರುಜು ಮಾಡ್ಸುಗುಂಡು ಏನ್ಮಾಡ್ತಾರೆ? ಕೂಲಿ ಆಳ್ಮಾಡ್ತಾರೆ! ಅಷ್ಟೇ! ಮತ್ತೇನ್ಮಾಡ್ತಾರು? ನೀವು ಋಣಬಾಧೆ ಯಿಚಾರ ಹೇಳ್ತೀರಿ. ನಿಮ್ಗುಂದು ಹುಚ್ಚು. ಯಾರ್ ಋಣ ಯಾರ್ ಮ್ಯಾಲೆ ಅದೆ ಅಂತ ಮಾಡೀರಿ? ನಮ್ಮ ನಮ್ಮ ಋಣ್ದಾಗೆ ಸಾಹುಕಾರ್ರು ಬಿದ್ದಾರೆ. ಅವರ ಋಣ ನಂಮ್ಯಾಲೇನಿಲ್ಲಾ. ನಮ್ಮನ್ನ ಸುಲಿಗಿಮಾಡಿ ಮಾಡಿ, ಅವರು ಸತ್ತಮ್ಯಾಲೆ ನಮ್ಮ ನಿಮ್ಮ ತಿಪ್ಪೇ ಗುಂಡೀಲಿ ಹುಳುವಾಗಿ ಹುಟ್ತಾರೆ. ಹಾಂಗ್ಯಾರೆ ಸಿದ್ದಗೆ ನಾ ಮಾತ್ ಕೊಡ್ತೀನಿ"

"ಆಗ್ಲಿ ನಂದೇನ್, ನಿಮ್ಗೆ ತಿಳ್ದಾಗೆ ಮಾಡಿ"

ಆ ವರ್ಷದ ಮದುವೆಯಾಗಿ ಸುಗ್ಗಿಯಲ್ಲಿ ಸಿದ್ದಣ್ಣನೊಡನೆ ಚೆನ್ನಮ್ಮನ ವಿವಾಹವಾಯಿತು. ಮದುವೆ ಸಂಭ್ರಮದಿಂದಲೇ ನಡೆಯಿತು. ಪಂಜರವಳ್ಳಿಯಿಂದ ಅಮೃತೂರಿಗೆ ಹೊರಟ ಮದುವೆಯ ದಿಬ್ಬಣದಲ್ಲಿ ನೂರಾರು ಗೇಣಿದಾರರು ಸೇರಿದ್ದರು. ಖಾತೆದಾರರ ಮದುವೆಗೂ ಅಷ್ಟೊಂದು ಜನರು ಬರುತ್ತಿರಲಿಲ್ಲ. ಸಿದ್ದಣ್ಣನ ವಿವಾಹವಾದ ನಂತರ ಒಂದೆರಡು ತಿಂಗಳಲ್ಲಿ ದ್ಯಾವೇಗೌಡರು ರಂಗಿಯನ್ನು ಪುನರ್ವಿವಾಹವಾದರು.

## ೬. ಗಿಡ್ಡಣ್ಣ (ಮೋಹನ)

ಚೆನ್ನಮ್ಮನ ಕೈ ಹಿಡಿದಂದಿನಿಂದ ಸಿದ್ದಣ್ಣನ ಸ್ಥಿತಿ ಎಲ್ಲಾ ವಿಧಗಳಲ್ಲಿಯೂ ಇನ್ನಷ್ಟು ಸುಧಾರಿಸಿತ್ತು. ಅವನ ಪ್ರಭಾವ ಮೊದಲಿಗಿಂತಲೂ ಹೆಚ್ಚಾಗಿ ಬೆಳೆದಿತ್ತು. ಸಿದ್ದಣ್ಣನು ಗೇಣಿದಾರರ ಏಕೈಕ ನಾಯಕನಾಗಿದ್ದನು. ಆ ಪ್ರದೇಶದ ಗೇಣಿದಾರರು ಉದ್ಭವಿಸುತ್ತಿದ್ದ ವಿವಾದಗಳನ್ನು ಅವನು ಪರಸ್ಪರ ರಾಜಿಯಿಂದ ಇತ್ಯರ್ಥ ಪಡಿಸುತ್ತಿದ್ದನು. ಬೆಳ್ಳೀಗೌಡರೂ, ಕಾಳೇಗೌಡರೂ ಕೆಲವು ವಿವಾದಗಳನ್ನೂ ರಾಜಿಯಿಂದ ಇತ್ಯರ್ಥ ಪಡಿಸುತ್ತಿದ್ದರು. ಆದರೆ ಅವರ ಕ್ರಮವೇ ಬೇರೆ. ಅವರಿಬ್ಬರೂ ಪಂಚಾಯ್ತಿಯ ನೆಪದಲ್ಲಿ ಕಕ್ಷಿಗಾರರಿಬ್ಬರಿಂದಲೂ ರುಸುಂ ತೆಗೆದುಕೊಂಡು ನಿಷ್ಪಕ್ಷಪಾತದ ಅಧಿದೇವತೆಗಳಂತೆ ವರ್ತಿಸುತ್ತಿದ್ದರು. ಅವರಿಬ್ಬರಿಗೂ ಸಿದ್ದಣ್ಣನ ಏಳಿಗೆಯನ್ನು ನೋಡಿ ಕಣ್ಣು ಕೆಂಪಾಗಾಗಿತ್ತು. ಸಿದ್ದಣ್ಣನಿಗೆ ಜನಬೆಂಬಲವಿದ್ದುದರಿಂದ ಅವನಿಗೆ ಅವರೇನೂ ಮಾಡುವ ಹಾಗಿರಲಿಲ್ಲ. ಸಿದ್ದಣ್ಣನ ಗೇಣಿಯ ಜಮೀನಿನಲ್ಲಿ ಪೈರು ಸಮೃದ್ಧಿಯಾಗಿ ಬೆಳೆಯುತ್ತಿತ್ತು. ರಿಯಾಯ್ತಿ ದರದಲ್ಲಿ ಗೇಣಿಯನ್ನು ಕೊಡುತ್ತಿದ್ದುದರಿಂದ ಜಮೀನಿನಿಂದ ಬರತಕ್ಕ ವರಮಾನವು ಅವನ ಜೀವನದ ಅಂತಸ್ತಿಗೆ ಯಥೇಚ್ಚವಾಗಿತ್ತೆಂದು ಹೇಳಬಹುದು.ತಿರುಮಲಭಟ್ಟರು ಗೇಣಿ ಕರಾರನ್ನು ಬರೆದುಕೊಟ್ಟಿರಲಿಲ್ಲವೆಂಬ ಸಂಗತಿ ಬೆಳ್ಳೀಗೌಡರಿಗೂ ಕಾಳೇಗೌಡರಿಗೂ ಗೊತ್ತಿತ್ತು. ಎಂದಾದರೂ ಸಿದ್ದಣ್ಣನಿಗೂ ತಿರುಮಲಭಟ್ಟರಿಗೂ ವಿರಸ ಬಂದಾಗ. ಜಮೀನನ್ನು ಸಿದ್ದಣ್ಣನ ಕೈ ತಪ್ಪಿಸಬೇಕೆಂದು ಕಾಳೇಗೌಡರು ಹವಣಿಸುತ್ತಿದ್ದರು. ತಿರುಮಲಭಟ್ಟರು ಬಡಬಗ್ಗರ ಶೋಷಣೆಯಿಂದಲೇ ಸಂಪಾದನೆ ಮಾಡಿದವರಾಗಿದ್ದರು. ಆದರೆ ವಯಸ್ಸು ಆದಹಾಗೆಲ್ಲಾ ಧರ್ಮಕರ್ಮಗಳ ವಿವೇಚನೆ ಅವರಲ್ಲಿ ಬೆಳೆಯುತ್ತಾ ಬಂದಿತ್ತು. ಮುಪ್ಪಿನ ಕಾಲದಲ್ಲಿ ಅನ್ಯಾಯಗಳನ್ನು ಮಾಡಲು ಅವರ ಮನಸ್ಸು ಹಿಂಜರಿಯುತ್ತಿತ್ತು. ಸಿದ್ದಣ್ಣನ ಜಮೀನನ್ನು ಬಿಡಿಸಿ ತನಗೆ ಗೇಣಿಗೆ ಕೊಟ್ಟರೆ ತಾನು ಹೆಚ್ಚು ಗೇಣಿಯನ್ನು ಕೊಡುವುದಾಗಿ ಕಾಳೇಗೌಡರು ತಿರುಮಲಭಟ್ಟರಿಗೆ ಕೆಲವು ಸಾರಿ ಹೇಳಿದ್ದರು. ಯಾರೂ ಸಾಗುವಳಿ ಮಾಡದೆ ಇದ್ದ ಅರೂಪಾದ ಜಮೀನನ್ನು ಸಿದ್ದಣ್ಣನ ತಂದೆ ತೆಗೆದುಕೊಂಡಿದ್ದನ್ನೂ ಜಮೀನು ಸರಿಯಾದ ರೂಪಕ್ಕೆ ಬಂದಿದ್ದನ್ನೂ ಭಟ್ಟರು ಮರೆತಿಲಿಲ್ಲ. ಆದ್ದರಿಂದ ಜಮೀನನ್ನು ಸಿದ್ದಣ್ಣನ ಕೈ ತಪ್ಪಿಸುವುದು ನ್ಯಾಯವಲ್ಲವೆಂದು ಅವರು ಕಾಳೇಗೌಡರಿಗೆ ಹೇಳಿದ್ದರು.

ಮದುವೆಯಾದ ಎರಡು ವರ್ಷಗಳಲ್ಲಿ ಸಿದ್ದಣ್ಣನಿಗೆ ಒಂದು ಗಂಡುಮಗುವಾಯಿತು. ತಂದೆತಾಯಿಗಳ ಸಂತೋಷಕ್ಕೆ ಪಾರವೇ ಇರಲಿಲ್ಲ. ಅರೆಮರುಳು ಈರಮ್ಮನೂ ಆ ಸಂತೋಷದಲ್ಲಿ ಭಾಗಿಯಾಗಿದ್ದಳು. ಮಗುವಿಗೆ ಗಿಡ್ಡಣ್ಣನೆಂದು ನಾಮಕರಣ ಮಾಡಿದರು.

ಈರಮ್ಮನು ಮೊಮ್ಮಗನನ್ನೆತ್ತಿಕೊಂಡು ಮುದ್ದಾಡಬೇಕೆಂದು ಆಸೆಪಡುತ್ತಿದ್ದಳು. ಆದರೆ ಆಕೆಯ ಕೈಗೆ ಮಗು ಕೊಡಲು ಚೆನ್ನಮ್ಮನು ಒಪ್ಪುತ್ತಿರಲಿಲ್ಲ. ಹುಚ್ಚಿಯ ಕೈಗೆ ಮಗುವನ್ನು ಕೊಟ್ಟರೆ ಮಗುವಿನ ಪ್ರಾಣಕ್ಕೆ ಅಪಾಯ ಬರಬಹುದೆಂಬ ಭಯ ಚೆನ್ನಮ್ಮನಿಗಿತ್ತು. ಈರಮ್ಮನು ಒಂದು ದಿನ ಸಿದ್ದಣ್ಣನನ್ನು ಕರೆದು "ಹುಡ್ಗಾ, ನಾವುಂಚೂರು ಬಾಲೆ ಕರ್ಕೊತೀನೋ ನಿಸ್ಹಿಡ್ತಿಗೆ ಕೊಡೂಕೆ ಹೇಳೋ ನಿನ್ ದಮ್ಮಯ್ಯಾ ಕಣೋ" ಎಂದು ಗೋಗರೆದಳು. ಮಗುವನ್ನು ತಾಯಿಯ ಕೈಗೆ ಕೊಡಬೇಕೆಂದು ಸಿದ್ದಣ್ಣನು ಹೆಂಡತಿಗೆ ಹೇಳಿದನು. ಚೆನ್ನಮ್ಮನು ಗಂಡನ ಮಾತನ್ನು ಮೀರಲಾರದೆ ಬಹಳ ಅಸಮಾಧಾನದಿಂದ ಮಗುವನ್ನು ಅತ್ತೆಯ ಕೈಗೆ ಕೊಟ್ಟಳು. ಮಗುವನ್ನು ತಾಯಿ ಏನು ಮಾಡುವಳೋ ಎಂಬ ಭಯ ಸಿದ್ದಣ್ಣನಿಗೂ ಇತ್ತು. ಆದ್ದರಿಂದ ಅವನು ತಾಯಿಯ ಪಕ್ಕದಲ್ಲೇ ನಿಂತುಕೊಂಡು, ಆಕೆಯ ಚಲನವಲನಗಳ ಕಡೆಗೆ ದೃಷ್ಟಿ ಇಟ್ಟಿದ್ದನು. ಈರಮ್ಮನಿಗೆ ಮಗುವಿನ ಸ್ಪರ್ಶದಿಂದ ಎಂದೋ ಕವಿದಿದ್ದ ಮಬ್ಬು ಹರಿದಂತಾಗಿ, ಹುಚ್ಚು ಏಕಾಏಕಿ ಇಳಿದಂತೆ ತೋರಿತು. ಯಥಾಸ್ಥಿತಿ ಇದ್ದವರು ಮಾತನಾಡುವಂತೆ ಆಕೆಯು ಮಾತನಾಡತೊಡಗಿದಳು. ಸಿದ್ದಣ್ಣನಿಗೂ ಚೆನ್ನಮ್ಮನಿಗೂ ಆಶ್ಚರ್ಯವಾಯಿತು. ಅಂದಿನಿಂದ ಅಮಾವಾಸ್ಯೆ ಮತ್ತು ಹುಣ್ಣಿಮೆ ದಿನಗಳಲ್ಲಿ ಹುಚ್ಚು ಕೆಣಕುತ್ತಿತ್ತು. ಉಳಿದ ದಿನಗಳಲ್ಲಿ ಮಂಕುಹಿಡಿದಂತೆ ಇದ್ದರೂ ಉಳಿದ ವಿಚಾರಗಳಲ್ಲಿ ಎಲ್ಲರಂತೆ ಇರುತ್ತಿದ್ದಳು. ಮಗು ಕೈಗೆ ಸಿಕ್ಕಾಗ ಅವಳ ಮನಸ್ಸು ಬಹಳ ತಿಳಿಯಾಗಿರುತ್ತಿತ್ತು. ಚೆನ್ನಮ್ಮನು ಗದ್ದೆ ಅಥವಾ ತೋಟದ ಕೆಲಸಕ್ಕೆ ಹೋದಾಗ ಈರಮ್ಮನೇ ಮಗುವನ್ನು ನೋಡಿಕೊಳ್ಳುತ್ತಿದ್ದಳು. ಆದರೂ ಅತ್ತೆಯನ್ನು ಚೆನ್ನಮ್ಮನು ಸಂಪೂರ್ಣವಾಗಿ ನಂಬುತ್ತಿರಲಿಲ್ಲ. ಯಾವಾಗ ಹುಚ್ಚು ಕೆಣಕಿ ಮಗುವನ್ನು ಏನು ಮಾಡಿಬಿಡುವಳೋ ಎಂಬ ಭಯ ಅವಳಿಗೆ ಸದಾ ಇರುತ್ತಿತ್ತು. ಆಕೆಯ ದೇಹ ಗದ್ದೆ ತೋಟಗಳಲ್ಲಿದ್ದರೂ ಮನಸ್ಸು ಮಾತ್ರ ಗಿಡ್ಡಣ್ಣನ ಬಳಿ ಇರುತ್ತಿತ್ತು. ಮಗುವಿಗೆ ಎರಡು ವರ್ಷಗಳಾದನಂತರ ಅದರ ಚರ್ಯೆ ಎಲ್ಲವೂ ಹುಲಿಯ ಬಾಯಿಗೆ ತುತ್ತಾಗಿದ್ದ ಪುಟ್ಟನನ್ನೇ ಹೋಲುತ್ತಿತ್ತು. ಈ ಕಾರಣದಿಂದ ಈರಮ್ಮನು ಮಗುವನ್ನು ಅತಿಯಾಗಿ ಪ್ರೀತಿಸುತ್ತಿದ್ದಳು.

ಗಿಡ್ಡಣ್ಣನಿಗೆ ಆರು ವರ್ಷಗಳು ತುಂಬಿದನಂತರ, ಅವನನ್ನು ಶಾಲೆಗೆ ಕಳುಹಿಸಬೇಕೆಂದು ಸಿದ್ದಣ್ಣನು ಯೋಚಿಸಿ, ತಾಯಿಯ ಮತ್ತು ಹೆಂಡತಿಯ ಅಭಿಪ್ರಾಯವನ್ನು ಕೇಳಿದನು. ಚೆನ್ನಮ್ಮನಿಗೆ ಗಿಡ್ಡಣ್ಣ ಹುಟ್ಟಿದ ನಂತರ ಮತ್ತೆ ಮಕ್ಕಳಾಗಲೇ ಇಲ್ಲ. ಆದ್ದರಿಂದ ಗಿಡ್ಡಣ್ಣನು ಏಕಮಾತ್ರ ಪುತ್ರನಾಗಿ ತಾಯಿ ಮತ್ತು ಅಜ್ಜಿಯ ಪ್ರೇಮದ ಪುತ್ಥಳಿಯಾಗಿದ್ದನು. ಇಬ್ಬರೂ ಗಿಡ್ಡಣ್ಣನನ್ನು ಶಾಲೆಗೆ ಕಳುಹಿಸಲು ಒಪ್ಪಲಿಲ್ಲ. ಸಿದ್ದಣ್ಣನು ಅವರಿಬ್ಬರನ್ನೂ ಗದರಿಸಿ ಒಪ್ಪಿಸಬೇಕಾಗಿ ಬಂತು. ಪಂಜರವಳ್ಳಿಯಲ್ಲಿ ವೆಸ್ಲಿಯನ್ ಮಿಷನ್ ಸಂಸ್ಥೆಯವರು ಸ್ಥಾಪಿಸಿದ್ದ ಪ್ರಾಥಮಿಕ ಶಾಲೆಯೊಂದಿತ್ತು. ಗಿಡ್ಡಣ್ಣನನ್ನು ಆ ಶಾಲೆಗೆ ಸಿದ್ದಣ್ಣನು ಸೇರಿಸಿದನು. ಗಿಡ್ಡಣ್ಣನು ಆ ಶಾಲೆಯಲ್ಲಿ ನಾಲ್ಕು ವರ್ಷಗಳ ಕಾಲ ವ್ಯಾಸಂಗವಾಡಿ, ಪ್ರತಿ ತರಗತಿಯಲ್ಲಿಯೂ ಮೊದಲನೆಯ ಶ್ರೇಣಿಯಲ್ಲಿ

ಉತ್ತೀರ್ಣನಾಗಿದ್ದನು. ಉಳಿದ ಎಲ್ಲ ಮಕ್ಕಳಿಗಿಂತಲೂ ಅವನು ಪ್ರತಿಭಾವಂತನಾಗಿದ್ದನು. ಸಿದ್ದಣ್ಣನು ತನ್ನ ಮಗನ ಪ್ರತಿಭೆಯನ್ನು ಕಂಡು ಹಿಗ್ಗಿದನು. ತಿರುಮಲಭಟ್ಟರ ಮಗ ನಾಗೇಂದ್ರನೂ, ಬೆಳ್ಳೇಗೌಡರ ಮಗ ಸಣ್ಣೇಗೌಡನೂ, ಕಾಳೇಗೌಡರ ಮಗ ನೀಲೇಗೌಡನೂ ಪವಿತ್ರಪುರದ ಪ್ರೌಢಶಾಲೆಯಲ್ಲಿ ಇಗ್ಲೀಷನ್ನು ಓದಿಕೊಂಡು ವ್ಯಾಸಂಗವನ್ನು ಬಿಟ್ಟು ಊರನ್ನು ಸೇರಿದ್ದರು. ಅವರು ಆಗಾಗ ಪಂಜರವಳ್ಳಿಗೆ ಬರುತ್ತಿದ್ದ ಶೇಖದಾರರನ್ನೂ, ದಫೇದಾರರನ್ನೂ ಇಂಗ್ಲೀಷಿನಲ್ಲಿ ಮಾತನಾಡಿಸುತ್ತಿದ್ದುದನ್ನು ಸಿದ್ದಣ್ಣನು ನೋಡಿದ್ದನು. ತನ್ನ ಮಗನಿಗೂ ಇಂಗ್ಲೀಷ್ ಶಿಕ್ಷಣ ಕೊಡಬೇಕೆಂದು ಅವನು ಆಸೆಪಟ್ಟಿದ್ದನು. ಆದರೆ ಮಗನನ್ನು ಪವಿತ್ರಪುರದಲ್ಲಿಟ್ಟು ಓದಿಸುವ ಸಾಮರ್ಥ್ಯ ಅವನಿಗಿರಲಿಲ್ಲ. ಆದ್ದರಿಂದ ಅವನು ಆ ವಿಚಾರದಲ್ಲಿ ಬಹಳ ಚಿಂತಿಸುತ್ತಿದ್ದನು. ಪಂಜರವಳ್ಳಿಯ ಶಾಲೆಯಲ್ಲಿ ಓದು ಮುಗಿದ ನಂತರ ಗಿಡ್ಡಣ್ಣನು ಆರುತಿಂಗಳ ಕಾಲ ಮನೆಯಲ್ಲಿಯೇ ಆಡಿಕೊಂಡಿದ್ದನು. ಅವನನ್ನು ನೋಡಿದಾಗಲೆಲ್ಲಾ ತನ್ನ ಕೈಯಲ್ಲಿ ಓದಿಸುವ ಶಕ್ತಿಯಿಲ್ಲವೆಂದು ಸಿದ್ದಣ್ಣನು ಕೊರಗುತ್ತಿದ್ದನು. ಏಳನೆಯ ತಿಂಗಳಲ್ಲಿ ಒಂದು ಅನಿರೀಕ್ಷಿತ ಘಟನೆ ನಡೆದು ಗಿಡ್ಡಣ್ಣನು ಮುಂದಿನ ವ್ಯಾಸಂಗಕ್ಕಾಗಿ ಮೈಸೂರಿಗೆ ಹೋಗುವ ಸದವಕಾಶವು ದೊರೆಯಿತು. ಕ್ರಿಸ್‌ಮಸ್ ಹಬ್ಬದ ನಂತರ ವೆಸ್ಲಿಯನ್ ಮಿಷನ್ ಸಂಸ್ಥೆಯ ವ್ಯವಸ್ಥಾಪಕರಾಗಿದ್ದ ಜಾನ್ ಎಂಬುವವರು ಮೈಸೂರಿನಿಂದ ಪಂಜರವಳ್ಳಿಗೆ ಶಾಲೆಯ ಮೇಲ್ವಿಚಾರಣೆಗೋಸ್ಕರ ಬಂದಿದ್ದರು. ಅನಿರೀಕ್ಷಿತವಾಗಿ ಗಿಡ್ಡಣ್ಣನು ಅಂದು ಶಾಲೆಯ ಹತ್ತಿರ ತನ್ನ ಹಿಂದಿನ ವಿದ್ಯಾರ್ಥಿಸ್ನೇಹಿತರ ಭೇಟಿಗಾಗಿ ಹೋಗಿದ್ದನು. ಗಿಡ್ಡಣ್ಣನ ಮುಖದಲ್ಲಿ ಯಾವುದೋ ವಿಧವಾದ ಒಂದು ಅಪೂರ್ವ ತೇಜಸ್ಸಿತ್ತು. ಆ ತೇಜಸ್ಸು ಜಾನ್‌ರವರ ಗಮನವನ್ನು ಸೆಳೆಯದೆ ಇರಲಿಲ್ಲ. ಗಿಡ್ಡಣ್ಣನಾರೆಂಬುದನ್ನು ಶಾಲೆಯ ಉಪಾಧ್ಯಾಯರಿಂದ ಅವರು ತಿಳಿದುಕೊಂಡರು. ಗಿಡ್ಡಣ್ಣನು ಪ್ರತಿ ತರಗತಿಯಲ್ಲಿಯೂ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾಗಿದ್ದನೆಂಬುದನ್ನು ಕೇಳಿ ಜಾನ್‌ರವರಿಗೆ ತುಂಬಾ ಆನಂದವಾಗಿತ್ತು. ಅಂತಹ ಪ್ರತಿಭಾವಂತ ಬಾಲಕನ ಶಿಕ್ಷಣಕ್ಕೆ ತಮ್ಮ ಸಂಸ್ಥೆಯವರು ಸಹಾಯಮಾಡುವುದು ಅವಶ್ಯಕವೆಂದು ಅವರು ಭಾವಿಸಿದರು. ಕೂಡಲೆ ಸಿದ್ದಣ್ಣನನ್ನು ಕರೆಸಿ, ಮುಂದಿನ ಶಿಕ್ಷಣಕ್ಕಾಗಿ ಗಿಡ್ಡಣ್ಣನನ್ನು ತಾವು ಮೈಸೂರಿಗೆ ಕರೆದುಕೊಂಡು ಹೋಗುವುದಾಗಿಯೂ, ಅಂತಹ ಅವಕಾಶವನ್ನು ಬಿಡಬಾರದಾಗಿಯೂ ಹೇಳಿದರು. ಸಿದ್ದಣ್ಣನು ಯೋಚನೆ ಮಾಡತೊಡಗಿದನು. ನೂರಾರು ಮೈಲಿಗಳ ದೂರದಲ್ಲಿದ್ದ ಮೈಸೂರಿಗೆ ಚಿಕ್ಕಮಗನನ್ನು ಕಳುಹಿಸಿ ಹೇಗಿರುವುದೆಂಬ ಯೋಚನೆ, ಮೈಸೂರಿನಲ್ಲಿ ಮಗನಿಗೆ ಏನಾದರೂ ವಿಪತ್ತು ಸಂಭವಿಸಿದರೆ ಗತಿಯೇನೆಂಬ ಯೋಚನೆ, ಕ್ರೈಸ್ತರ ಪ್ರಭಾವದಿಂದ ಮಗನು ಕ್ರೈಸ್ತನಾದರೆ ಮಾಡುವುದು ಏನೆಂಬ ಯೋಚನೆ, ಇವೇ ಮುಂತಾದ ಯೋಚನೆಗಳಲ್ಲಿ ಅವನು ಮಗ್ನನಾಗಿದ್ದನು. ಸಾಧಕ ಬಾಧಕಗಳನ್ನು ತುಲನೆಮಾಡಿ ಕೊನೆಗೆ ಮಗನನ್ನು ಜಾನ್‌ರವರ ಜೊತೆಯಲ್ಲಿ ಕಳುಹಿಸುವುದಾಗಿ ಒಪ್ಪಿದನು. ಗಿಡ್ಡಣ್ಣನು ಮೈಸೂರಿಗೆ ಹೋಗುವ ಸುದ್ದಿಯನ್ನು ಕೇಳಿದ ಈರಮ್ಮನೂ ಚೆನ್ನಮ್ಮನೂ, ಬಹಳವಾಗಿ ಅತ್ತರು. ಗಿಡ್ಡಣ್ಣನು

ಅಜ್ಜಿಯನ್ನೂ, ತಾಯಿಯನ್ನೂ ಸಮಾಧಾನಪಡಿಸಿ ಜಾನ್‌ರವರ ಜೊತೆಯಲ್ಲಿ ಆ ದಿನವೇ ಮೈಸೂರಿಗೆ ಪ್ರಯಾಣ ಬೆಳೆಸಿದನು. ಅವನು ಮೈಸೂರಿಗೆ ತೆರಳಿದ ನಂತರ ಸಿದ್ದಣ್ಣನ ಹುಲ್ಲುಮನೆ ಸ್ಮಶಾನದಂತಾಗಿತ್ತು. ಅಜ್ಜಿ ಈರಮ್ಮನ ಮತ್ತು ಚೆನ್ನಮ್ಮನ ವ್ಯಥೆಗೆ ಮಿತಿಯೇ ಇರಲಿಲ್ಲ. ಸಿದ್ದಣ್ಣನು ವ್ಯಸನವನ್ನು ಹೊರಗಡೆ ತೋರ್ಪಡಿಸದೆ ಇದ್ದರೂ ಮನಸ್ಸಿನಲ್ಲೇ ಕೊರಗುತ್ತಿದ್ದನು. ಸಾಲದುದಕ್ಕೆ ದಾಯಾದಿ ಕಾಳೇಗೌಡರು, ಎರಡು ದಿನಗಳ ನಂತರ ಸಿದ್ದಣ್ಣನೊಡನೆ ಮಾತನಾಡುತ್ತಿದ್ದಾಗ ವ್ಯಂಗ್ಯವಾಗಿ "ಏನೋ ಸಿದ್ದಾ, ನಿನ್ಮಗನ್ನ ಕಿಲಸ್ಥಾನ್ ಜಾತೀಗೆ ಸೇರಿಸಿದಂತೆಲ್ಲೋ? ಹೌದೇನೋ" ಎಂದು ಕೇಳಿದರು. ಸಿದ್ದಣ್ಣನಿಗೆ ಅವರ ಮಾತುಗಳನ್ನು ಕೇಳಿ ಸೂಜಿಯಲ್ಲಿ ಚುಚ್ಚಿದಂತಾಯಿತು. "ಕಿಲಸ್ಥಾನ್ ಜಾತಿಗಲ್ಲ, ಇಂಗ್ಲೀಷ್ ಜಾತೀಗೆ ಸೇರ್ಲ್ಸಾನ ಅಂತ ಅವನ್ನ ಮೈಸೂರಿಗೆ ಕಳ್ಸೀನಿ" ಎಂದು ವ್ಯಂಗ್ಯವಾಗಿ ಉತ್ತರ ಕೊಟ್ಟನು. ಗಿಡ್ಡಣ್ಣನು ಮೈಸೂರಿಗೆ ಹೋದನಂತರ ಕೆಲವು ದಿನಗಳಲ್ಲಿ ಈರಮ್ಮನು ಮೊದಲಿನಂತೆ ಹುಚ್ಚಿಯಾದಳು. ಅನಂತರ ಅವಳು ಕೆಲವು ತಿಂಗಳಲ್ಲಿ ಅನಾರೋಗ್ಯದಿಂದ ನರಳಿ ಸ್ವರ್ಗಸ್ಥಳಾದಳು. ಚೆನ್ನಮ್ಮನು ಮಗನ ಅಗಲುವಿಕೆಯಿಂದ ಒಮ್ಮೊಮ್ಮೆ ದುಃಖಪಟ್ಟರೂ, ವಿದ್ಯಾವಂತನಾಗಿ ಗಣ್ಯ ವ್ಯಕ್ತಿಯಾದ ಮೇಲೆ ವಂಶಕ್ಕೆ ಕೀರ್ತಿ ತರುತ್ತಾನೆಂದು ಸಮಾಧಾನ ಪಟ್ಟುಕೊಳ್ಳುತ್ತಿದ್ದಳು.

ಗಿಡ್ಡಣ್ಣ ಮೈಸೂರಿಗೆ ಹೋದನಂತರ ಆರೇಳು ತಿಂಗಳುಗಳಲ್ಲಿ ಪಂಜರವಳ್ಳಿಯ ಪ್ರಮುಖ ವ್ಯಕ್ತಿಯಾಗಿದ್ದ ಕಾಳೇಗೌಡರು ತೀರಿಹೋದರು. ಮೂರನೇವರ್ಷ ತಿರುಮಲಭಟ್ಟರು ತೀರಿ ಹೋದರು. ಕಾಳೇಗೌಡರು ತೀರಿ ಹೋದನಂತರ ಅವರ ಹಿರಿಯ ಮಗ ನೀಲೇಗೌಡನು ಮನೆಯ ಯಜಮಾನನಾದನು. ತಿರುಮಲಭಟ್ಟರ ಮನೆಯಲ್ಲಿ ಮಗ ನಾಗೇಂದ್ರನು ಮನೆಯ ಯಜಮಾನನಾದನು. ಬೆಳ್ಳೇಗೌಡರಿಗೆ ವಯಸ್ಸಾದುದರಿಂದ ಅವರ ಹಿರಿಯ ಮಗ ಸಣ್ಣೇಗೌಡನು ಅವರ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದನು. ಆದ್ದರಿಂದ ಗ್ರಾಮದಲ್ಲಿ ಹೊಸ ಯುವಕ ಮುಖಂಡರು ಹಳಬರ ಸ್ಥಾನವನ್ನಾಕ್ರಮಿಸಿದರು. ಈ ಮೂವರು ಯುವಕರೂ ಸ್ನೇಹಿತರಾಗಿ ಅಹಂಕಾರದಿಂದ ಮೆರೆಯುತ್ತಿದ್ದರು. ಪಂಜರವಳ್ಳಿಯ ಜನಜೀವನದಲ್ಲಿ ಹಳೆಯ ಅಧ್ಯಾಯ ಮುಗಿದು ಹೊಸದೊಂದು ಅಧ್ಯಾಯ ಪ್ರಾರಂಭವಾಗಿತ್ತು. ಕಷ್ಟಪಡದೆ ನಿರಾಯಾಸವಾಗಿ ಐಶ್ವರ್ಯದ ಯಜಮಾನರಾಗುವ ಬಿಸಿ ರಕ್ತದ ಯುವಕರಿಗೆ ಇರಬಹುದಾದ ಕಲ್ಯಾಣ ಗುಣಗಳೆಲ್ಲವೂ ಈ ತ್ರಿಮೂರ್ತಿಗಳಲ್ಲಿದ್ದವು. ಇವರಿಗೆ ಮೊದಲಿನಿಂದಲೂ ಸಿದ್ದಣ್ಣನನ್ನು ಕಂಡರಾಗುತ್ತಿರಲಿಲ್ಲ. ಸಿದ್ದಣ್ಣನು ಜನಸಾಮಾನ್ಯರ ಮುಖಂಡನಾಗಿರುವುದನ್ನು ಅವರು ಸಹಿಸುತ್ತಿರಲಿಲ್ಲ.

ತಿರುಮಲಭಟ್ಟರು ಸತ್ತನಂತರ, ಸುಗ್ಗಿಯಲ್ಲಿ ನಾಗೇಂದ್ರನು ಗೇಣಿಯನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಸಿದ್ದಣ್ಣನ ಮನೆಗೆ ಬಂದನು. ಅವನ ಜೊತೆಯಲ್ಲಿ ಐದಾರು ಜನ ಆಳುಗಳೂ ಕೂಡ ಬಂದಿದ್ದರು. ಮಾಮೂಲಿನಂತೆ ತಂದೆಯ ಕಾಲದ ಕೊಳಗ, ತಕ್ಕಡಿ ಮತ್ತು ಗುಂಡುಗಳನ್ನು ಅವನು ತೆಗೆದುಕೊಂಡು ಬಂದಿದ್ದನು. ಸಿದ್ದಣ್ಣನು ಮಾಮೂಲು ಪ್ರಕಾರ ನಾಲ್ಕು ಮಣ ಅಡಕೆಯನ್ನೂ, ಹತ್ತು ಖಂಡುಗ ಭತ್ತವನ್ನೂ

ಕೊಡಲು ಸಿದ್ಧತೆಗಳನ್ನು ಮಾಡಿದನು. ಗೇಣಿಯನ್ನು ಅಳೆಯುವ ಕಾಲದಲ್ಲಿ ನಾಗೇಂದ್ರನು, ಇತರ ಒಕ್ಕಲುಗಳು ಕೊಟ್ಟಂತೆ ನೂರು ಮರ ಅಡಕೆಯ ತೋಟಕ್ಕೆ ಮೂರು ಮಣ ಅಡಕೆಯನ್ನೂ, ಒಂದು ಖಂಡುಗ ಭತ್ತವನ್ನೂ ಗೇಣಿಗಾಗಿ ಕೊಡಬೇಕೆಂದು ಹೇಳಿದನು. ಸಿದ್ದಣ್ಣನಿಗೆ ಆಶ್ಚರ್ಯವಾಯಿತು. ನಾಗೇಂದ್ರನನ್ನು ಕುರಿತು "ಏನ್ ಸ್ವಾಮಿ, ನಮ್ಮಪ್ಪನ ಕಾಲ್ದಿಂದ, ನಿಮ್ಮಪ್ಪನ ಕಾಲ್ದಿಂದ ನಡ್ಕುಬಂದ ಗೇಣೀನ ಹೆಚ್ಮಾಡ್ಬೇಕು ಅಂತ ಹೇಳ್ತೀರಿ, ನೀವು ಸಣ್ಣೋರು ನಿಮಗೆ ಗೊತ್ತಿಲ್ಲ. ನಾವು ಮಾಡೂ ಭೂಮಿ ಮದ್ಲು ಹಾಳ್ ಬಿದ್ದಿತ್ತು. ಜಟಗನ ಕಾಟ್ಗೆ ಹೆದ್ರಿ ಸಾಗ್ಮಾಡೂಕೆ ಯಾರಾ ಬತ್ತಾ ಇರ್ಲಿಲ್ಲಾ. ಅಪ್ ಧೈರ್ಯ ಮಾಡಿ ತಗುಂಡ. ನಾ ಕಷ್ಟಪಟ್ಟು ರಟ್ಟೆ ಮುರ್ಕುಂಡು ಅರೂಪಾದ ಭೂಮೀನ ಈಗುಂದು ರೂಪಿಗೆ ತಂದೀನಿ. ಈಗ ಜಾಸ್ತಿ ಗೇಣಿ ಕೊಡು ಅಂದ್ರೆ ಯಾವ್ ನ್ಯಾಯ? ನೀವೇ ಹೇಳಿ" ಎಂದನು.

"ಎಲ್ಲಾ ವಕ್ಲು ಕೊಟ್ಟಾಗೆ ಕೋಗು ರಿವಾಜು ಪ್ರಕಾರ ಗೇಣಿ ಕೊಡೂಕೆ ನಿಂಗಿಷ್ಟ ಇದ್ರೆ ಜಮೀನ್ ಇಟ್ಗ. ಇಷ್ಟ ಇಲ್ದೆ ಇದ್ರೆ ಜಮೀನ್ ಬಿಡು. ನಿಮ್ ದಾಯಾದಿ ನೀಲೇಗೌಡ, ಹೆಚ್ಗೆ ಗೇಣೀಗೆ ಜಮೀನ್ ಕೊಡಿ, ಅಂತಾಕೇಳ್ತಾ ಇದ್ದಾನೆ. ಇನ್ ನಿನ್ನಿಷ್ಟ" ಎಂದು ನಾಗೇಂದ್ರ ಹೇಳಿದನು.

ನೀಲೇಗೌಡನ ವಿಚಾರವನ್ನು ಹೇಳಿದೊಡನೆ ಸಿದ್ದಣ್ಣನಿಗೆ ತಾನಿದ್ದ ಸನ್ನಿವೇಶದ ಅರಿವಾಯಿತು. ಕುಟುಂಬದ ಆಸ್ತಿಯನ್ನೆಲ್ಲಾ ಅಪಹರಿಸಿಕೊಂಡು ಅನುಭವಿಸುತ್ತಾ ಇದ್ದರೂ ತೃಪ್ತನಾಗದೇ ನೀಲೇಗೌಡನು ದಾಯಾದಿ ಮಾತ್ಸರ್ಯವನ್ನು ಒಳಗಿಂದೊಳಗೆ ಸಾಧಿಸುವ ಪ್ರಯತ್ನದಲ್ಲಿದ್ದಾನೆಂದು ಸಿದ್ದಣ್ಣನಿಗೆ ಅರಿವಾಯಿತು. ನಾಗೇಂದ್ರನೊಡನೆ ಧೈರ್ಯವನ್ನು ಪ್ರದರ್ಶಿಸುವುದಕ್ಕಿಂತ ಬುದ್ಧಿವಂತಿಕೆಯಿಂದ ವರ್ತಿಸುವುದು ಲೇಸೆಂದು ಭಾವಿಸಿದನು. ನಾಗೇಂದ್ರನೊಡದೆ ವಿಧವಿಧವಾಗಿ ತನ್ನ ಕಷ್ಟಗಳನ್ನು ವರ್ಣಿಸಿ, ಅವನನ್ನು ಹೊಗಳಿ, ಅವನ ಮನಸ್ಸನ್ನು ತನ್ನ ಕಡೆಗೆ ಒಲಿಸಿಕೊಂಡು, ಮುಂದೆ ಎಂಟು ಮಣ ಅಡಕೆಯನ್ನೂ ಇಪ್ಪತ್ತು ಖಂಡಗ ಭತ್ತವನ್ನೂ ಗೇಣಿಯ ಬಗ್ಗೆ ಕೊಡುವುದಾಗಿ ಅರಿಕೆ ಮಾಡಿಕೊಂಡನು. ನಾಗೇಂದ್ರನಿಗೆ ಮನಸ್ಸು ಕರಗಿತು. ಒಂದಕ್ಕೆ ಎರಡರಷ್ಟು ಗೇಣಿಯನ್ನು ಕೊಡಲು ಸಿದ್ದಣ್ಣನು ಒಪ್ಪಿದ್ದು ಅವನಿಗೆ ತೃಪ್ತಿಯಾಯಿತು. ಸಿದ್ದಣ್ಣನ ಸೂಚನೆಯನ್ನು ಅವನು ಒಪ್ಪಿಕೊಂಡನು. ಸಿದ್ದಣ್ಣನು ಆ ಸಮಯವನ್ನುಪಯೋಗಿಸಿಕೊಂಡು, ನಾಗೇಂದ್ರನಿಂದ ಒಂದು ಅವಧಿಗೇಣಿ ಕರಾರನ್ನು ಬರೆಯಿಸಿಕೊಂಡನು, ನೀಲೇಗೌಡನಿಗೂ, ಸಣ್ಣೇಗೌಡನಿಗೂ ಅವಧಿಗೇಣಿ ಕರಾರಿನ ವಿಚಾರ ಗೊತ್ತಾದೊಡನೆ, ಅವರಿಬ್ಬರೂ ನಾಗೇಂದ್ರನನ್ನು ಶಪಿಸಿದರು. ನೀಲೇಗೌಡನು ನಾಗೇಂದ್ರನ ಸಹಾಯದಿಂದ ಸಿದ್ದಣ್ಣನನ್ನು ಬೀದಿಯ ಭಿಕಾರಿಯಾಗಿ ಮಾಡಬೇಕೆಂದು ಸಂಚು ಮಾಡಿದ್ದನು. ನಾಗೇಂದ್ರನು ತನ್ನ ಹಂಚಿಕೆಯನ್ನು ಬುಡಮೇಲು ಮಾಡಿಬಿಟ್ಟನೆಂದು ನೀಲೇಗೌಡನು ಸಂಕಟಪಟ್ಟನು.

ವೆಸ್ಲಿಯನ್ ಮಿಷನ್ನಿನವರ ಕೃಪಾಶ್ರಯದಲ್ಲಿ ಗಿಡ್ಡಣ್ಣನು ಮೈಸೂರಿನಲ್ಲಿ ತನ್ನ ವ್ಯಾಸಂಗವನ್ನು ಮುಂದುವರಿಸಿದ್ದನು. ಮೈಸೂರಿಗೆ ಹೋದಮೇಲೆ ಅವನು ತನ್ನ

ಅಧ್ಯಾಪಕರ ಸಲಹೆ ಮೇರೆಗೆ, ತನ್ನ ಹೆಸರನ್ನು ಮೋಹನ ಎಂದು ಮಾರ್ಪಾಡು ಮಾಡಿಕೊಂಡಿದ್ದನು. ಮೋಹನನು ಕೆಲವು ವರ್ಷಗಳಲ್ಲಿ ಹೈಸ್ಕೂಲ್ ವ್ಯಾಸಂಗವನ್ನು ಮುಗಿಸಿ ಕಾಲೇಜನ್ನು ಸೇರಿದ್ದನು. ಅವನು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಗಾಂಧೀಜಿಯವರು ಸ್ವರಾಜ್ಯಕ್ಕೋಸ್ಕರ ಹಿಂದೂಸ್ಥಾನದಲ್ಲಿ ಒಂದು ಚಳವಳಿಯನ್ನು ಆರಂಭಿಸಿದ್ದರು. ಮೋಹನನು ಪತ್ರಿಕೆಗಳಲ್ಲಿ ಬರುತ್ತಿದ್ದ ಗಾಂಧೀಜಿಯವರ ಲೇಖನಗಳನ್ನೂ ಮತ್ತು ಅವರ ಭಾಷಣಗಳನ್ನೂ ತಪ್ಪದೇ ಓದುತ್ತಿದ್ದನು. ಗಾಂಧೀಜಿಯವರು ಜನತೆಯ ಮುಂದಿಟ್ಟ ಆದರ್ಶವು ಅವನಿಗೆ ಸಂಪೂರ್ಣವಾಗಿ ಒಪ್ಪಿಗೆಯಾಗಿತ್ತು. ಕಾಲೇಜನ್ನು ಬಿಟ್ಟನಂತರ ತಾನೂ ಸಹ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ದೇಶಸೇವೆ ಮಾಡಬೇಕೆಂದು ಅವನು ಮನಸ್ಸು ಹಾತೊರೆಯುತ್ತಿತ್ತು. ಆದರೆ ಅವನ ತಂದೆಯ ಮನಸ್ಸು ಬೇರೊಂದು ಮಾರ್ಗದಲ್ಲಿ ಹರಿದಿತ್ತು. ಸಿದ್ದಣ್ಣನು ತನ್ನ ಮಗನನ್ನು ವಕೀಲನನ್ನಾಗಿ ಅಥವಾ ಸರ್ಕಾರಿ ಅಧಿಕಾರಿಯನ್ನಾಗಿ ಮಾಡಬೇಕೆಂಬ ಆಶೆಯುಳ್ಳವನಾಗಿದ್ದನು. ಮಗನು ನ್ಯಾಯವಾದಿಯಾದರೆ ತನ್ನ ದಾಯಾದಿಗಳ ಮೇಲೆ ಕುಟುಂಬದ ಆಸ್ತಿಯಲ್ಲಿ ತನಗಿದ್ದ ಪಾಲನ್ನು ಪಡೆಯುವ ಸಲುವಾಗಿ ವ್ಯವಹಾರ ಹೂಡಬಹುದೆಂದು ಅಂದಾಜು ಮಾಡಿದ್ದನು. ಪಾಲಿನ ವ್ಯವಹಾರಕ್ಕೆ ವಾಯಿದೆ ಗತಿಸಿ ಬಹಳ ಕಾಲವಾಗಿತ್ತೆಂಬುದು ಮುಗ್ಧನಾದ ಅವನಿಗೆ ಗೊತ್ತಿರಲಿಲ್ಲ. ತನ್ನ ಮಗನು ಅಧಿಕಾರಿಯಾಗಿ ಪವಿತ್ರಪುರ ತಾಲ್ಲೂಕಿಗೆ ಬಂದರೆ ನೀಲೇಗೌಡ, ಸಣ್ಣೇಗೌಡ ಮುಂತಾದವರ ಉಪಟಳವನ್ನು ತಡೆಗಟ್ಟಬಹುದೆಂದು ಮನಸ್ಸಿನಲ್ಲೇ ಗುಣಾಕಾರ ಹಾಕುತ್ತಿದ್ದನು ಪಾಪ! ಅವನು ತನ್ನ ಮಗನ ಮನಸ್ಸನ್ನು ಅರಿತುಕೊಂಡಿರಲಿಲ್ಲ. ಮೋಹನನು ಮುಂದಿನ ಹೋರಾಟಕ್ಕಾಗಿ ವ್ಯಾಸಂಗ ಮಾಡುತ್ತಿರುವಾಗಲೇ ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದನು. ಹೈಸ್ಕೂಲಿನಲ್ಲಿ ಓದುತ್ತಿರುವಾಗಲೇ ಭಗವದ್ಗೀತೆ, ಬೈಬಲ್, ಕುರಾನ್ ಮುಂತಾದ ಧರ್ಮಗ್ರಂಥಗಳನ್ನೂ, ರಾಮಾಯಣ, ಮಹಾಭಾರತ ಮುಂತಾದ ಮಹಾಕಾವ್ಯಗಳನ್ನೂ ಓದಿದ್ದನು. ಕಾಲೇಜನ್ನು ಸೇರಿದ ನಂತರ ಜಗತ್ತಿನ ಇತಿಹಾಸವನ್ನೂ ಆಂಗ್ಲ ಸಾಹಿತ್ಯವನ್ನೂ ಅಚ್ಚುಕಟ್ಟಾಗಿ ಅಧ್ಯಯನ ಮಾಡಿದ್ದನು. ಅನೇಕ ಮಹಾಪುರುಷರ ಮತ್ತು ಮಹಾಕವಿಗಳ ಪರಿಚಯವನ್ನು ಮಾಡಿಕೊಂಡಿದ್ದನು. ಜೊತೆಗೆ ಆಧುನಿಕ ವಿಜ್ಞಾನವನ್ನು ಸ್ವಲ್ಪ ಮಟ್ಟಿಗೆ ತಿಳಿದುಕೊಂಡಿದ್ದನು. ಮೈಸೂರಿಗೆ ಬಂದನಂತರವೂ ಕೂಡ ಪ್ರತಿಯೊಂದು ತರಗತಿಯಲ್ಲೂ ಅವನು ಉತ್ತಮಶ್ರೇಣಿಯಲ್ಲಿ ಉತ್ತೀರ್ಣನಾಗಿ, ಪ್ರತಿಭಾವಂತ ವಿದ್ಯಾರ್ಥಿಯೆಂದು ಹೆಸರನ್ನು ಗಳಿಸಿದ್ದನು. ಮೋಹನನು ಜ್ಞಾನಸಂಪಾದನೆಯ ಜೊತೆಗೆ ಜನಗಳ ಸಂಪಾದನೆಯನ್ನೂ ಮಾಡಿದ್ದನು. ಬಡವರ ಮಧ್ಯೆ ಬಡತನದಲ್ಲಿ ಹುಟ್ಟಿ ಬೆಳೆದಿದ್ದ ಅವನಿಗೆ ಸ್ವಾಭಾವಿಕವಾಗಿ ಬಡಬಗ್ಗರ ಮೇಲೆ ಪ್ರೇಮವಿತ್ತು. ಅವರ ಕಷ್ಟ ಅವನಿಗರ್ಥವಾಗುತ್ತಿತ್ತು. ಕಾಲೇಜನ್ನು ಸೇರಿದನಂತರ ಕಾಲೇಜಿನ ವಿದ್ಯಾರ್ಥಿಸಂಘದ ಅಧ್ಯಕ್ಷನಾಗಿ ವಿದ್ಯಾರ್ಥಿ ವೃಂದದ ನಾಯಕನಾಗಿದ್ದನು. ಬೇಸಿಗೆಯ ರಜಕ್ಕೆ ಊರಿಗೆ ಬಂದಾಗ ತನ್ನ ವಯಸ್ಸಿನ ಯುವಕರನ್ನು ಸೇರಿಸಿ ಅವರಿಗೆ ಕಾಂಗ್ರೆಸ್ಸಿನ ಉದ್ದೇಶಗಳನ್ನೂ ಗಾಂಧೀಜಿಯವರ ಉಪದೇಶಗಳನ್ನೂ

ವಿವರಿಸುತ್ತಿದ್ದನು. ತನ್ನ ತಂದೆ ತಾಯಿಗಳಿಗೂ ಕೂಡ ಆಗಾಗ ಗಾಂಧೀಜಿಯವರ ಅಹಿಂಸಾತ್ಮಕ ಚಳವಳಿಯ ವಿಚಾರವನ್ನು ತಿಳಿಸುತ್ತಿದ್ದನು. ಆದರೆ ಆ ವಿಚಾರಗಳು ತಂದೆ ತಾಯಿಗಳ ತಲೆಗೆ ಅಂಟುತ್ತಿರಲಿಲ್ಲ. ಪವಿತ್ರಪುರದ ತಾಲ್ಲೂಕಿನ ಯುವಕರನೇಕರು ಮೋಹನನ ಹಿಂಬಾಲಕರಾಗಿದ್ದರು. ಮೋಹನನು ಕಾಲೇಜಿನಲ್ಲಿ ಮೊದಲನೆಯ ತರಗತಿಯಲ್ಲಿ ಓದುತ್ತಿದ್ದಾಗ ಅವನ ಸ್ನೇಹಿತರಾದ ಹರಿಜನ ಕರಿಯಪ್ಪ ಮತ್ತು ಮೂರ್ತಿ, ಇವರುಗಳ ಸಹಾಯದಿಂದ ಪವಿತ್ರಪುರದಲ್ಲಿ ಹೊಸದಾಗಿ ಒಂದು ಕಾಂಗ್ರೆಸ್ ಸಮಿತಿಯನ್ನು ಸ್ಥಾಪಿಸಿದ್ದನು. ಹರಿಜನ ಕರಿಯಪ್ಪನು ಪಂಜರವಳ್ಳಿಯ ಪ್ರಾಥಮಿಕ ಶಾಲೆಯಲ್ಲಿ ಮೋಹನನ ಜೊತೆಯಲ್ಲಿ ವ್ಯಾಸಂಗಮಾಡಿದ್ದನು. ಅನಂತರ ಪವಿತ್ರಪುರದ ಹರಿಜನ ವಿದ್ಯಾರ್ಥಿ ನಿಲಯವನ್ನು ಸೇರಿ, ಪ್ರೌಢಶಾಲೆಯಲ್ಲಿ ವ್ಯಾಸಂಗಮಾಡಿ, ಪ್ರೌಢಶಾಲೆಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದನು. ಅವನು ಮನಸ್ಸು ಮಾಡಿದ್ದರೆ ಸರ್ಕಾರಿ ನೌಕರಿಯನ್ನು ಸುಲಭವಾಗಿ ಸೇರಬಹುದಾಗಿತ್ತು. ಆದರೆ ಅವನು ಗಾಂಧೀಜಿಯವರ ಕರೆಗೆ ಮನಸೋತು ಕಾರ್ಯಕಲಾಪಗಳಲ್ಲಿ ಮಗ್ನನಾಗಿ ದೇಶಸೇವಕನಾಗಿ ದುಡಿಯುತ್ತಿದ್ದನು. ಅವನೇ ಪವಿತ್ರಪುರದ ಪ್ರಥಮ ಕಾಂಗ್ರೆಸ್ ಸಮಿತಿಯ ಪ್ರಥಮ ಕಾರ್ಯದರ್ಶಿಯಾದನು. ಮೂರ್ತಿಯು ಪವಿತ್ರಪುರಕ್ಕೆ ಸೇರಿದವನಾಗಿ, ಮೋಹನನ ಸಹಪಾಠಿಯಾಗಿ ಮೈಸೂರಿನಲ್ಲಿ ವ್ಯಾಸಂಗ ಮಾಡುತ್ತಿದ್ದನು.

## ೭. ಅಸಹಕಾರ ಚಳವಳಿ

ಅಂದು ಅಸಹಕಾರದ ಅಸಾಧಾರಣ ಕಾಲವಾಗಿತ್ತು. ಮಹಾತ್ಮ ಗಾಂಧೀಜಿಯವರು ಜಗತ್ತಿನ ಇತಿಹಾಸದಲ್ಲಿ ಎಲ್ಲಿಯೂ ಕಾಣದ, ಎಂದೂ ಕೇಳದ ಹೊಸದೊಂದು ಕ್ರಾಂತಿಯನ್ನು ಪ್ರಾರಂಭಿಸಿದ್ದರು. ಸತ್ಯ ಅಹಿಂಸೆಗಳೇ ಅವರ ಕ್ರಾಂತಿಗೆ ಅಸ್ತ್ರಗಳಾಗಿದ್ದವು. ಮಹಾತ್ಮರು ಅಜ್ಞಾನದ ಅಂಧಕಾರದಲ್ಲಿ ಗುಲಾಮಗಿರಿಯ ಜಡ ನಿದ್ರೆಯಲ್ಲಿ ಮಲಗಿದ್ದ ಈ ದೇಶದ ಜನತೆಯನ್ನು ಚೇತನಗೊಳಿಸಿ, ಅವರಲ್ಲಿ ಹೊಸದೊಂದು ಸ್ಫೂರ್ತಿಯನ್ನು ತುಂಬಿದ್ದರು. ಮಂಕು ಬೂದಿಯನ್ನೆರಚಿದ ಮಾಟಗಾರರನಿಗೆ ಶರಣು ಹೊಂದಿದವರಂತೆ, ಈ ದೇಶದ ಜನರು ಪವಾಡ ಪುರುಷರಾದ ಮಹಾತ್ಮರನ್ನು ಹಿಂಬಾಲಿಸಿದ್ದರು. ದೇಶಾಭಿಮಾನ, ಸತ್ಯ, ಶಾಂತಿ, ಶಿಸ್ತು, ಅಹಿಂಸೆ ಮುಂತಾದ ಭಾವನೆಗಳು ದೇಶದ ಆದ್ಯಂತ ಪ್ರಚಲಿತವಾಗಿದ್ದವು. ಗಾಂಧೀಜಿಯವರ ಸಂದೇಶ ಮಹಾಜನರ ಮನಸ್ಸನ್ನು ಆಕ್ರಮಿಸಿ ಅವರ ಹೃದಯವನ್ನು ಸೂರೆಗೊಂಡಿತ್ತು. ಲಕ್ಷಾಂತರ ಮಂದಿ ಜನರು ಕಾಂಗ್ರೆಸ್ಸಿಗೆ ಸೇರಿದರು. ಅಂದು ಕಾಂಗ್ರೆಸ್ಸಿಗೆ ಸೇರುವುದು ಇಂದಿನಂತೆ ಸುಲಭವಾಗಿರಲಿಲ್ಲ. ಅಂದು ಕಾಂಗ್ರೆಸ್ಸಿಗೆ ಸೇರಿದವರು ನಾನಾ ವಿಧವಾದ ಕಷ್ಟವನ್ನೆದುರಿಸಬೇಕಾಗಿತ್ತು. ಸತ್ಯಾಗ್ರಹಿಯಾದವನು ಸತ್ಯದ ಹೊಳಪಾಗಿ, ಕ್ರಾಂತಿಯ ಕಿಡಿಯಾಗಿ ವರ್ತಿಸಬೇಕಾಗಿತ್ತು.

ಕಾಂಗ್ರೆಸ್ಸಿನ ಶಕ್ತಿ ಹೆಚ್ಚಿದ ಹಾಗೆಲ್ಲಾ ಸರ್ಕಾರದ ದಬ್ಬಾಳಿಕೆಯೂ ಹೆಚ್ಚಾಗುತ್ತಿತ್ತು. ಕಾಂಗ್ರೆಸ್ಸಿನವರು ಅಲ್ಲಲ್ಲಿ ಸ್ವಯಂಸೇವಕರ ತಂಡಗಳನ್ನು ನಿರ್ಮಿಸುತ್ತಿದ್ದರೆ, ಸರ್ಕಾರದವರು ಕಾಂಗ್ರೆಸ್ಸಿನ ಪ್ರಭಾವವನ್ನು ತಡೆಗಟ್ಟುವುದಕ್ಕಾಗಿ ತಮಗೆ ಬೇಕಾದ ಭಕ್ತರ ತಂಡಗಳನ್ನು ನಿರ್ಮಿಸುತ್ತಿದ್ದರು. ಈ ಸರ್ಕಾರಿ ಭಕ್ತರಲ್ಲಿ ಕೆಲವರು ಗಾಂಧಿ ಒಬ್ಬ ದೊಡ್ಡ ಹುಚ್ಚನೆಂದೂ, ಅವನ ಅನುಯಾಯಿಗಳು ಸಣ್ಣ ಹುಚ್ಚರೆಂದೂ ಹೇಳುತ್ತಿದ್ದರು. ಪವಿತ್ರಪುರ ತಾಲ್ಲೂಕಿನಲ್ಲೂ ಸರ್ಕಾರಿ ಭಕ್ತರ ತಂಡವೊಂದಿತ್ತು. ಆ ತಂಡಕ್ಕೆ ಪ್ರಸಿದ್ಧ ವ್ಯಾಪಾರಿಯೂ ಕಂಟ್ರಾಕ್ಟರೂ ಆದ ರಂಗನಾಥನೆಂಬುವವನು ಮುಖಂಡನಾಗಿದ್ದನು. ಆ ತಂಡದಲ್ಲಿ ಶೀತೂರು ಕಲ್ಲಪ್ಪ, ಸೇಂದಿ ಕಂಟ್ರಾಕ್ಟರ್ ಸಂಕ ಪೂಜಾರಿ, ಪಂಜರವಳ್ಳಿಯ ನಾಗೇಂದ್ರ, ನೀಲೇಗೌಡ, ಸಣ್ಣೇಗೌಡ ಮುಂತಾದವರಿದ್ದರು. ಆ ತಂಡಕ್ಕೆ ಸೇರಿದ್ದವರು ಆಂಗ್ಲೇಯರ ಸಾಕುಮಕ್ಕಳಂತೆ ವರ್ತಿಸುತ್ತಿದ್ದರು. ಕಾಂಗ್ರೆಸ್ಸಿನವರ ಚಲನವಲನಗಳನ್ನು ಸರ್ಕಾರಿ ಅಧಿಕಾರಿಗಳಿಗೆ ವರದಿ ಮಾಡುವುದೂ, ಕಾಂಗ್ರೆಸ್ಸಿನ ವಿರುದ್ಧ ಅಪಪ್ರಚಾರ ನಡೆಸುವುದೂ ಆ ತಂಡದ ಮುಖ್ಯ ಕಸಬಾಗಿತ್ತು. ಸರ್ಕಾರಕ್ಕೆ ನೆರವು ನೀಡುವ ನೆಪದಲ್ಲಿ ಆ ತಂಡದವರು ಸರ್ಕಾರದಿಂದ ಹಲವು ರೀತಿಯಲ್ಲಿ ಸಹಾಯ ಸವಲತ್ತುಗಳನ್ನು ಪಡೆಯುತ್ತಿದ್ದರು. ಆ ತಂಡದ ಪ್ರಮುಖರು ಪವಿತ್ರಪುರದ ತಾಲ್ಲೂಕಿನ ಮುಂದಿನ ರಾಜಕಾರಣದಲ್ಲಿ ಪ್ರಮುಖ ಪಾತ್ರವನ್ನು

ವಹಿಸುವವರಾಗಿರುವುದರಿಂದ ಅವರಲ್ಲಿ ಕೆಲವರ ಪರಿಚಯವನ್ನು ಓದುಗರಿಗೆ ಮಾಡಿಕೊಡುವುದಾಗಿ ಅತ್ಯವಶ್ಯಕ. ರಂಗನಾಥನು ಎಂದೂ ಕರಗದೆ ಇರುವ ಆಸ್ತಿಯ ಯಜಮಾನನಾಗಿದ್ದನು. ಆತನ ತಂದೆ ಮಂಜಯ್ಯಗೌಡರೆಂಬುವರು ವ್ಯಾಪಾರದ ನೆಪದಲ್ಲಿ ಇಡಿಯ ತಾಲ್ಲೂಕನ್ನು ಕೊಳ್ಳೆ ಹೊಡೆದಿದ್ದರು. ತಂದೆ ಸತ್ತನಂತರ ರಂಗನಾಥನು ಚಿಕ್ಕವಯಸ್ಸಿನಲ್ಲೇ ಮನೆಯ ಯಜಮಾನನಾಗಿದ್ದನು. ಮೋಸ ಶೋಷಣೆಗಳಿಂದ ಶ್ರೀಮಂತರಾದವರ ಮನೆತನದಲ್ಲಿ ಹುಟ್ಟಿದವರಿಗೆ ರಕ್ತಗತವಾಗಿ ಬರತಕ್ಕ ದುರ್ಗುಣಗಳೆಲ್ಲವೂ ಅವನಲ್ಲಿದ್ದವು. ತಂದೆ ಮಂಜಯ್ಯಗೌಡರು ಮಿತವಾಗಿ ಬಗನೆಕಳ್ಳನ್ನು ಕುಡಿಯುತ್ತಿದ್ದರೆ, ಮಗ ರಂಗನಾಥನು ಮಿತಿಮೀರಿ ಬ್ರಾಂದಿ ವ್ಹಿಸ್ಕಿಗಳನ್ನು ಕುಡಿಯುತ್ತಿದ್ದನು. ಅವನು ಪವಿತ್ರಪುರದ ಪ್ರೌಢಶಾಲೆಯಲ್ಲಿ ವ್ಯಾಸಂಗಮಾಡಿ ಅಂತಿಮ ಪರೀಕ್ಷೆಯಲ್ಲಿ ಉತ್ತೀರ್ಣನಾಗದೆ ವ್ಯಾಸಂಗವನ್ನು ಬಿಟ್ಟಿದ್ದನು. ಅವನು ಕೃತ್ರಿಮಿ ಮತ್ತು ಮೋಸಗಾರ. ಸಭ್ಯತೆಯ ಪೋಷಾಕಿನಲ್ಲಿ ಎಂತಹ ಹೀನಕೃತ್ಯವನ್ನಾದರೂ ಮಾಡಲು ಹೇಸುವವನಲ್ಲ. ಕಲ್ಲಪ್ಪನು ಪವಿತ್ರಪುರದ ತಾಲ್ಲೂಕಿಗೆ ಸೇರಿದವನಾಗಿ ಶೀತೂರೆಂಬ ಹಳ್ಳಿಯಲ್ಲಿ ಜನಿಸಿದ್ದವನು. ಅವನು ಲೋಯರ್ ಸೆಕೆಂಡರಿಯಲ್ಲಿ ಅನುತ್ತೀರ್ಣನಾಗಿದ್ದರೂ, ಕಿತಾಪತಿಯಲ್ಲಿ ಚೆನ್ನಾಗಿ ಉತ್ತೀರ್ಣನಾಗಿದ್ದನು. ಸರ್ಕಾರದವರು ಈಚೆಗೆ ಅವನನ್ನು ಕೆಲವು ಸಮಿತಿಗಳಿಗೆ ನಾಮಕರಣ ಮಾಡಿದ್ದರು. ನಯ, ವಿನಯ, ಹುಸಿನಗೆ ಇವುಗಳಿಂದ ಅವನು ಕೆಲವು ಅಧಿಕಾರಿಗಳನ್ನು ತನ್ನ ವಶಪಡಿಸಿಕೊಂಡಿದ್ದನು. ನಾಗೇಂದ್ರನು ತಿರುಮಲಭಟ್ಟರ ಜೇಷ್ಠ ಪುತ್ರನೆಂಬುದನ್ನು ಹಿಂದೆಯೇ ತಿಳಿಸಲಾಗಿದೆ. ಅವನು ಆಗರ್ಭ ಶ್ರೀಮಂತರ ಮಗನಾಗಿ ಆಗತಾನೆ ರಾಜಕಾರಣದಲ್ಲಿ ಕಣ್ಣುಬಿಟ್ಟಿದ್ದನು. ಸಂಕಪೂಜಾರಿಯು ದಕ್ಷಿಣ ಕನ್ನಡ ಜಿಲ್ಲೆಯಿಂದ ಬಗನೆ ಕಟ್ಟುವುದಕ್ಕಾಗಿ ಪವಿತ್ರಪುರಕ್ಕೆ ಬಂದವನು. ರಂಗನಾಥನ ಸಹಾಯದಿಂದ ಈಚೆಗೆ ಸೇಂದಿ ಕಂಟ್ರಾಕ್ಟರಾಗಿದ್ದನು.

ಮೋಹನನು ಕಾಲೇಜಿನ ಅಂತಿಮ ತರಗತಿಯಲ್ಲಿ ಓದುತ್ತಿದ್ದನು. ಅವನ ಪ್ರತಿಭೆಯನ್ನೂ ಪ್ರಗತಿಯನ್ನೂ ಕಂಡು ನೀಲೇಗೌಡನೂ, ನಾಗೇಂದ್ರನೂ, ಸಣ್ಣೇಗೌಡರೂ ಕರುಬುತ್ತಿದ್ದರು. ಬಡರೈತನ ಮಗನೊಬ್ಬನು- ತಮಗಿಂತ ಹೆಚ್ಚು ವಿದ್ಯಾವಂತನಾಗುವುದು ಅವರಿಗೆ ಎಳ್ಳಷ್ಟೂ ಸಮಾಧಾನಕರವಾಗಿರಲಿಲ್ಲ. ಈ ತ್ರಿಮೂರ್ತಿಗಳು ಮೋಹನನ ವಿರುದ್ಧ ಹಲವು ದೂರುಗಳನ್ನು ಸ್ಥಳೀಯ ಪೋಲಿಸರಿಗೆ ಕೊಟ್ಟಿದ್ದರು. ಅವನು ಸಮಾಜವನ್ನು ಬುಡಮೇಲು ಮಾಡುವ ಕಾರ್ಯದಲ್ಲಿ ತೊಡಗಿದ್ದಾನೆಂದೂ, ವಿದ್ಯಾರ್ಥಿಸಮೂಹದಲ್ಲಿ ಅವನು ಕಾಂಗ್ರೆಸ್ ಸೋಂಕನ್ನೂ ತಗಲಿಸುತ್ತಾನೆಂದೂ, ಸರ್ಕಾರಕ್ಕೆ ರಂಗನಾಥನ ಮುಖಾಂತರ ವರದಿಮಾಡಿದ್ದರು. ಮೋಹನನು ಪರೀಕ್ಷೆಯಲ್ಲಿ ಭಾಗವಹಿಸದಂತೆ, ಪರೀಕ್ಷೆ ಪ್ರಾರಂಭವಾಗುವುದಕ್ಕಿಂತ ಮುಂಚೆಯೇ ಅವನನ್ನು ದಸ್ತಗಿರಿ ಮಾಡಿಸಬೇಕೆಂದು, ಮೂವರು ಸೇರಿ ಸಂಚು ನಡೆಯಿಸಿದ್ದರು. ಆದರೆ ಆ ಸಂಚು ಫಲಕಾರಿಯಾಗಲಿಲ್ಲ. ಮೋಹನನು ಪರೀಕ್ಷೆಯನ್ನು ಮುಗಿಸಿಕೊಂಡು ಬೇಸಿಗೆಯ ರಜೆದಲ್ಲಿ ಪಂಜರವಳ್ಳಿಗೆ ಬಂದನು. ತಮ್ಮ ಮಗನು ಪದವೀಧರನಾಗುತ್ತಾನೆಂದು

ಚೆನ್ನಮ್ಮನೂ, ಸಿದ್ದಣ್ಣನೂ ಹಿಗ್ಗಿದರು. ಒಡೆಯನಾಗಿದ್ದ ತಿರುಮಲಭಟ್ಟರ ಮಗ ನಾಗೇಂದ್ರನಿಂಗಿತಲೂ, ಸಾಹುಕಾರ್ ಬೆಳ್ಳೇಗೌಡರ ಮಗ ಸಣ್ಣೇಗೌಡನಿಂತಲೂ, ದಾಯಾದಿ ನೀಲೇಗೌಡರಿಗಿಂತಲೂ ಹೆಚ್ಚು ವಿದ್ಯಾವಂತನಾದ ಮಗನನ್ನು ಪಡೆದ ತಾವೇ ಧನ್ಯರೆಂದು ಅವರಿಬ್ಬರೂ ಹರ್ಷಗೊಂಡಿದ್ದರು. ಆದರೆ ತಮ್ಮ ಮಗನು ಕಾಂಗ್ರೆಸ್ಸಿನವರ ಸಹವಾಸದಲ್ಲಿದ್ದುದು ಅವರಿಗೆ ಹಿಡಿಸಲಿಲ್ಲ. ಯಾಕೆಂದರೆ, ತಾಲ್ಲೂಕಿನಲ್ಲಿ ಪ್ರಭಾವಶಾಲಿಗಳೆಂದು ಪರಿಗಣಿಸಲ್ಪಟ್ಟಿದ್ದವರು ಕಾಂಗ್ರೆಸ್ಸನ್ನು ಹಳಿಯುತ್ತಿದ್ದರು. ಕೆಲವರು ಅಧಿಕಾರಿಗಳೂ ಸಹ ಅದೇ ಭಾವನೆಯಿಂದ ಕೂಡಿದ್ದರು. ಒಂದು ದಿನ ಪವಿತ್ರಪುರ ಪೊಲೀಸ್ ಇನ್ಸ್ ಪೆಕ್ಟರು ಪಂಜರವಳ್ಳಿಗೆ ಬಂದಿದ್ದಾಗ ಸಿದ್ದಣ್ಣನನ್ನು ಕರೆಯಿಸಿ "ಏನ್ರೀ ನಿಮ್ಮ ಮಗನಿಗೆ ನೀವು ಬುದ್ಧಿ ಹೇಳ್ತಿರೋ, ನಾವು ಅವನಿಗೆ ಬುದ್ಧಿ ಕಲಿಸಬೇಕೋ" ಎಂದು ಹೇಳಿದ್ದಕ್ಕೆ. ಸಿದ್ದಣ್ಣನು ಬಹಳ ನಮ್ರತೆಯಿಂದ ನಮ್ಹುಡ್ಗ ತಿಳ್ದವನಲ್ಲ. ಇನ್ನೂ ಹುಟ್ಗಾಟ್ಗೆ, ಖಾವಂದ್ರು ಮಾಫ್ ಮಾಡಬೇಕು" ಎಂದು ಹೇಳಿದ್ದನು. ಬೆಳ್ಳೇಗೌಡರು ಒಮ್ಮೆ ಸಿದ್ದಣ್ಣನೊಡನೆ ಮಾತನಾಡುತ್ತಿದ್ದಾಗ, "ನಮ್ಮದಿ ಹಾಳ್ ಕಾಂಗ್ರೇಸು ಇರಲ್ಲಪ್ಪಾ. ನೀ ಒಬ್ಬ ಮಗನ್ನ ಓದಿಸಿ, ಅನ್ನ ದೆಸೇಲಿ ಅದು ನಾಚ್ಗಿ ಮುಳ್ಳು ಹಂಬ್ದಾಗೆ ಹಂಬ್ಯದೆ. ಅವ ಯಾರೋ ಗಾಂಧಿ ಅಂತೆ. ಹೊಲೆ ಹದಿನೆಂಟು ಜಾತಿ ಉಂದ್ಮಾಡೂಕೆ ಹೊಲ್ಟಾನಂತೆ, ಏನ್ಬಂತೋ ಕಾಲ ನಮ್ಮಪ್ಪಾ? ನಮ್ಮಾಳು ಸಿದ್ದಕುರುದೆ ಕರಿಯನೂ ಕಾಂಗ್ರೆಸಂತೆ! ಆ ಮುಂಡೆ ಕುರುದೆ ನಿನ್ಮಗ್ನ ಜೊತೆಗೇ ಇರತಾನೆ. ಜಾತಿಗೀತಿಯಲ್ಲಾ ಬಿಟ್ ಹೊಡ್ದೇನೋ ಸಿದ್ದ" ಎಂದು ಹೇಳಿದ್ದರು. ಸಿದ್ದಣ್ಣನಿಗೆ ಇಂತಹ ಮಾತುಗಳನ್ನು ಕೇಳಿ ಮನೋವ್ಯಥೆ ಯಾಗಿತ್ತು. ಆದ್ದರಿಂದಲೇ ಅವನಿಗೆ ಕಾಂಗ್ರೆಸ್ಸಿನ ಮೇಲೆ ಸಹಾನುಭೂತಿ ಇರಲಿಲ್ಲ.

ಮೋಹನನು ಊರಿಗೆ ಬಂದನಂತರ ಸುಮ್ಮನೆ ಕುಳಿತಿರಲಿಲ್ಲ. ಕಾಂಗ್ರೆಸ್ಸಿನ ಸಂದೇಶವನ್ನು ಊರೂರಿಗೆ ಬೀರುತ್ತಿದ್ದನು. ಪವಿತ್ರಪುರದಲ್ಲಿ ಕರಿಯಪ್ಪನ ನೇತೃತ್ವದಲ್ಲಿ ಒಂದು ಸ್ವಯಂಸೇವಕ ದಳವನ್ನು ನಿರ್ಮಿಸಿದ್ದನು. ಪರೀಕ್ಷೆಯಾದ ತರುವಾಯ ಒಂದು ತಿಂಗಳಲ್ಲಿ, ಪರೀಕ್ಷೆಯ ಫಲಿತಾಂಶ ಹೊರಬಿದ್ದಿತು. ಮೋಹನನು ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾಗಿದ್ದನು. ಪರೀಕ್ಷೆಯ ಫಲಿತಾಂಶವು ತಂದೆತಾಯಿಗಳಿಗೆ ಆನಂದವನ್ನುಂಟು ಮಾಡಿದರೆ, ನೆರೆಹೊರೆಯವರಿಗೆ ಅಸೂಯೆಯನ್ನುಂಟುಮಾಡಿತ್ತು. ಸಿದ್ದಣ್ಣ ಮಗನ ಭವಿಷ್ಯವನ್ನು ಕುರಿತು ವಿಚಾರಮಾಡುತ್ತಿದ್ದನು. ಒಳ್ಳೆಯ ಸರ್ಕಾರಿ ನೌಕರಿಗೆ ಅವನನ್ನು ಸೇರಿಸಬೇಕೆಂದೂ, ಇಲ್ಲವಾದರೆ ಅವನನ್ನು ವಕೀಲನನ್ನಾಗಿ ಮಾಡಬೇಕೆಂದೂ ಅವನು ಮನಸ್ಸು ಮಾಡಿದ್ದನು. ಯಾವ ನಿರ್ಧಾರವನ್ನು ಕೈಗೊಳ್ಳಬೇಕಾದರೂ, ಮುಂಚಿತವಾಗಿ ವೆಸ್ಲಿಯನ್ ಮಿಷನ್ ಸಂಸ್ಥೆಯವರ ಸಲಹೆಯನ್ನು ಪಡೆಯುವುದು ಅವಶ್ಯಕವೆಂದು, ಅವನು ಭಾವಿಸಿದನು. ಆದ್ದರಿಂದ ಮೈಸೂರಿಗೆ ಹೋಗಿ ವಿದ್ಯಾವಂತರಾದ ಆ ಸಂಸ್ಥೆಯವರ ಸಲಹೆ ಪಡೆದು ಬರಬೇಕೆಂದು ಮಗನಿಗೆ ಸೂಚಿಸಿದನು. ಮೋಹನನಿಗೆ ಅದೇ ಬೇಕಾಗಿತ್ತು. ಅವನು ಅದುವರೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕದಿದ್ದರೆ, ಅದಕ್ಕೆ ಕಾರಣ ಅವನಲ್ಲಿದ್ದ ಪದವೀಧರನಾಗಬೇಕೆಂಬ

ಮಹದಾಕಾಂಕ್ಷೆ ಆ ಆಕಾಂಕ್ಷೆಯು ಅವನಲ್ಲಿ ಉಕ್ಕಿ ಹೊರಬಿದ್ದ ತರುವಾಯ ಹೆಚ್ಚು ಕಾಲ ಅದನ್ನು ತಡೆಹಿಡಿಯಲು ಅವನಿಗೆ ಸಾಧ್ಯವಾಗಲಿಲ್ಲ. ಮೈಸೂರಿನಲ್ಲಿ ಆಗ ಸತ್ಯಾಗ್ರಹ ಬಹಳ ಬಿರುಸಿನಿಂದ ನಡೆಯುತ್ತಿತ್ತು. ಸತ್ಯಾಗ್ರಹದಲ್ಲಿ ಭಾಗವಹಿಸಲು ಅವನು ತವಕಪಡುತ್ತಿದ್ದನು. ಆದ್ದರಿಂದಲೇ ಅವನು ತಂದೆಯ ಸೂಚನೆಯನ್ನು ಬಹಳ ಸಂತೋಷದಿಂದ ಸ್ವಾಗತಿಸಿದ್ದನು. ಆದರೆ ತಂದೆತಾಯಿಗಳಿಗೆ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿರಲಿಲ್ಲ. ಎರಡು ದಿನಗಳನಂತರ ಅವನು ತಂದೆತಾಯಿಗಳ ಮತ್ತು ಸ್ನೇಹಿತರ ಅಪ್ಪಣೆ ಪಡೆದು ಮೈಸೂರಿಗೆ ಹೋದನು.

ಮೈಸೂರಿಗೆ ಹೋದನಂತರ ಬಹಿರಂಗ ಸಭೆಯೊಂದನ್ನು ಕುರಿತು ಮಾತನಾಡುತ್ತಿದ್ದಾಗ, ಮೋಹನನು ಸರ್ಕಾರವನ್ನು ತೀವ್ರವಾಗಿ ಖಂಡಿಸಿದನು. ಹಿಂದೆ ಯಾರೂ ಅಷ್ಟೊಂದು ಉಗ್ರವಾಗಿ ಸರ್ಕಾರವನ್ನು ಟೀಕಿಸಿರಲಿಲ್ಲ, ಸರ್ಕಾರದವರಿಗೆ ಬಹಳ ಕೋಪ ಬಂತು. ರಾಜದ್ರೋಹದ ಆಪಾದನೆಯ ಮೇಲೆ ಸರ್ಕಾರದವರು ಅವನ ಮೇಲೆ ಮೊಕದ್ದಮೆಯನ್ನು ಹೂಡಿದರು. ನ್ಯಾಯಧೀಶರು ಅವನಿಗೆ ಆರು ವರ್ಷಗಳ ಕಠಿಣ ಸಜಾ ವಿಧಿಸಿದರು. ಮೋಹನನು ಸೆರೆಮನೆಯಿಂದ ತಂದೆಗೆ ಒಂದು ಪತ್ರವನ್ನು ಬರೆದು, ತಂದೆತಾಯಿಗಳ ಅಪ್ಪಣೆಯಿಲ್ಲದೆ ಆಂದೋಳನದಲ್ಲಿ ಭಾಗವಹಿಸಿದ್ದಕ್ಕೆ ಕ್ಷಮೆಯನ್ನು ಬೇಡಿದನು. ಸಿದ್ದಣ್ಣನೂ ಚೆನ್ನಮ್ಮನೂ ಬಹಳ ದುಃಖಿಸಿದರು. ಒಂದು ದಿನವೆಲ್ಲಾ ಅವರು ಆಹಾರವನ್ನು ಮುಟ್ಟಿರಲಿಲ್ಲ. ತಾವೊಂದು ನೆನೆದರೆ ದೈವವೊಂದು ನೆನೆಯಿತು ಎಂದು ಸಂಕಟಪಟ್ಟರು. ಸರ್ಕಾರದ ಪಕ್ಷದಲ್ಲಿದ್ದ ನೀಲೇಗೌಡ ಮುಂತಾದವರು, ಮಾಡಬಾರದ ಕೆಲಸ ಮಾಡಿದ ಮೋಹನನಿಗೆ ತಕ್ಕ ಶಿಕ್ಷೆಯಾಯಿತೆಂದು ಆಡಿಕೊಳ್ಳುತ್ತಿದ್ದರು. ಅವರಾಡಿದ ಮಾತುಗಳನ್ನು ಕೇಳಿದ ಸಿದ್ದಣ್ಣನು ಕುಗ್ಗಿಹೋದನು. ಹಳ್ಳಿಯ ರೈತನಾದ ಸಿದ್ದಣ್ಣನಿಗೆ ಸತ್ಯಾಗ್ರಹದ ಮಹತ್ವ, ಸ್ವರಾಜ್ಯದ ಉದ್ದೇಶ ಮುಂತಾದ ದೊಡ್ಡ ವಿಷಯಗಳು ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಮಗನು ಕೆಟ್ಟ ಕೆಲಸ ಮಾಡಲಿಲ್ಲವೆಂದು ಅವನಿಗನಿಸಿತು. ಆದರೆ ಪವಿತ್ರಪುರ ತಾಲ್ಲೂಕಿನ ಪ್ರಭಾವಶಾಲಿಗಳ ಅಭಿಪ್ರಾಯ ಅವನ ಅಭಿಪ್ರಾಯಕ್ಕೆ ವಿರುದ್ಧವಾಗಿತ್ತು. ಅಂದಿನ ಕಾಲದಲ್ಲಿ ರಾಜಕೀಯ ಬಂದಿಗಳಿಗೆ ಸೆರೆಮನೆಯ ಅಧಿಕಾರಿಗಳು ಬಹಳ ಹಿಂಸೆಗಳನ್ನು ಕೊಡುತ್ತಿದ್ದರೆಂದು ಸಿದ್ದಣ್ಣನಿಗೆ ಗೊತ್ತಾಗಿತ್ತು. ಸತ್ಯಾಗ್ರಹಿಗಳು ಕೆಲವರು ಸೆರೆಮನೆಯಲ್ಲಿ ಸತ್ತಿದ್ದ ಸಂಗತಿಯೂ ಸಿದ್ದಣ್ಣನಿಗೆ ಗೊತ್ತಿತ್ತು. ಆದ್ದರಿಂದ ಅವನ ಮನಸ್ಸು ಬಹಳ ಕಳವಳಕ್ಕೀಡಾಗಿತ್ತು. ಚೆನ್ನಮ್ಮನಿಗೆ ಈ ವಿಚಾರಗಳು ಗೊತ್ತಾದರೆ ಅನಾಹುತ ಆದೀತೆಂಬ ಭಾವನೆಯಿಂದ ತನ್ನ ಕಳವಳವನ್ನು ಅವನು ಅದುಮಿಡುತ್ತಿದ್ದನು. ಮಗನ ಕ್ಷೇಮಕ್ಕಾಗಿ ದೇವಾಧಿದೇವತೆಗಳಿಗೆ ಪ್ರಾರ್ಥನೆಯನ್ನು ಸಲ್ಲಿಸಿ, ಹರಕೆಯನ್ನು ಹೊತ್ತನು. ಚೆನ್ನಮ್ಮನು ಕಣ್ಣೀರಿನಲ್ಲಿ ಕೂಳನ್ನು ತಿನ್ನುತ್ತಿದ್ದಳು. ಅವಳು ಒಮ್ಮೊಮ್ಮೆ ರಾತ್ರಿ ಕನಸಿನಲ್ಲಿ ಮೋಹನನನ್ನು ಕರೆಯುತ್ತಿದ್ದಳು. ಸೆರೆಮನೆಯ ನಿಯಮದ ಪ್ರಕಾರ ಮೋಹನನು ಪ್ರತಿ ತಿಂಗಳಿಗೊಮ್ಮೆ ತಂದೆಗೆ ಕಾಗದವನ್ನು

ಬರೆಯಬಹುದಾಗಿತ್ತು. ಪ್ರತಿ ತಿಂಗಳೂ ಅವನಿಂದ ಬರತಕ್ಕ ಕಾಗದಕ್ಕಾಗಿ ತಂದೆ ತಾಯಿಗಳಿಬ್ಬರೂ ಚಾತಕ ಪಕ್ಷಿಗಳಂತೆ ಕಾದಿರುತ್ತಿದ್ದರು.

ಸತ್ಯಾಗ್ರಹವು ದಿನೇ ದಿನೇ ಪ್ರಬಲವಾಗುತ್ತ ಇಂಡಿಯಾ ದೇಶವನ್ನು ವ್ಯಾಪಿಸಿತು. ಸತ್ಯಾಗ್ರಹಿಗಳ ಮೇಲೂ, ಕಾಂಗ್ರೆಸ್ಸಿಗೆ ಬೆಂಬಲರಾಗಿದ್ದವರ ಮೇಲೂ ಸರ್ಕಾರದವರು ಉಗ್ರ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದ್ದರು. ಅನುಮಾನದ ಮೇಲೆ ದೇಶದಾದ್ಯಂತ ಹಲವರನ್ನು ಬಂಧಿಸುತ್ತಿದ್ದರು. ಸರ್ಕಾರದ ಪಕ್ಷದಲ್ಲಿದ್ದವರಿಗೆ ಅದೊಂದು ಸುಗ್ಗಿಯ ಕಾಲವಾಗಿತ್ತು. ತಮಗೆ ಆಗದವರ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕೂ, ಸರ್ಕಾರದ ಸಹಾಯದಿಂದ ಹಣವನ್ನು ಸಂಪಾದಿಸುವುದಕ್ಕೂ ಅವರಿಗೆ ಸರಿಯಾದ ಅವಕಾಶ ದೊರಕಿತ್ತು. ಪವಿತ್ರಪುರ ತಾಲ್ಲೂಕಿನಲ್ಲಿ ಸರ್ಕಾರಿ ಪಕ್ಷಕ್ಕೆ ಸೇರಿದ್ದ ರಂಗನಾಥ ಮುಂತಾದವರಿಗೆ "ಆಡಿದ್ದೇ ಆಟ ಹೂಡಿದ್ದೆ ಲಗ್ಗೆ" ಎನ್ನುವ ಹಾಗಿತ್ತು. ಅವರ ಹೇಳಿಕೆ ಮೇರೆಗೆ ತಾಲ್ಲೂಕಿನ ಆಡಳಿತ ನಡೆಯುತ್ತಿತ್ತು. ಕಾಂಗ್ರೆಸ್ಸನ್ನು ತುಳಿಯುವ ಆತುರದಲ್ಲಿ ಅಧಿಕಾರವರ್ಗದವರು ರಂಗನಾಥ, ಕಲ್ಲಪ್ಪ, ನಾಗೇಂದ್ರ ಮುಂತಾದವರೂ ಹೇಳಿದ ಹಾಗೆ ಕುಣಿಯುತ್ತಿದ್ದರು. ಮೋಹನನ ತಂದೆ ಸಿದ್ದಣ್ಣನು ಕಾಂಗ್ರೆಸ್ಸಿನ ಆಂದೋಳನಕ್ಕೆ ಬೆಂಬಲ ನೀಡುತ್ತಿದ್ದಾನೆಂದೂ ಅವನ ಪ್ರೋತ್ಸಾಹದಿಂದಲೇ ಮೋಹನನು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದನೆಂದೂ, ದಾಯಾದಿ ನೀಲೇಗೌಡನೂ, ಸಾಹುಕಾರ್ ಸಣ್ಣೇಗೌಡನೂ ಸ್ಥಳೀಯ ಅಧಿಕಾರಿಗಳಿಗೆ ವರದಿ ಮಾಡಿದ್ದರು. ಸಿದ್ದಣ್ಣನ ಮೇಲೆ ಡೆಪ್ಯೂಟಿ ಕಮಿಷನರಿಗೂ, ಜಿಲ್ಲೆಯ ಪೋಲಿಸ್ ಮುಖ್ಯಾಧಿಕಾರಿಗಳಿಗೂ ಮೂರು ದಿನಗಳಿಗೊಂದು ದೂರು ಹೋಗುವಂತೆ ವ್ಯವಸ್ಥೆ ಮಾಡಿದ್ದರು. ಜಿಲ್ಲೆಯ ಪೊಲೀಸ್ ಮುಖ್ಯಾಧಿಕಾರಿಗಳು ಪವಿತ್ರಪುರಕ್ಕೆ ಒಮ್ಮೆ ಬಂದಿದ್ದಾಗ, ನೀಲೇಗೌಡನು ರಂಗನಾಥನ ಜೊತೆಯಲ್ಲಿ ಅವರನ್ನು ಭೇಟಿಮಾಡಿ ಸಿದ್ದಣ್ಣನು ರಾಜದ್ರೋಹದ ಕಾರ್ಯದಲ್ಲಿ ನಿರತನಾಗಿದ್ದಾನೆಂದೂ, ಅವನನ್ನು ಬಂಧಿಸದಿದ್ದರೆ ನೆಮ್ಮದಿಗೆ ಭಂಗ ಬರಬಹುದೆಂದೂ ಹೇಳಿದನು. ನೀಲೇಗೌಡನು ಹೇಳಿದ್ದನ್ನು ರಂಗನಾಥನು ಪುಷ್ಟೀಕರಿಸಿ ಮಾತನಾಡಿದನು. ಸರ್ಕಾರದ ದೃಷ್ಟಿಯಲ್ಲಿ ರಂಗನಾಥನು ಗಣ್ಯವ್ಯಕ್ತಿಯೆನಿಸಿಕೊಂಡಿದ್ದನು. ಅವನ ಮಾತನ್ನು ಅಧಿಕಾರಿಗಳು ನಂಬದೆ ಇರುವಂತಿರಲಿಲ್ಲ. ಅದರಿಂದಾಗಿ ಸಿದ್ದಣ್ಣನನ್ನು ಭಾರತ ಸಂರಕ್ಷಣಾ ಕಾಯಿದೆಯ ಮೇರೆಗೆ ಬಂಧಿಸಿ, ದೂರ ಪ್ರದೇಶದ ಸೆರೆಮನೆಯೊಂದಕ್ಕೆ ಕೊಂಡೊಯ್ದರು. ಚೆನ್ನಮ್ಮನ ಪರಿಸ್ಥಿತಿಯನ್ನು ಓದುಗರೇ ಊಹಿಸಬಹುದು. ಗಂಡನನ್ನು ಬಂಧಿಸಲು ಬಂದ ಅಧಿಕಾರಿಗಳಲ್ಲಿ ಗಂಡನ ಜೊತೆಯಲ್ಲಿ ತನ್ನನ್ನೂ ಬಂಧಿಸಬೇಕೆಂದು ಮೊರೆಯಿಟ್ಟಿದ್ದಳು. ಸಿದ್ದಣ್ಣನ ಬಂಧನವಾದ ನಂತರ ಅವಳು ಅನ್ನ ನೀರನ್ನು ಬಿಟ್ಟು ರೋಧಿಸುತ್ತಾ, ಹಾಸಿಗೆ ಹಿಡಿದು ಮಲಗಿದಳು. ಸಿದ್ದಣ್ಣನ ಬಂಧನದ ವಿಚಾರ ಗೊತ್ತಾದೊಡನೆ ಅಮೃತೂರಿನಿಂದ ಚೆನ್ನಮ್ಮನ ತಮ್ಮನು ಪಂಜರವಳ್ಳಿಗೆ ಬಂದು, ಏಕಾಂಗಿಯಾಗಿದ್ದ ಅಕ್ಕನನ್ನು ಅಮೃತೂರಿಗೆ ಕರೆದುಕೊಂಡು ಹೋದನು. ಚೆನ್ನಮ್ಮನು ಮನೆಯನ್ನು ಬಿಡುವಾಗ ಸಕಲ ಸಾಮಾನುಗಳನ್ನೂ ಮನೆಯೊಳಗಿಟ್ಟು ಮನೆಗೆ ಬೀಗ ಹಾಕಿ

ಹೋಗಿದ್ದಳು. ಆದರೆ ಕೆಲವು ದಿನಗಳ ನಂತರ ಮನೆಯನ್ನು ಶೋಧಿಸುವ ನೆಪದಲ್ಲಿ ಸ್ಥಳೀಯ ಪೊಲೀಸಿನವರು ಮನೆಗೆ ಹಾಕಿದ್ದ ಬೀಗವನ್ನು ಒಡೆದು, ಮನೆಯಲ್ಲಿ ಇದ್ದುದನ್ನೆಲ್ಲಾ ದೋಚಿಕೊಂಡು ಹೋದರು. ಸ್ವಲ್ಪಕಾಲದ ನಂತರ ದಾಯಾದಿ ನೀಲೇಗೌಡನು ತಾನು ದಾಯಾದಿಯೆಂಬ ಹಕ್ಕಿನ ನೆಪದಲ್ಲಿ ಹಕ್ಕಿನ ನೆಪದಲ್ಲಿ ಸಿದ್ದಣ್ಣನ ಮನೆಯನ್ನೂ, ಜಮೀನನ್ನು ತನ್ನ ವಶಪಡಿಸಿಕೊಂಡನು. ಮನೆಯನ್ನು ತನ್ನ ಆಳುಗಳ ವಸತಿಗಾಗಿ ಬಿಟ್ಟು ಕೊಟ್ಟಿದ್ದನು. ಜಮೀನನ್ನು ತಾನೇ ಸಾಗುವಳಿ ಮಾಡಿಸಿ ಬಂದ ಉತ್ಪತ್ತಿಯನ್ನು ತಾನೇ ದುರುಪಯೋಗ ಮಾಡಿಕೊಳ್ಳುತ್ತಿದ್ದನು.

ಸಿದ್ದಣ್ಣನು ಮನೆಯನ್ನು ಬಿಟ್ಟು ಹೆಚ್ಚುಕಾಲ ಬೇರೆ ಸ್ಥಳದಲ್ಲಿ ಯಾವಾಗಲೂ ಇದ್ದವನಲ್ಲ. ಅಲ್ಲದೆ ಉದ್ದೇಶಪೂರ್ವಕವಾಗಿ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆಯನ್ನು ಸೇರಿದವನಲ್ಲ. ಸೆರೆಮನೆಯ ವಾಸ, ಸೇರದ ಆಹಾರ, ಮನೋವ್ಯಥೆ, ಇವುಗಳ ದೆಸೆಯಿಂದ ಕಲ್ಲಿನಂತಿದ್ದ ಅವನು ದೇಹ ಕೆಲವೇ ತಿಂಗಳಲ್ಲಿ ಕೃಶವಾಗುತ್ತಾ ಬಂದಿತ್ತು. ಹೆಂಡತಿಯನ್ನೂ ಮಗನನ್ನೂ ನೆನೆದುಕೊಂಡಾಗಲೆಲ್ಲಾ ಅವನಿಗೆ ದುಃಖ ಉಕ್ಕಿ ಬರುತ್ತಿತ್ತು. ಚೆನ್ನಮ್ಮನಿಗೆ ಓದು ಬರೆಹ ಬರುತ್ತಿರಲಿಲ್ಲ. ಆದ್ದರಿಂದ ತನ್ನ ತಮ್ಮನಿಂದ ಪತ್ರವನ್ನು ಸಿದ್ದಣ್ಣನಿಗೆ ಬರೆಸುತ್ತಿದ್ದಳು. ತನ್ನ ಬಂಧುಗಳಿಂದ ಬಂದ ಪತ್ರಗಳನ್ನು ಓದುತ್ತಿರುವಾಗಲೆಲ್ಲಾ ಸಿದ್ದಣ್ಣನು ಮಕ್ಕಳಂತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದನು. ಸೆರೆಮನೆಯನ್ನು ಸೇರಿದ ಆರೇಳು ತಿಂಗಳ ನಂತರ ಅವನಿಗೆ ಜ್ವರ ಪ್ರಾರಂಭವಾಯಿತು. ಮೊದಮೊದಲು ಸೆರೆಮನೆಯ ಅಧಿಕಾರಿಗಳು ಸಿದ್ದಣ್ಣನ ಅನಾರೋಗ್ಯದ ವಿಚಾರದಲ್ಲಿ ಯಾವ ಆಸಕ್ತಿಯನ್ನೂ ವಹಿಸಿರಲಿಲ್ಲ. ಸಿದ್ದಣ್ಣನು ತನಗೆ ಜ್ವರವೆಂದು ಆ ಅಧಿಕಾರಿಗಳೊಡನೆ ಮನವಿ ಮಾಡಿಕೊಂಡಾಗ, ಆ ಅಧಿಕಾರಿಗಳ ಅವನು ಹೇಳುವುದು ಸುಳ್ಳೆಂದು ಗದರಿಸುತ್ತಿದ್ದರು, ರೋಗ ಉಲ್ಬಣಾವಸ್ಥೆಯನ್ನು ಮುಟ್ಟಿದ ನಂತರ ಅವನನ್ನು ಸೆರೆಮನೆಯ ಆಸ್ಪತ್ರೆಗೆ ಸೇರಿಸಿದರು. ಆಸ್ಪತ್ರೆಯಲ್ಲಿ ರೋಗ ಗುಣಮುಖವಾಗುವ ಬದಲು ಇನ್ನೂ ಉಲ್ಬಣವಾಯಿತು. ತಾನು ಬದುಕುವುದಿಲ್ಲವೆಂದು ಸಿದ್ದಣ್ಣನಿಗೆ ಗೊತ್ತಾಯಿತು. ಸಾಯುವ ಕೆಲವು ಘಂಟೆಗಳ ಮುಂಚೆ ಹೆಂಡತಿಯನ್ನೂ, ಮಗನನ್ನೂ ಕರೆಯಿಸಬೇಕೆಂದು ಸೆರೆಮನೆಯ ಅಧಿಕಾರಿಗಳಲ್ಲಿ ಮೊರೆಯಿಟ್ಟನು. ಅವನ ಮೊರೆಯನ್ನು ಕೇಳುವವರಾರು? ಅಧಿಕಾರಿಗಳು ಅವನನ್ನು ಸಂತೈಸುವ ಬದಲು ಸಿಟ್ಟಿನಿಂದ ಆರ್ಭಟಿಸಿದರು. ಹೆಂಡತಿಯನ್ನೂ, ಮಗನನ್ನೂ ನೋಡದ ಪರಸ್ಥಳದಲ್ಲಿ ಅದರಲ್ಲೂ ಸೆರೆಮನೆಯೊಂದರಲ್ಲಿ ಸಾಯುವ ಹೊತ್ತು ಬಂದುದಕ್ಕಾಗಿ ಸಿದ್ದಣ್ಣನು ಪದೇ ಪದೇ ಅಳುತ್ತಿದ್ದನು. ಅವನ ಸ್ಮೃತಿಪಥದಲ್ಲಿ ಗತಿಸಿದ ಘಟನೆಗಳು ಒಂದೊಂದಾಗಿ ಮೂಡಿಬರುತ್ತಿದ್ದವು. ಕುಟುಂಬದ ಮನೆಯಲ್ಲಿ ತಂದೆತಾಯಿಗಳೊಡನೆ ಸುಖವಾಗಿ ಬಾಳಿದ್ದು, ಅನಂತರ ಆ ಮನೆಯನ್ನು ಬಿಟ್ಟು ಸೋದರ ಮಾವನ ಮನೆಯನ್ನು ಸೇರಿದ್ದು, ಅಲ್ಲಿದ್ದ ತಿರುಮಲಭಟ್ಟರ ಗೇಣಿ ಜಮೀನಿನಲ್ಲಿ ಜೀವಿಸಿದ್ದು, ತಮ್ಮ ಪುಟ್ಟನೂ, ತಂದೆ ಗಿರಿಯಪ್ಪಗೌಡರೂ ನರಭಕ್ಷಕ ಹುಲಿಗೆ ಆಹುತಿಯಾದದ್ದು, ಮೂವರು ಒಡಹುಟ್ಟಿದವರನ್ನು ಒಂದೇ ವಾರದಲ್ಲಿ ಕಳೆದುಕೊಂಡಿದ್ದು,

ತಾಯಿಗೆ ಹುಚ್ಚು ಹಿಡಿದದ್ದು, ತಾನು ಬಡತನದೊಡನೆ ಹೋರಾಟಮಾಡಿದ್ದು, ನ್ಯಾಯವಾದಿಯಾಗಿ ಅಥವಾ ಅಧಿಕಾರಿಯಾಗಿ ಬಾಳಬೇಕಾಗಿದ್ದ ಮಗನು ಸೆರೆಮನೆಯನ್ನು ಸೇರಿದ್ದು, ಕೊನೆಗೂ ದಾಯಾದಿ ನೀಲೇಗೌಡನು ದಾಯಾದಿಮಾತ್ಸರ್ಯವನ್ನು ಬಿಡದೆ ರಂಗನಾಥನೊಡನೆ ಷರೀಕಾಗಿ ತನ್ನನ್ನು ಸೆರೆಮನೆಗೆ ಕಳುಹಿಸಿದ್ದು ಇವೇ ಮುಂತಾದ ಘಟನೆಗಳನ್ನು ಸ್ಮರಿಸಿಕೊಂಡನು. ಸಾಯುವ ಕಾಲ ಸಮೀಪಿಸುತ್ತಾ ಇದ್ದಾಗ ಆಗಾಗ ಅವನಿಗೆ ಸ್ಮೃತಿ ತಪ್ಪುತ್ತಿತ್ತು. ಸಾಯುವ ಪೂರ್ವ ಅಂತಿಮ ಗಳಿಗೆಯಲ್ಲಿ ದೇವರನ್ನು ಕುರಿತು ಮಾತನಾಡಬೇಕೆಂದು ಅವನಿಗೆ ಮನಸ್ಸಾಯಿತು. ಇದ್ದಕ್ಕಿದ್ದ ಹಾಗೆ ಅವನು ಮನಸ್ಸಿನ ಅಂತರಾಳದಲ್ಲಿ ಎಲ್ಲೋ ಹುದುಗಿದ್ದ ಸ್ಫೂರ್ತಿಯ ಬುಗ್ಗೆ ಹೊರಗೆ ಚಿಮ್ಮುತ್ತಿರುವಂತೆ ಭಾಸವಾಗುತ್ತಿತ್ತು. ಸಾಹಿತಿಯ ಬಾಯಿಂದ ಹೊರಡುವಂತೆ ಮಾತುಗಳು ಹೊರಡುತ್ತಿದ್ದುವು. ದೇವರನ್ನು ಕುರಿತು ಅವನು ಹೇಳಿದ ಮಾತುಗಳು ಈ ರೀತಿ ಇದ್ದವು.

"ದೇವರೆ, ನೀನಿರುವುದು ನಿಜವಾದರೆ, ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನೆ ನಿನ್ನ ಕರ್ತವ್ಯವಾಗಿದ್ದರೆ, ದುಷ್ಟ ಜಂತುಗಳಾದ ನೀಲೇಗೌಡ, ಕಲ್ಲಪ್ಪ, ಸಣ್ಣೇಗೌಡ, ನಾಗೇಂದ್ರ, ರಂಗನಾಥ ಮುಂತಾದವರು ಅಷ್ಟೈಶ್ವರ್ಯಗಳಿಂದ ಮೆರೆಯುತ್ತಿರಲು ಕಾರಣವೇನು? ಸತ್ಯಸಂಧನಾಗಿ ಬಾಳಿದ ನಾನು ಕಷ್ಟಪರಂಪರೆಗಳಲ್ಲಿ ತೊಳಲುತ್ತಿರಲು ಕಾರಣವೇನು? ಹೇಳು, ಹೇ ದೇವಾ ಹೇಳು. ದುಷ್ಟರು ನಿರಪರಾಧಿಗಳಿಗೆ ತೊಂದರೆ ಕೊಡುತ್ತಿದ್ದಾರೆ. ಮೋಸದಿಂದ ಶ್ರೀಮಂತರಾಗಿದ್ದರೆ. ನಿರಪರಾಧಿಯಾದ ನನ್ನನ್ನು ಸೆರೆಮನೆಗೆ ಸೇರಿಸಿದರು. ನೀನಿರುವುದು ನಿಜವಾಗಿದ್ದಾರೆ ಹೀಗಾಗುತ್ತಿರಲಿಲ್ಲ. ನೀನಿರುವುದು ಸುಳ್ಳು......ಸುಳ್ಳು..... ಸುಳ್ಳು.... ಇರುವುದಾದರೆ ಈಗ ಮಾತನಾಡು."

ಎಲ್ಲಿಂದಲೋ ಅಸ್ಪಷ್ಟ ವಾಣಿಯೊಂದು, "ಸಿದ್ದಣ್ಣ, ದುಃಖಿಸಬೇಡ. ರಂಗನಾಥ ಮುಂತಾದವರು ಅಷ್ಟೈಶ್ವರ್ಯಗಳಿಂದ ಮೆರೆಯುತ್ತಿರಬಹುದು. ಆದರೆ ಅದು ಶಾಶ್ವತ ಸುಖವಲ್ಲ., ಅವರ ಜನ್ಮ ವ್ಯರ್ಥ. ನಿನ್ನ ಜನ್ಮ ಸಾರ್ಥಕವಾಯಿತು. ಅಳಿಯಲಾರದ ಸುಖ ನಿನಗಾಗಿ ಮೀಸಲಾಗಿದೆ. ನೀನಿನ್ನು ಪಯಣಕ್ಕೆ ಸಿದ್ಧನಾಗು" ಎಂದು ಹೇಳಿತು. ಸಿದ್ದಣ್ಣನು ಕಣ್ತೆರೆದು ನೋಡಿದನು. ಯಾರೂ ಹತ್ತಿರ ಇರಲಿಲ್ಲ. ಆ ವಾಣಿಯು ಎಲ್ಲಿಂದ ಬಂತೆಂಬುದು ಗೊತ್ತಾಗಲಿಲ್ಲ. ಆದರೂ ಮನಸ್ಸಿಗೆ ನೆಮ್ಮದಿಯಾಯಿತು. ಕಣ್ಮುಚ್ಚಿದನು. ಪುನಃ ಕಣ್ಣುಗಳು ತೆರೆಯಲಿಲ್ಲ.

ಸೆರೆಮನೆಯ ಅಧಿಕಾರಿಗಳು ಸಿದ್ದಣ್ಣನ ಖಾಹಿಲೆಯ ವಿಚಾರವನ್ನು ಅವನ ಹೆಂಡತಿಗಾಗಲಿ, ಮಗನಿಗಾಗಲಿ ತಿಳಿಸಿರಲಿಲ್ಲ. ಇಷ್ಟು ಬೇಗ ಅವನು ಸಾಯುತ್ತಾನೆಂದು ಅವರು ಭಾವಿಸಿರಲಿಲ್ಲ. ಅವನು ಸತ್ತನಂತರ ಅವರಿಗೆ ಜ್ಞಾನೋದಯವಾಯಿತು. ಆಗ ಯಾರಿಗೆ ತಿಳಿಸಲೂ ಸಮಯವಿರಲಿಲ್ಲ. ಆದ್ದರಿಂದ ಸಿದ್ದಣ್ಣನ ಕಳೇಬರವನ್ನು ಸೆರೆಮನೆಯ ನೌಕರರಿಂದ ಹೂಳಿಸಿದರು. ಅಂತೂ, ಮಣ್ಣಿನ ಮಗನಾದ ಗೇಣಿದಾರ ಸಿದ್ದಣ್ಣನು ಗೊತ್ತು ಗುರಿ ಇಲ್ಲದ ಸ್ಥಳದಲ್ಲಿ ಮಣ್ಣು ಪಾಲಾದನು. ತಂದೆ ಸತ್ತ ವಿಚಾರ ಮೋಹನನಿಗೆ

ಎಂಟು ಹತ್ತು ದಿನಗಳ ನಂತರ ಗೊತ್ತಾಯಿತು. ಸತ್ಯಾಗ್ರಹಿಯಾದವನು ಬಂದ ಕಷ್ಟಗಳನ್ನೆಲ್ಲಾ ಧೈರ್ಯದಿಂದ ಎದುರಿಸಬೇಕೆಂಬುದನ್ನು ಅವನು ಅರಿತಿದ್ದನು. ಆದರೂ ಮಾನವ ಸ್ವಭಾವಕ್ಕನುಗುಣವಾಗಿ ತಂದೆಯ ಸಾವು ಅವನನ್ನು ದುಃಖ ಸಾಗರದಲ್ಲಿ ಮುಳಗಿಸಿತ್ತು. ತಾಯಿಗಾಗಿ ಮರುಗಿದನು. ತಾಯಿಯನ್ನು ಸಂತೈಸುವುದಕ್ಕಾಗಿ ಅಮೃತೂರಿಗೆ ಒಂದು ಪತ್ರವನ್ನು ಬರೆದನು. ಗಂಡ ಸತ್ತ ವಿಚಾರವನ್ನು ಚೆನ್ನಮ್ಮನು ಮೋಹನನ ಪತ್ರದಿಂದ ತಿಳಿದು ಮೇರೆಯರಿಯದ ಶೋಕದಲ್ಲಿ ಮುಳುಗಿದಳು. ಅವಳು ಹಳೆಯ ಕಾಲದವಳು. ಗಂಡನಿಲ್ಲದೆ ಬಾಳುವುದಕ್ಕಿಂತ ಸಾಯುವುದೇ ಲೇಸೆಂದು ತಿಳಿದಿದ್ದವಳು. ಇಚ್ಛಾಮರಣಿಯಾಗಿದ್ದರೆ ಗಂಡ ಸತ್ತ ಸುದ್ದಿ ತಿಳಿದೊಡನೆ ಮರಣವನ್ನಪ್ಪುತ್ತಿದ್ದಳು. ಆದರೆ ಸಾಯುವುದು ಅವಳ ಕೈಯಲ್ಲಿರಲಿಲ್ಲ. ಆದ್ದರಿಂದ ಅವಳು ಬದುಕಿರಬೇಕಾಗಿ ಬಂತು.

# ೮. ಅಂತಿಮ ಹೋರಾಟ

ಸಿದ್ದಣ್ಣನು ಸತ್ತು ಎರಡು ವರ್ಷಗಳಾಗಿದ್ದವು. ಮೋಹನನ ಆರು ವರ್ಷಗಳ ಶಿಕ್ಷೆಯಲ್ಲಿ ನಾಲ್ಕು ವರ್ಷಗಳು ಸಂದು ಹೋಗಿದ್ದವು. ಗಾಂಧೀಜಿಯವರ ಅಸಹಕಾರ ಚಳವಳಿ ಯಶಸ್ವಿಯಾಗಿ ಮುಂದುವರಿದಿತ್ತು. ಮೋಹನನು ರಾಜದ್ರೋಹದ ಆಪಾದನೆಗೊಳಗಾಗಿ ಸೆರೆಮನೆಯನ್ನು ಸೇರಿದನಂತರ ಎರಡು ಸತ್ಯಾಗ್ರಹಗಳು ನಡೆದಿದ್ದವು. ಸರ್ಕಾರದವರು ಕಾಂಗ್ರೆಸ್ಸನ್ನು ತುಳಿಯಲು ಸರ್ವಪ್ರಯತ್ನವನ್ನೂ ಮಾಡುತ್ತಿದ್ದರು. ಆದರೂ ವರ್ಷಗಳು ಉರುಳಿದಂತೆಲ್ಲಾ ಕಾಂಗ್ರೆಸ್ಸಿನ ಶಕ್ತಿ ಬೆಳೆಯುತ್ತಾ ಬಂದಿತ್ತು. ಜನರು ತಂಡೋಪತಂಡವಾಗಿ ಕಾಂಗ್ರೆಸ್ಸಿಗೆ ಸೇರುತ್ತಿದ್ದರು. ಸಾವಿರಾರು ಜನರು ಸೆರೆಮನೆಯನ್ನು ಸೇರಿದರು. ಮೋಹನನ ಸ್ನೇಹಿತರಾದ ಕರಿಯಪ್ಪ, ಮೂರ್ತಿ, ದಿಗಂಬರ ಮುಂತಾದವರು ಮೋಹನನ ಜೊತೆಯಲ್ಲಿ ಸೆರೆಮನೆಯಲ್ಲಿದ್ದರು. ಅಂತಿಮ ಹೋರಾಟ ನಡೆದಿತ್ತು. ಸರ್ಕಾರದವರು ಸೋಲನ್ನೊಪ್ಪಿಕೊಳ್ಳುವ ಕಾಲ ಸನ್ನಿಹಿತವಾಗಿತ್ತು. ಆಂಗ್ಲೇಯರು ಹಿಂದೂಸ್ಥಾನವನ್ನು ಬಿಡಲು ಒಳಗೊಳಗೇ ಸನ್ನಾಹ ಮಾಡುತ್ತಿದ್ದರು. ಹೋರಾಟದಲ್ಲಿ ಕಾಂಗ್ರೆಸ್ಸಿಗೆ ಜಯವೆಂಬ ಭಾವನೆ ಜನತೆಯಲ್ಲಿ ಮೂಡಿತ್ತು. ಅದುವರೆಗೂ ಸರ್ಕಾರದ ಪರವಾಗಿದ್ದು ದೇಶಭಕ್ತರಿಗೆ ಕಿರುಕುಳ ಕೊಡುತ್ತಿದ್ದವರು ಗಾಳಿ ಎತ್ತ ಕಡೆ ಬೀಸುತ್ತದೆಯೆಂಬುದನ್ನು ತಿಳಿದುಕೊಂಡು ತಮ್ಮ ವರ್ತನೆಯನ್ನು ಬದಲಾಯಿಸ ತೊಡಗಿದರು. ಅವರಲ್ಲಿ ಕೆಲವರು ಅಧಿಕಾರಿಗಳೊಡನೆ ಮಾತನಾಡುವಾಗ ಆಂಗ್ಲೇಯರ ಮೊಮ್ಮಕ್ಕಳಂತೆ ಮಾತನಾಡುತ್ತಿದ್ದರು; ಕಾಂಗ್ರೆಸ್ಸಿನವರೊಡನೆ ಮಾತನಾಡುತ್ತಿದ್ದಾಗ ಅಪ್ರತಿಮ ದೇಶಭಕ್ತನಂತೆ ನಟಿಸುತ್ತಿದ್ದರು. ಅಂತಹ ಇಬ್ಬಂದಿ ಜನರಲ್ಲಿ ಶೀತೂರು ಕಲ್ಲಪ್ಪನೂ ಒಬ್ಬನಾಗಿದ್ದನು. ಆಂಗ್ಲೇಯರು ದೇಶವನ್ನು ಬಿಟ್ಟು ಹೋಗುತ್ತಾರೆಂಬ ಸುದ್ದಿ ಬಲವಾದ ನಂತರ ಕೆಲವರು ನಿಜವಾದ ಕಾಂಗ್ರೆಸ್ಸಿನವರನ್ನು ಮೀರಿಸುವ ರೀತಿಯಲ್ಲಿ ಬಿಳಿಯ ಬಟ್ಟೆಯಲ್ಲಿ ಫಳಫಳನೆ ಹೊಳೆಯುತ್ತಿದ್ದರು. ರಾಜಕೀಯ ಬಂದಿಗಳನ್ನೆಲ್ಲಾ ಬಿಡುಗಡೆ ಮಾಡುತ್ತಾರೆಂಬ ವದಂತಿ ಹಬ್ಬಿದನಂತರ ಕೆಲವರು ಅವಸರಅವಸರವಾಗಿ ಕಾನೂನು ಭಂಗಮಾಡಿ ಸೆರೆಮನೆಯನ್ನು ಸೇರಿದರು. ಬಂದಿಗಳ ಬಿಡುಗಡೆಗೆ ಎಂಟು ದಿನಗಳ ಹಿಂದೆ ಶೀತೂರು ಕಲ್ಲಪ್ಪನು ಕಾನೂನು ಭಂಗಮಾಡಿ ಸೆರೆಮನೆಯನ್ನು ಸೇರಿದನು. ಕಲ್ಲಪ್ಪನು ತಾನು ಹೊರಗಡೆ ಇದ್ದು ಸಾಧಿಸಿದ ದೇಶಪ್ರೇಮದ ಮಹತ್ಕಾರ್ಯಗಳನ್ನು ಬಂದಿಗಳೆಲ್ಲರೂ ತಲೆದೂಗಿಸುವ ರೀತಿಯಲ್ಲಿ ವರ್ಣಿಸುತ್ತಿದ್ದನು. ಅವನ ವರ್ಣನೆಯನ್ನು ಕೇಳಿ ಮೋಹನನು ನಗುತ್ತಿದ್ದನು. ಯಾಕೆಂದರೆ ಕಲ್ಲಪ್ಪನ ಗುಟ್ಟು ಮೋಹನನಿಗೆ ಗೊತ್ತಿತ್ತು. ಎಂಟು ದಿನಗಳನಂತರ ಬಂದಿಗಳೆಲ್ಲರ ಬಿಡುಗಡೆಯಾಯಿತು. ಬಿಡುಗಡೆಯಾದ ಮರುದಿನ

ಮೋಹನನು ತನ್ನ ಸ್ನೇಹಿತರಾದ ಮೂರ್ತಿ, ಕರಿಯಪ್ಪ ಮುಂತಾದವರೊಡನೆ ರೈಲಿನಲ್ಲಿ ಪವಿತ್ರಪುರಕ್ಕೆ ಹೊರಟನು. ಕಲ್ಲಪ್ಪನೂ ಅದೇ ರೈಲಿನಲ್ಲಿ ಪವಿತ್ರಪುರಕ್ಕೆ ಹೊರಟಿದ್ದನು. ಕಲ್ಲಪ್ಪನೂ ಎಷ್ಟೋ ವರ್ಷಗಳ ಕಾಲ ಸೆರೆಮನೆಯಲ್ಲಿದ್ದ ದೇಶಭಕ್ತನಂತೆ ತನ್ನ ಜೊತೆಯಲ್ಲಿದ್ದ ಪ್ರಯಾಣಿಕರೊಡನೆ ಮಾತನಾಡುತ್ತಿದ್ದನು. ಸತ್ಯ, ಅಹಿಂಸೆ, ದೇಶಭಕ್ತಿ ಮುಂತಾದುವುಗಳ ವಿಚಾರದಲ್ಲಿ ದೀರ್ಘವಾದ ಉಪನ್ಯಾಸವನ್ನು ಮಾಡುತ್ತಿದ್ದನು. ಕಲ್ಲಪ್ಪನ ಬಂಡವಾಳ ಗೊತ್ತಿಲ್ಲದ ಮೂರನೆಯ ವರ್ಗದ ಪ್ರಯಾಣಿಕರು ಅವರ ವಾಗ್ಝರಿಯನ್ನು ನೋಡಿ ಥಂಗು ಬಡಿದಂತಿದ್ದರು. ಮೋಹನನು ಮೌನವಾಗಿ ಕುಳಿತು ಭಾವನಾಪ್ರಪಂಚದಲ್ಲಿ ತಲ್ಲೀನನಾಗಿದ್ದನು. ಒಮ್ಮೊಮ್ಮೆ ತನ್ನ ಭವಿಷ್ಯವನ್ನು ಕುರಿತು ಯೋಚಿಸುತ್ತಿದ್ದನು. ಮತ್ತೊಮ್ಮೆ ಜಗತ್ತಿನ ಮತ್ತು ಮಾನವ ಜೀವನದ ರಹಸ್ಯವನ್ನೂ ಸಹ ಕುರಿತು ಯೋಚಿಸುತ್ತಿದ್ದನು. ಸ್ವರಾಜ್ಯ ಬಂದ ಮೇಲೆ ದೇಶದ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳು ಯಾವ ರೀತಿಯಿರಬೇಕೆಂಬುದನ್ನೂ, ಬಡತನವನ್ನು ಹೇಗೆ ನಿರ್ಮೂಲ ಮಾಡಬೇಕೆಂಬುದನ್ನೂ, ಜನಸಾಮಾನ್ಯರನ್ನು ಶೋಷಣೆಯಿಂದ ಯಾವ ರೀತಿ ಮುಕ್ತರನ್ನಾಗಿ ಮಾಡಬೇಕೆಂಬುದನ್ನೂ, ಕುರಿತು ದೀರ್ಘವಾಗಿ ಯೋಚಿಸುತ್ತಿದ್ದನು.

ರೈಲು ಯಾವುದೋ ಒಂದೂರಿನ ನಿಲ್ದಾಣದಲ್ಲಿ ನಿಂತಿತ್ತು. ಮೋಹನನು ಕಿಟಕಿಯಿಂದ ಹೊರಗೆ ನೋಡಿದನು. ನಿಲ್ದಾಣಕ್ಕೆ ಅತಿ ಸಮೀಪದಲ್ಲೆ ಒಂದು ದೊಡ್ಡ ಸಂತೆ ಸೇರಿತ್ತು. ಸಂತೆಯಲ್ಲಿ ನೂರಾರು ಜನರು ಸೇರಿದ್ದರು. ಮೋಹನನ ಕಣ್ಣಿಗೆ ಆ ಜನರು ಇರುವೆಗಳ ಗೂಡಿನಲ್ಲಿ ಇರುವೆಗಳು ಓಡಾಡುವಂತೆ ಕಂಡಿದ್ದರು. ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಅವರು ಓಡಾಡುತ್ತಿದ್ದರು. ಒಬ್ಬೊಬ್ಬರ ಮುಖದಲ್ಲಿಯೂ ಒಂದೊಂದು ವಿಧವಾದ ಭಾವನೆಗಳು ತೋರುತ್ತಿದ್ದವು. ಕೆಲವರು ಅವಸರ ಅವಸರವಾಗಿ ನಡೆಯುತ್ತಿದ್ದರು. ಕೆಲವರು ಗಡಿಬಿಡಿಯಲ್ಲಿ ಓಡಾಡುತ್ತಿದ್ದರು. ಮತ್ತೆ ಕೆಲವರು ನಿರಾಸಕ್ತರಾಗಿ ನಿಧಾನವಾಗಿ ಹೋಗುತ್ತಿದ್ದರು. ಕೆಲವರ ಮುಖದಲ್ಲಿ ಉತ್ಸಾಹ ಸಂತೋಷಗಳಿದ್ದರೆ, ಕೆಲವರ ಮುಖದಲ್ಲಿ ಕಳವಳ ವ್ಯಾಕುಲಗಳಿದ್ದವು. ಕೆಲವರಿಗೆ ಲಾಭ ಸಿಕ್ಕಿದ ಸಂತೋಷವಾಗಿದ್ದರೆ, ಮತ್ತೆ ಕೆಲವರಿಗೆ ನಷ್ಟ ಸಂಭವಿಸಿದ ದುಃಖವಾಗಿತ್ತು. ಮೋಹನನು ವಿಶ್ವವನ್ನೂ ಮಾನವ ಜೀವನವನ್ನೂ ಕುರಿತು ಯೋಚಿಸುತ್ತಿದ್ದನು. ಅವನ ವಿಚಾರಧಾರೆ ಈ ರೀತಿ ಹರಿದಿತ್ತು.

ಇರುವೆಗಳಿಗೂ ಮಾನವರಿಗೂ ಏನು ವ್ಯತ್ಯಾಸ? ಅನಂತವಾದ ಕಾಲದಲ್ಲಿ ಮಾನವರು ಕೆಲವು ವರ್ಷಗಳು ಬದುಕುತ್ತಾರೆ; ಇರುವೆಗಳು ಕೆಲವು ವಾರಗಳು ಬದುಕುತ್ತವೆ. ಮಾನವರು ಮನೆಗಳನ್ನು ಕಟ್ಟಿದರೆ ಇರುವೆಗಳು ಗೂಡುಗಳನ್ನು ನಿರ್ಮಿಸುತ್ತವೆ. ಮಾನವರು ಎಪ್ಪತ್ತು ಎಂಬತ್ತು ವರ್ಷಗಳ ಕಾಲ ಬದುಕಿ, ಅರೆವಾಸಿ ಕಾಲವನ್ನು ನಿದ್ರೆಯಲ್ಲಿ ಕಳೆದು, ಇನ್ನುಳಿದ ಕಾಲದಲ್ಲಿ ಬಹು ಭಾಗವನ್ನು ದ್ವೇಷ ಅಸೂಯೆಗಳ ಸಾಧನೆಗಾಗಿ ವ್ಯಯಮಾಡಿ, ರೋಗರುಜಿನಗಳಲ್ಲಿ ನರಳಿ, ಜಗತ್ತಿನಲ್ಲಿ ತಾವೇನೋ ಮಹತ್ಕಾರ್ಯಗಳನ್ನು ಸಾಧಿಸಿದೆವೆಂದು ಜಂಬದ ಕೋಳಿಗಳಂತೆ

ಮರೆಯುತ್ತಾರೆ. ತಮ್ಮ ಸಾಧನೆಗಳನ್ನು ಇತಿಹಾಸ, ಕತೆ, ಕಾದಂಬರಿಗಳಲ್ಲಿ ಬರೆದಿಡುತ್ತಾರೆ. ಇರುವೆಗಳಿಗೆ ಓದುಬರೆಹ ಬಂದಿದ್ದರೆ ಅವುಗಳೂ ತಮ್ಮ ಸಾಧನೆಗಳನ್ನು ಕತೆ ಕಾದಂಬರಿಗಳಲ್ಲಿ ಬರೆದಿಡುತ್ತಿದ್ದವು. ತಾವು ಬದುಕುವ ಅವಧಿಯನ್ನು ಒಂದು ಯುಗವೆಂದು ಕರೆಯುತ್ತಿದ್ದವು. ತಮ್ಮ ಪ್ರಣಯ ಕಥೆಗಳನ್ನು ಮನುಷ್ಯರಷ್ಟೇ ಸ್ವಾರಸ್ಯವಾಗಿ ಬರೆದಿಡುತ್ತಿದ್ದವು.

ಅಸಂಖ್ಯಾತ ಜೀವಿಗಳನ್ನೊಳಗೊಂಡ ಜೀವಸಾಗರದಲ್ಲಿ ಮಾನವ ಕುಟುಂಬ ವೊಂದು ಸಣ್ಣ ಅಲೆ. ಸಾಗರದ ಚಲನವಲನಗಳಿಂದ ಅಲೆಯು ಚಲಿಸುತ್ತದೆ. ಅಲೆ ಅದನ್ನು ಮರೆತು, ಸಾಗರದ ಚಲನವಲನಗಳನ್ನು ತಾನೇ ನಿರ್ದೇಶಿಸುತ್ತೇನೆಂದರೆ ಮೂರ್ಖತನ ವಾಗುತ್ತದೆ. ಮಾನವ ಜೀವನ ವಿಶ್ವಜೀವನದ ಒಂದು ಭಾಗ; ಮಾನವನಲ್ಲಡಗಿರುವ ಶಕ್ತಿ ವಿಶ್ವಶಕ್ತಿಯ ಒಂದು ಕಣ. ವಿಶ್ವಜೀವನದ ಹೃದಯ ಮಿಡಿದಾಗ ಮಾನವನ ಹೃದಯವೂ ಮಿಡಿಯುವುದು. ಒಂದು ದೃಷ್ಟಿಯಿಂದ ಮಾನವ ಒಂದು ಚಿಕ್ಕ ಪ್ರಾಣಿ; ಇನ್ನೊಂದು ದೃಷ್ಟಿಯಿಂದ ಅವನೊಬ್ಬ ಶ್ರೇಷ್ಠ ವ್ಯಕ್ತಿ. ಆತನಿಗೆ ತನ್ನ ಹಿಂದಿನ ಕತೆಯಾಗಲಿ ಮುಂದಿನ ಭವಿಷ್ಯವಾಗಲಿ ಗೊತ್ತಾಗುವಂತಿಲ್ಲ. ಯಾಕೆ ಹುಟ್ಟಿದೆನೆಂಬುದು, ಎಲ್ಲಿಂದ ಬಂದೆನೆಂಬುದು, ಎಲ್ಲಿಗೆ ಹೋಗುತ್ತೇನೆಂಬುದು ಒಂದು ಬಿಡಿಸಲಾಗದ ಒಗಟು. ಜಗತ್ತಿನಲ್ಲಿ ಮಾನವ ಸಂಸ್ಕೃತಿ ಆರಂಭವಾದಾಗಿನಿಂದ ಬುದ್ಧಿವಂತರಾದವರು ಈ ಒಗಟನ್ನು ಬಿಡಿಸುವ ಪ್ರಯತ್ನದಲ್ಲಿ ತೊಡಗಿ, ಜಗತ್ತಿನ ಮತ್ತು ಜೀವನದ ರಹಸ್ಯವನ್ನು ಭೇದಿಸಲು ಸತತವಾಗಿ ಶ್ರಮಿಸಿದ್ದಾರೆ. ಒಂದು ಕಡೆ ಯೋಗಿಗಳೂ, ಇನ್ನೊಂದು ಕಡೆ ತತ್ವ ಜ್ಞಾನಿಗಳೂ, ಮತ್ತೊಂದು ಕಡೆ ವಿಜ್ಞಾನಿಗಳೂ ಈ ಕೆಲಸದಲ್ಲಿ ತೊಡಗಿದ್ದಾರೆ. ಆದರೆ ಸಾವು ಬಾಳಿನ ಗುಟ್ಟು ಇನ್ನೂ ರಟ್ಟಾಗಲಿಲ್ಲ. ಮಾನವರು ತಮ್ಮ ಸುಖಕ್ಕಾಗಿ ಪ್ರಕೃತಿಯನ್ನು ಜಯಿಸುವ ಕಾರ್ಯದಲ್ಲಿ ತೊಡಗಿದ್ದಾರೆ. ಬಾಹ್ಯ ಪ್ರಕೃತಿಯನ್ನು ಗೆಲ್ಲಲು ಅಸಮರ್ಥರಾಗಿದ್ದಾರೆ. ದೇವರಿದ್ದಾನೆಯೋ ಇಲ್ಲವೋ, ಎಂಬುದು ನನಗಿನ್ನೂ ತೊಡಕಿನ ಪ್ರಶ್ನೆಯಾಗಿಯೇ ಉಳಿದಿದೆ. ದೇವರಿರುವುದು ನಿಜವಾದರೆ, ನ್ಯಾಯಾನ್ಯಾಯಗಳ ವಿಮರ್ಶೆ ಅವನ ಕೈಯಲ್ಲಿದ್ದರೆ, ಮಾನವರಿಗೆ ಸಹಾಯ ಮಾಡುವ ಶಕ್ತಿಯನ್ನು ಅವನು ಉಳಿಸಿಕೊಂಡಿದ್ದರೆ, ಸಾತ್ವಿಕ ಶಿರೋಮಣಿಯಾದ ನನ್ನ ತಂದೆ ಸಿದ್ದಣ್ಣನಿಗೆ ಆ ದೇವರು ಯಾತಕ್ಕೆ ಸಹಾಯ ಮಾಡಲಿಲ್ಲ? ಒಮ್ಮೊಮ್ಮೆ ಯೋಚಿಸಿದರೆ ದೇವರೆಂಬ ವ್ಯಕ್ತಿ, ಬುದ್ಧಿವಂತರಾದವರು ದಡ್ಡರನ್ನು ಆಳುವ ಸಲುವಾಗಿ ನಿರ್ಮಿಸಿಕೊಂಡಿರುವ ಕಲ್ಪನೆಯ ಸಾಧನವೆಂದೆನಿಸುತ್ತದೆ. ಮತ್ತೊಮ್ಮೆ ಯೋಚಿಸಿದರೆ, ಮಾನವನಿಗಿಂತ ಮಿಗಿಲಾದ ಶಕ್ತಿ ಯಾವುದೋ ಇರಬೇಕೆಂದೆನಿಸುತ್ತದೆ. ಒಮ್ಮೊಮ್ಮೆ, ಜೀವನದಲ್ಲಿ ನಿರಾಶೆಯ ಕಾರ್ಗತ್ತಲು ಕವಿದಾಗ, ಸುತ್ತಮುತ್ತಲಿದ್ದ ನಮ್ಮವರೆಂದೆನಿಸಿ ಕೊಂಡವರು ನಮ್ಮನ್ನು ಸಂಪೂರ್ಣ ಕೈ ಬಿಟ್ಟಾಗ ನಮ್ಮ ಸಹಾಯಕ್ಕೆ ಬರತಕ್ಕ ಯಾವೂದೋ ಒಂದು ಅಗೋಚರ ಶಕ್ತಿ ಇದೆ ಎಂದು ನಮಗೆನಿಸುತ್ತದೆ; ಆ ಅಗೋಚರ ಶಕ್ತಿಯೇ ದೇವರಾಗಿರಬೇಕು."

ಮೋಹನನು ಯೋಚಿಸುತ್ತಾ, ನಿದ್ರೆಮಾಡಿದನು. ದೀರ್ಘಕಾಲದ ಸೆರೆಮನೆಯ ಬಂಧನದಿಂದ ಮುಕ್ತನಾಗಿ ಹೊರಗೆ ಬಂದಿದ್ದ ಅವನಿಗೆ ಏನೋ ಒಂದು ವಿಧವಾದ

ಶಾಂತಿ ಲಭಿಸಿತ್ತು. ರಾತ್ರಿ ಊಟಕ್ಕೂ ಏಳದೆ ನಿದ್ರೆ ಮಾಡಿದ್ದನು. ಬೆಳಿಗ್ಗೆ ಪವಿತ್ರಪುರದಲ್ಲಿ ರೈಲು ನಿಂತಾಗ ಎಚ್ಚರಗೊಂಡನು. ಪವಿತ್ರಪುರದ ನಾಗರಿಕರಿಗೆ ಸತ್ಯಾಗ್ರಹಿಗಳು ಬರುತ್ತಾರೆಂಬ ವಿಚಾರ ಮೊದಲೇ ಗೊತ್ತಿತ್ತು. ಸತ್ಯಾಗ್ರಹಿಗಳ ಸ್ವಾಗತಕ್ಕೋಸ್ಕರ ಪುರಪ್ರಮುಖರೂ, ತಾಲ್ಲೂಕು ಪ್ರಮುಖರೂ ಸೇರಿ ವೈಭವಯುತವಾದ ಏರ್ಪಾಡನ್ನು ಮಾಡಿಕೊಂಡಿದ್ದರು. ಸಾಹುಕಾರ ನಾಗೇಂದ್ರನ ಅಧ್ಯಕ್ಷತೆಯಲ್ಲಿ ಒಂದು ಸ್ವಾಗತ ಸಮಿತಿಯನ್ನೂ ಸಹ ರಚಿಸಿಕೊಂಡಿದ್ದನು. ರೈಲ್ವೆನಿಲ್ದಾಣದಲ್ಲಿ ನಾಗೇಂದ್ರನೂ, ಅವನ ಸ್ನೇಹಿತ ರಂಗನಾಥನೂ, ಪವಿತ್ರಪುರದ ನಗರಸಭೆ ಅಧ್ಯಕ್ಷರೂ ಇನ್ನೂ ಅನೇಕ ಗಣ್ಯ ಮಹನೀಯರೂ ಹಾಜರಿದ್ದು ಸತ್ಯಾಗ್ರಹಿಗಳನ್ನು ಸ್ವಾಗತಿಸಿದರು. ಸತ್ಯಾಗ್ರಹಿಗಳಿಗೆ ಹಾರಗಳನ್ನರ್ಪಿಸಿ ವಾದ್ಯ ಘೋಷಣೆಗಳೊಡನೆ ಅವರನ್ನು ಊರಿನ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿದರು.

ಮೆರವಣಿಗೆ ಮುಗಿದ ನಂತರ ಝಂಡಾ ಮೈದಾನದಲ್ಲಿ ಭಾರಿ ಬಹಿರಂಗ ಸಭೆಯೊಂದು ಸೇರಿತ್ತು. ಸಭೆಯನ್ನು ಕುರಿತು ಕಾಂಗ್ರೆಸ್ ನಾಯಕನಾದ ಮೋಹನನೂ ಇತರ ಪ್ರಮುಖರೂ ಮಾತನಾಡುತ್ತಾರೆಂದೂ ಸಾಹುಕಾರ್ ನಾಗೇಂದ್ರನು ಅಧ್ಯಕ್ಷತೆ ವಹಿಸುತ್ತಾನೆಂದೂ ಮೊದಲೇ ಹಸ್ತ ಪತ್ರಿಕೆಗಳ ಮೂಲಕ ಪ್ರಸಿದ್ಧಿಪಡಿಸಲಾಗಿತ್ತು. ಸಭೆ ನಡೆಯುವ ಸ್ಥಳಕ್ಕೆ ಹೋಗಿ, ವೇದಿಕೆಯ ಮೇಲೆ ಕುಳಿತಿದ್ದ ಕೆಲವರನ್ನು ನೋಡಿ ಮೋಹನನಿಗೆ ಆಶ್ಚರ್ಯವಾಗದೆ ಇರಲಿಲ್ಲ. "ನಿನ್ನೆಯವರೆಗೂ ದೇಶದ್ರೋಹಿಗಳಾಗಿದ್ದವರು ಇಂದು ದೇಶಭಕ್ತರಂತೆ ನಟಿಸುತ್ತಿದ್ದಾರೆ" ಎಂದು ಮನಸ್ಸಿನಲ್ಲೇ ಅಂದುಕೊಂಡನು. ವೇದಿಕೆಯ ಮೇಲೆ ಸಭಾಧ್ಯಕ್ಷನಾದ ನಾಗೇಂದ್ರನ ಜೊತೆಗೆ ರಂಗನಾಥನೂ, ನೀಲೇಗೌಡನೂ, ಸಣ್ಣೇಗೌಡನೂ ಕುಳಿತಿದ್ದರು. ಕಲ್ಲಪ್ಪನು ದೊಡ್ಡ ನಾಯಕನಂತೆ ನಾಗೇಂದ್ರನ ಪಕ್ಕದಲ್ಲೇ ಕುಳಿತ್ತಿದ್ದನು. ಮೋಹನನನ್ನು ಕಂಡೊಡನೆ ಅಲ್ಲಿದ್ದ ಪ್ರಮುಖ ವ್ಯಕ್ತಿಗಳೆಲ್ಲರೂ ಒಬ್ಬರೊಬ್ಬರಾಗಿ ಅವನ ಕ್ಷೇಮ ಸಮಾಚಾರವನ್ನು ವಿಚಾರಿಸಿದರು. ನಾಗೇಂದ್ರನು ಬಹುಕಾಲದ ಹಳೆಯ ಸ್ನೇಹಿತನಂತೆ ಮೋಹನನೊಡನೆ ಸಂಭಾಷಣೆ ನಡೆಸಿದ್ದನು. ರಂಗನಾಥನು ಹರುಕು ಮುರುಕು ಇಂಗ್ಲೀಷಿನಲ್ಲಿ ಮೋಹನನೊಡನೆ ಮಾತುಕತೆ ನಡೆಸಿದನು. ಮೋಹನನನ್ನು ನೋಡಿ ಬಹಳ ಸಂತೋಷವಾಯಿತೆಂದನು. ತಾನೂ ಕಾಂಗ್ರೆಸ್ಸಿಗೆ ಸೇರಲಿಚ್ಛಿಸುವುದಾಗಿ ತಿಳಿಸಿದನು.

ಪಟೇಲ್ ನೀಲೇಗೌಡನು ಮೋಹನನನ್ನು ಕುರಿತು "ನೋಡ್ ಮೋಹ್ನಾ ನಿನ್ನಪ್ಗೆ ಜೈಲೀಗೆ ಹೋಗೂದು ಬೇಡ ಅಂತ ನಾ ಹೇಳ್ದೆ. ನನ್ಮಾತು ಕೇಳ್ದೆ ಹೋದ. ಅವ ಜೈಲಾಗೆ ಸತ್ತದ್ದು ನಮ್ಗೆಲ್ಲಾ ವ್ಯಥೆ. ನಿನ್ನವ್ವ ಮನೇಲೆ ಇರಬಹುದಾಗಿತ್ತು. ಪುಸಕ್ಕನೆ ತೌರು ಮನೀಗೆ ಹೊರಟು ಹೋದರು. ನಿನ್ನ ಭೂಮಿಮನೆ ಹಾಳಾಗೋದನ್ನ ಕಣ್ಣಿಂದ ನೋಡ್ಲಾರ್ದೆ ಭೂಮೀನ ನಾ ಸಾಗುಮಾಡ್ತಾಇದ್ದೀನಿ, ನಿನ್ಮನೇಲಿ ಗಟ್ಟದ ಆಳು ಇಟ್ಟೀನಿ. ಮನೆ ಕ್ಲೀನಾಗಿ ಇಟ್ಟಾರೆ" ಎಂದನು.

"ಆಗಲಿ ಕಲ್ಲಪ್ಪ, ಬಹಳ ಸಂತೋಷ, ನಿಮಗೆ ನಾ ಬಹಳ ಋಣಿಯಾಗಿದ್ದೇನೆ" ಎಂದು ಮೋಹನನು ನುಡಿದನು.

ಸಂಕಪೂಜಾರಿಯು ಮೋಹನನಲ್ಲಿಗೆ ಬಂದು “ವಡೀನೆ ನನ್ ಗುರ್ತಿಲ್ಯೆ. ನಾ ಸಂಕನಲ್ದೆ? ಹತ್ಕಾಲ್ದಿಂದ ಮರಕಟ್ಟು ಕೆಲ್ಸಮಾಡ್ತೆ. ಈಗ ಕಳ್ಳಂಗಡಿ ಕಂತ್ರಾಟು ಮಾಡ್ತೆ. ಇವ ನನ್ಮಗ ಚೀಂಕ್ರ. ನಿಮ್ಮನ್ನ ಕಾಂಬ್ಕೆ. ಗಾಂಧಿ ತೋಪಿ ಬೇಕು ಅಂದ. ಒಂದು ತೋಪಿ ತಂದುಕೊಟ್ಟೆ. ಗಡ ಚೀಂಕ್ರ ವಡೇನಿಗೆ ಕಾಲೀಗ್ ಬೀಳೋ” ಎಂದನು.

ಸಭೆಯ ಕಾರ್ಯಕಲಾಪಗಳ ಆರಂಭವಾದನಂತರ ಸಭೆಯನ್ನು ಕುರಿತು ಕಲ್ಲಪ್ಪ, ಮೂರ್ತಿ, ಮೋಹನ ಮುಂತಾದವರು ಭಾಷಣಮಾಡಿದರು. ಕಲ್ಲಪ್ಪನು ತಾನೊಬ್ಬ ಹಿರಿಯ ನಾಯಕನೆನ್ನುವ ರೀತಿಯಲ್ಲಿ ಸತ್ಯ, ಅಹಿಂಸೆ, ದೇಶಾಭಿಮಾನ ಮುಂತಾದ ವಿಷಯಗಳನ್ನು ಕುರಿತು ಮಾತನಾಡಿದನು. ಮೋಹನನು ತನ್ನ ಭಾಷಣದಲ್ಲಿ ಸ್ವರಾಜ್ಯದ ಮಹತ್ವವನ್ನೂ ಮಹಾಜನರ ಜವಾಬ್ದಾರಿಯನ್ನೂ ಗಾಂಧೀಜೀಯವರ ಉಪದೇಶವನ್ನೂ ಪ್ರಸ್ತಾಪಿಸಿ ಮಾತನಾಡಿದನು. ಮೂರ್ತಿಯು ಕೂಡ ಅದೇ ಧಾಟಿಯಲ್ಲಿ ಮಾತನಾಡಿದನು. ನಾಗೇಂದ್ರನು ತನ್ನ ಅಧ್ಯಕ್ಷಭಾಷಣದಲ್ಲಿ ಬಡ ಬಗ್ಗರ ಉದ್ಧಾರ, ಸತ್ಯ ಅಹಿಂಸೆಗಳ ಅವಶ್ಯಕತೆ ಮುಂತಾದುವುಗಳನ್ನು ಕುರಿತು ಮಾತನಾಡಿದುದಲ್ಲದೆ, ಚಳವಳಿ ಕಾಲದಲ್ಲಿ ತಾನೂ, ತನ್ನ ಸ್ನೇಹಿತರಾದ ರಂಗನಾಥ, ನೀಲೇಗೌಡ, ಸಣ್ಣೇಗೌಡ ಮುಂತಾದವರೂ, ಸೆರೆಮನೆಗೆ ಹೋಗದಿದ್ದರೂ ಹೊರಗಡೆ ಇದ್ದುಕೊಂಡೇ ಸತ್ಯಾಗ್ರಹಕ್ಕೆ ನಾನಾ ರೀತಿಯಲ್ಲಿ ಪ್ರೋತ್ಸಾಹ ನೀಡಿದ್ದುದಾಗಿ ಹೇಳಿದನು. ಮುಗ್ಧರಾದ ಸಭಿಕರಿಂದ ನಾಗೇಂದ್ರನ ಮಾತುಗಳಿಗೂ ಚಪ್ಪಾಳೆಗಳು ಬಿದ್ದವು. ಆತನ ಭಾಷಣವು ನಿಜವಾದ ದೇಶಭಕ್ತರ ಭಾಷಣವನ್ನು ಮೀರಿಸುವಂತಿತ್ತು. ಸಭೆ ಮುಗಿದನಂತರ ಮೋಹನನು ತಾಯಿಯನ್ನು ನೋಡುವ ಸಲುವಾಗಿ ಅಮೃತೂರಿಗೆ ಹೋಗಲು ಉದ್ಯುಕ್ತನಾದನು. ಆದರೆ ಅಲ್ಲಿ ನೆರೆದಿದ್ದ ಜನಸ್ತೋಮ ಅವನನ್ನು ಅಷ್ಟು ಸುಲಭವಾಗಿ ಬೀಳ್ಕೊಡಲು ಸಿದ್ಧವಾಗಿರಲಿಲ್ಲ. ಜನಸಾಮಾನ್ಯರು ಅವನನ್ನು ತಮ್ಮ ಭಾವೀ ನಾಯಕನೆಂದು ಆಗಲೇ ಗೊತ್ತುಮಾಡಿಕೊಂಡಿದ್ದರು. ಜನರು ತಂಡೋಪತಂಡವಾಗಿ ಅವನ ಬಳಿಗೆ ಬಂದು ಅವನಿಗೆ ಗೌರವವನ್ನು ಸಲ್ಲಿಸಿದರು. ಜನಸಮೂಹ ಚದರಿದನಂತರ ಮೋಹನನು ಕರಿಯಪ್ಪನೊಡನೆ ಅಮೃತೂರಿಗೆ ಹೊರಟನು. ಅಮೃತೂರಿನ ಜನರು ಅವನನ್ನು ನೋಡಿದೊಡನೆ ಪೂರ್ವ ಸಿದ್ಧತೆಯನ್ನೇನೂ ಮಾಡಿರದಿದ್ದರೂ ಅವನಿಗಾಗಿ ಭಾರಿ ಸ್ವಾಗತವನ್ನೇರ್ಪಡಿಸಿದ್ದರು. ಅವನನ್ನು ಊರಿನಲ್ಲಿ ಮೆರವಣಿಗೆ ಮಾಡಿಸುವ ವ್ಯವಸ್ಥೆ ಮಾಡಿದರು. ಅಷ್ಟರಲ್ಲಿ ಚೆನ್ನಮ್ಮನಿಗೆ ತನ್ನ ಮಗನು ಬಂದಿರುವ ವಿಚಾರವು ಗೊತ್ತಾಗಿ, ಮಗನ ಮೆರವಣಿಗೆಯನ್ನು ನೋಡಲು ಅವಳು ರಸ್ತೆಯಲ್ಲಿ ಕಾದಿದ್ದಳು. ಮೆರವಣಿಗೆ ತಾನಿದ್ದಕಡೆಗೆ ಬರುತ್ತಿದಂತೆಯೇ ಆಕೆಯ ಕಣ್ಣುಗಳಲ್ಲಿ ಆನಂದಭಾಷ್ಪವು ಉದುರುತ್ತಿತ್ತು. ಗಂಡನ ಮರಣದ ದುಃಖವೂ ಕೂಡ ಅವಳಿಗೆ ಮರೆತುಹೋಯಿತು. ತಾನಿಷ್ಟುಕಾಲ ಕಷ್ಟಪಟ್ಟಿದ್ದೂ ದುಃಖಪಟ್ಟಿದ್ದೂ ಸಾರ್ಥಕವಾಯಿತೆಂದುಕೊಂಡಳು. ಮೋಹನನು ಅವಳ ಹತ್ತಿರ ಬಂದವನೇ ಅವಳ ಕಾಲಿಗೆ ಬಿದ್ದು ಬಿಕ್ಕಿ ಬಿಕ್ಕಿ ಅತ್ತನು. ಚೆನ್ನಮ್ಮನು ಅವನನ್ನು ಅಪ್ಪಿಕೊಂಡು ಅತ್ತಳು. ತಾಯಿಯ ಆಲಿಂಗನದಿಂದ ಮೋಹನನಿಗೆ ಹೊಸ ಶಕ್ತಿಯು

ಬಂದಂತಾಯಿತು. ತಂದೆಯ ಮರಣದಿಂದ ವಿಚಾರವನ್ನಾಗಲಿ, ಗೃಹಕೃತ್ಯದ ವಿಚಾರವನ್ನಾಗಲಿ, ಮಾತನಾಡುವಷ್ಟು ಅವಕಾಶ ಅವನಿಗಿರಲಿಲ್ಲ. ಯಾಕೆಂದರೆ ಮೆರವಣಿಗೆ ಮುಂದೆ ಸಾಗಬೇಕಾಗಿತ್ತು. ಮೆರವಣಿಗೆ ಮತ್ತು ಅನಂತರ ನಡೆದ ಸಭೆಯ ಕಾರ್ಯಕಲಾಪಗಳು ಮುಗಿದನಂತರ ಮೋಹನನು ತನ್ನ ಸೋದರಮಾವನ ಮನೆಗೆ ಹೋಗಿ ತಂಗಿದನು. ತಾಯಿಯೊಡನೆ ಬಹಳಹೊತ್ತು ಮಾತನಾಡಿದನು. ಸಿದ್ದಣ್ಣನನ್ನು ಸ್ಮರಿಸಿ ಇಬ್ಬರೂ ಅತ್ತರು. ಕೆಲವು ದಿನಗಳನಂತರ ಪಂಜರವಳ್ಳಿಗೆ ಹೋಗಿ ನೆಲಸಿದರು. ನೀಲೇಗೌಡನ ಆಳುಗಳು ಮೋಹನನ ಮನೆಯನ್ನು ಹಾಳುಮಾಡಿದ್ದರು. ಭೂಮಿ ಅರೂಪಾಗಿತ್ತು. ಜೊತೆಗೆ ನಾಗೇಂದ್ರನಿಗೆ ಸಲ್ಲಬೇಕಾಗಿದ್ದ ಒಂದು ವರ್ಷದ ಗೇಣಿಯೂ ಸಹ ಬಾಕಿಯಾಗಿತ್ತು. ತಾಯಿ ಮಕ್ಕಳಿಬ್ಬರೂ ಜೀವನದಲ್ಲಿ ಹೊಸದೊಂದು ಅಧ್ಯಾಯವನ್ನು ಆರಂಭಿಸಿದರು.

# ೯. ಒಂಬತ್ತು ವರ್ಷಗಳ ನಂತರ

ಮಹಾತ್ಮ ಗಾಂಧೀಜಿಯವರ ಕೃಪೆಯಿಂದ ಹಿಂದೂಸ್ಥಾನವು ಸ್ವತಂತ್ರವಾಗಿ ಒಂಬತ್ತು ವರ್ಷಗಳು ಗತಿಸಿದ್ದವು. ಒಂಬತ್ತು ವರ್ಷಗಳ ಅವಧಿಯಲ್ಲಿ ಸ್ವತಂತ್ರ ಭಾರತವು ಪ್ರಗತಿಯ ಮಾರ್ಗದಲ್ಲಿ ಅಡಿಯಿಟ್ಟಿದ್ದಿತು. ಕಾಂಗ್ರೆಸ್ ಮುಖಂಡರು ಹರಿದು ಹಂಚಿಹೋಗಿದ್ದ ಭಾರತವನ್ನು ಒಂದು ಗೂಡಿಸಿ, ಹೊಸರಾಜ್ಯ ವ್ಯವಸ್ಥೆಯನ್ನು ರೂಪಿಸಿ, ಪ್ರಜಾಪ್ರಭುತ್ವದ ರೀತಿ ನೀತಿಗಳಿಂದ ರಾಷ್ಟ್ರದ ಪುನರ್ ನಿರ್ಮಾಣದ ಕಾರ್ಯದಲ್ಲಿ ತೊಡಗಿದ್ದರು. ಜನರ ಪ್ರತಿನಿಧಿಗಳು ದೇಶದ ಆಡಳಿತ ಸೂತ್ರವನ್ನು ವಹಿಸಿ, ಆಗುಹೋಗುಗಳನ್ನು ನಿರ್ಧರಿಸುತ್ತಿದ್ದರು. ದೇಶದಾದ್ಯಂತ ಅಸಂಖ್ಯಾತ ಅಭಿವೃದ್ಧಿ ಕಾರ್ಯಗಳು ನಡೆದಿದ್ದವು. ರೈತರು, ಕೂಲಿಗಾರರು, ಹರಿಜನರು ಮುಂತಾದ ಹಿಂದುಳಿದ ಜನರ ರಕ್ಷಣೆಗಾಗಿ ಹಲವು ಉಪಯುಕ್ತವಾದ ಕಾನೂನುಗಳೂ, ಸುಧಾರಣೆಗಳೂ ಜಾರಿಗೆ ಬಂದಿದ್ದವು. ಭಾರತದ ಮಹಾ ಪ್ರಧಾನಿಗಳೂ ಇತರ ಕಾಂಗ್ರೆಸ್ ನಾಯಕರೂ ನಮ್ಮ ದೇಶದ ಕಲ್ಯಾಣಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದ್ದರು. ಜಗತ್ತಿನ ಇತರ ರಾಷ್ಟ್ರಗಳ ಜನರು ಅಚ್ಚರಿಗೊಳ್ಳುವ ರೀತಿಯಲ್ಲಿ ದೇಶ ಮುಂದುವರಿದಿತ್ತು. ದೇಶದಲ್ಲಿ ಆಗಿದ್ದ ಪ್ರಗತಿಯನ್ನು ಕಂಡು ನೆರೆಹೊರೆಯ ರಾಷ್ಟ್ರಗಳ ಜನರು ಅಸೂಯೆಪಡುತ್ತಿದ್ದರು. ಅಂತರರಾಷ್ಟ್ರೀಯ ರಾಜಕಾರಣದಲ್ಲಿ ಭಾರತವು ವಹಿಸಿದ್ದ ಪಾತ್ರ ಅಭಿನಂದನೀಯವಾಗಿತ್ತು.

ಸ್ವಾತಂತ್ರ್ಯ ಲಭಿಸಿದ ನಂತರ ಒಂಬತ್ತು ವರ್ಷಗಳ ಅವಧಿಯಲ್ಲಿ ಪವಿತ್ರಪುರ ತಾಲ್ಲೂಕಿನಲ್ಲಿಯೂ ಹಲವು ಅಭಿವೃದ್ಧಿ ಕಾರ್ಯಗಳು ನಡೆದಿದ್ದವು. ಗೇಣಿಯ ಶಾಸನವೂ, ಪಾನನಿರೋಧವೂ ಆ ತಾಲ್ಲೂಕಿನಲ್ಲಿ ಜಾರಿಗೆ ಬಂದಿದ್ದವು. ಮೋಹನನು ಪವಿತ್ರಪುರ ತಾಲ್ಲೂಕಿನ ನಿಜವಾದ ನಾಯಕನಾಗಿ ಬಡಬಗ್ಗರ ಉದ್ಧಾರಕ್ಕಾಗಿ ಹಗಲಿರುಳೂ ಶ್ರಮಿಸುತ್ತಿದ್ದನು. ರೈತನ ಮತ್ತು ಕಾರ್ಮಿಕರ ರಕ್ಷಣೆಗಾಗಿ ಸದಾ ಹೋರಾಟ ನಡೆಸುತ್ತಿದ್ದನು. ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾಗಿ ಶಾಸನ ಸಭೆಯ ಸದಸ್ಯನಾಗಿ ನಿಜವಾದ ಗಾಂಧೀಭಕ್ತನಾಗಿ ಜೀವನವನ್ನು ನಡೆಸುತ್ತಿದ್ದನು. ಬಡಬಗ್ಗರ ಪಕ್ಷಪಾತಿಯಾಗಿದ್ದುದರಿಂದ ಕೆಲವರು ಶ್ರೀಮಂತರಿಗೆ ಅವನ ಮೇಲೆ ಸ್ವಾಭಾವಿಕವಾಗಿ ಅಸಮಾಧಾನವಿತ್ತು. ಕೆಲವರು ಭೂಮಾಲೀಕರು ಅವರ ಗೇಣಿದಾರರನ್ನು ಅಕ್ರಮವಾಗಿ ಉಚ್ಚಾಟನೆ ಮಾಡುತ್ತಿದ್ದರು. ಮೋಹನನು ಅಂತಹ ಗೇಣಿದಾರರಿಗೆ ರಕ್ಷಣೆ ನೀಡುವ ಕಾರ್ಯದಲ್ಲಿ ಸದಾ ನಿರತನಾಗಿರುತ್ತಿದ್ದನು. ತಮ್ಮ ಅಕ್ರಮ ವ್ಯವಹಾರಗಳಿಗೆ ಅವನು ಅಡ್ಡಿ ಆತಂಕಗಳನ್ನು ತಂದೊಡ್ಡುತ್ತಾನೆಂಬ ಕಾರಣದಿಂದ ಕೆಲವರು ಮಾಲೀಕರೂ, ಪವಿತ್ರಪುರದ ಮಠಾಧಿಪತಿಗಳೂ ಮೋಹನನ ಮೇಲೆ ಕುಪಿತರಾಗಿದ್ದರು.

ಸ್ವರಾಜ್ಯಕ್ಕೆ ಪೂರ್ವ ಯಾರಾರು ಕಂಟ್ರಾಕ್ಟು, ಪರ್ಮಿಟ್ಟು ಮುಂತಾದ ವಿಶೇಷ ಸವಲತ್ತುಗಳಿಗಾಗಿ ಅಂದಿದ್ದ ಆಡಳಿತಗಾರರನ್ನು ಆಶ್ರಯಿಸಿಕೊಂಡಿದ್ದರೋ, ಅವರೆಲ್ಲರೂ ಸ್ವರಾಜ್ಯ ಬಂದನಂತರ ಕಾಂಗ್ರೆಸ್ಸಿನ ಹಿತೈಷಿಗಳಂತೆ ನಟಿಸುತ್ತ ಹೊಸ ಆಡಳಿತಗಾರರನ್ನು ಆಶ್ರಯಿಸಲಾರಂಭಿಸಿದರು. ಅವರಲ್ಲಿ ಕೆಲವರು ಕಾಲಕ್ರಮೇಣ ಕಾಂಗ್ರೆಸ್ ಸದಸ್ಯರಾದರು. ಪವಿತ್ರಪುರ ತಾಲ್ಲೂಕಿನಲ್ಲಿ ಆಂಗ್ಲೇಯರ ಬಾಲಬಡುಕರಂತಿದ್ದ ರಂಗನಾಥ, ನಾಗೇಂದ್ರ, ನೀಲೇಗೌಡ, ಸಣ್ಣೇಗೌಡ ಮುಂತಾದವರು ಸ್ವರಾಜ್ಯ ಬಂದನಂತರ ಕಾಂಗ್ರೆಸ್ಸಿಗೆ ಸೇರಿ, ಶುದ್ಧ ಖಾದಿಧಾರಿಗಳಾದರು. ಎಂಟು ದಿನಗಳ ಕಾಲ ಸೆರೆಮನೆಯಸವಿಯನ್ನುಂಡಿದ್ದ ಕಲ್ಲಪ್ಪನು ರಂಗನಾಥನ ಸಹಾಯದಿಂದ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಸದಸ್ಯನಾಗಿ, ಎರಡು ವರ್ಷಗಳಿಂದೀಚೆಗೆ ಆ ಸಮಿತಿಯ ಕಾರ್ಯದರ್ಶಿಯಾಗಿದ್ದನು. ನಾಗೇಂದ್ರನೂ, ರಂಗನಾಥನೂ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿದ್ದರು. ಪವಿತ್ರಪುರದಲ್ಲಿ ಪಾನ ವಿರೋಧ ಜಾರಿಗೆ ಬಂದನಂತರ ಸೇಂದಿ ಕಂಟ್ರಾಕ್ಟರ್ ಸಂಕಪೂಜಾರಿಯೂ ಸಹ ಕಾಂಗ್ರೆಸ್ ಸದಸ್ಯನಾಗಿದ್ದನು. ಒಂದೆರಡು ವರ್ಷಗಳಿಂದ ತಾಲ್ಲೂಕ್ ಕಾಂಗ್ರೆಸ್ ಸಮಿತಿಯಲ್ಲಿ ಮೋಹನನ ಕಡೆಯವರಿಗೂ ರಂಗನಾಥನ ಕಡೆಯವರಿಗೂ ತಿಕ್ಕಾಟ ಪ್ರಾರಂಭವಾಗಿತ್ತು. ಆದರೆ ಸಮಿತಿಯಲ್ಲಿ ಮೋಹನನ ಕಡೆಯವರೇ ಹೆಚ್ಚಾಗಿದ್ದುದರಿಂದ ರಂಗನಾಥ ಮತ್ತು ಅವನ ಸ್ನೇಹಿತರ ಕೈವಾಡ ಅಷ್ಟಾಗಿ ನಡೆಯುತ್ತಿರಲಿಲ್ಲ. ಸ್ವರಾಜ್ಯ ಬಂದನಂತರ ಹಲವರು ಒಳ್ಳೆಯ ವ್ಯಕ್ತಿಗಳೂ ಕಾಂಗ್ರೆಸ್ಸಿಗೆ ಸೇರಿದರು. ಅವರೆಲ್ಲರೂ ಮೋಹನನ್ನು ಮೆಚ್ಚಿಕೊಂಡಿದ್ದರು. ಆದರೆ ರಂಗನಾಥ ಮತ್ತು ಆತನ ಹಿಂಬಾಲಕರಾಗಿದ್ದ ದುಷ್ಟ ಜನರಿಗೆ ಮೋಹನನ್ನು ಕಂಡರಾಗುತ್ತಿರಲಿಲ್ಲ. ಪವಿತ್ರಪುರ ತಾಲ್ಲೂಕಿನ ಕಾಂಗ್ರೆಸ್ ರಾಜಕಾರಣದಲ್ಲಿ ಮೋಹನನ ಪ್ರಾಬಲ್ಯವನ್ನು ಯಾವ ರೀತಿ ಕಡಿಮೆ ಮಾಡಬಹುದೆಂಬುದನ್ನು ಈ ದುಷ್ಟ ಶಕ್ತಿಗಳು ಸದಾ ಯೋಚಿಸುತ್ತಿದ್ದವು. ಮೋಹನನ ಪ್ರಭಾವ ಕಡಿಮೆಯಾದ ಹೊರತು ತಾಲ್ಲೂಕಿನಲ್ಲಿ ತಮ್ಮ ಪ್ರಭಾವ ಬೆಳೆಯುವುದಿಲ್ಲ ವೆಂಬುದನ್ನು ಅವರು ಮನಗಂಡಿದ್ದರು. ತಮ್ಮ ರಾಜಕಾರಣದ ಹೆದ್ದಾರಿಯಲ್ಲಿ ಮೋಹನನು ಒಂದು ಮುಳ್ಳಿನಂತಿದ್ದಾನೆಂದು ಅವರು ಭಾವಿಸಿದ್ದರು. ಆ ಮುಳ್ಳನ್ನು ಹೇಗಾದರೂ ಕಿತ್ತು ಬಿಸುಡಬೇಕೆಂಬುದೇ ಅವರ ಗುರಿಯಾಗಿದ್ದಿತು. ತಾಲ್ಲೂಕಿನಲ್ಲಿ ಶ್ರೀಮಂತರನೇಕ ರೆದುರು ಸಾಮಾನ್ಯ ರೈತ ಮಗನೊಬ್ಬನು ಪ್ರಬುದ್ಧಮಾನಕ್ಕೆ ಬರುವುದು ಅವರಿಗೆ ಸರಿಯೆನಿಸಲಿಲ್ಲ. ಶೀತೂರು ಕಲ್ಲಪ್ಪನಿಗೆ ತಾನು ಬುದ್ಧಿವಂತಿಕೆಯಲ್ಲಿ ಮೋಹನನಿಗಿಂತ ಕಡಿಮೆಯಲ್ಲವೆಂಬ ಭಾವನೆಯಿತ್ತು. ಪಂಜರವಳ್ಳಿಯ ನೀಲೇಗೌಡನಿಗೆ ದಾಯಾದಿ ಮಾತ್ಸರ್ಯವಿತ್ತು. ರಂಗನಾಥನಿಗೂ ಸಣ್ಣೇಗೌಡನಿಗೂ, ಆಗರ್ಭ ಶ್ರೀಮಂತರಾದ ತಮ್ಮಿಬ್ಬರೆದುರು ಬಡವನಾದ ಮೋಹನನು ಮೆರೆಯುವುದು ನಾಚಿಕೆಗೇಡೆಸಿತು.

ದಿನೇ ದಿನೇ ರಂಗನಾಥನಿಗೂ ಅವನ ಸ್ನೇಹಿತರಿಗೂ ಮೋಹನನ ಮೇಲೆ ಅಸಮಾಧಾನ ಮತ್ತು ಅಸೂಯೆಗಳು ಹೆಚ್ಚಾಗುತ್ತಾ ಬಂದುವು. ಅಸೂಯೆ ಮತ್ತು ಅತೃಪ್ತಿಯಿಂದ ಅಸಮಾಧಾನ ಹೊಂದಿದ ರಾಜಕಾರಣದುರಂಧರರೆಲ್ಲರೂ ಸೇರಿ

ರಂಗನಾಥನ ಮುಖಂಡತ್ವದಲ್ಲಿ ಮೋಹನನ ವಿರುದ್ಧ ಒಂದು ಕೂಟವನ್ನು ನಿರ್ಮಿಸಿಕೊಂಡರು. ಆ ಕೂಟದಲ್ಲಿ ಅತೃಪ್ತರಾದ ಕೆಲವು ಭೂಮಾಲೀಕರೂ, ಪವಿತ್ರಪುರದ ಮಠಾಧಿಪತಿಗಳೂ, ಕೆಲಸವಿಲ್ಲದೆ ಅಲೆದಾಡುತ್ತಿದ್ದ ಕೆಲವರು ಕಾಕಪೋಕರೂ ಸೇರಿದ್ದರು. ಈ ದುಷ್ಟ ಕೂಟಕ್ಕೆ ಸೇರಿದ ದುಷ್ಟ ಕೀಟಗಳ ದೃಷ್ಟಿಯಲ್ಲಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯು ಜನರನ್ನು ಹಿಡಿಯುವ ಒಂದು ಬಲೆಯಾಗಿದ್ದಿತು. ಆ ಸಮಿತಿಯನ್ನು ತಮ್ಮ ವಶಪಡಿಸಿಕೊಂಡರೆ ಬೆಸ್ತರು ಮೀನನ್ನು ಹಿಡಿಯುವಂತೆ ಆ ಸಮಿತಿಯ ಸಹಾಯದಿಂದ ಪವಿತ್ರಪುರದ ತಾಲ್ಲೂಕಿನ ಮಹಾಜನರನ್ನು ಸುಲಭವಾಗಿ ತಮ್ಮ ವಶಪಡಿಸಿಕೊಳ್ಳಬಹುದೆಂದು ಅವರು ತಿಳಿದಿದ್ದರು. ಆದ್ದರಿಂದ ಮೋಹನನ ವಿರುದ್ಧ ಕೈಗೊಳ್ಳತಕ್ಕ ಕಾರ್ಯಾಚರಣೆಯ ಮೊದಲನೆಯ ಹಂತವಾಗಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ತಮ್ಮ ವಶಪಡಿಸಿಕೊಳ್ಳಬೇಕೆಂದೂ, ಅನಂತರ ತಮ್ಮ ಪರ ಪ್ರಚಾರ ನಡೆಯಿಸುವ ಸಲುವಾಗಿಯೂ ಮೋಹನನ ವಿರುದ್ಧ ಅಪಪ್ರಚಾರ ನಡೆಯಿಸುವ ಒಂದು ವೃತ್ತ ಪತ್ರಿಕೆಯನ್ನು ಹೊರಡಿಸಬೇಕೆಂದೂ, ತಮ್ಮ ಉದ್ದೇಶ ಸಾಧನೆಗಾಗಿ ತಮಗೆ ಬೇಕಾದ ಕಂಟ್ರಾಕ್ಟರುಗಳಿಂದಲೂ, ದಲ್ಲಾಳಿಗಳಿಂದಲೂ ಹೇರಳವಾಗಿ ಧನ ಸಂಗ್ರಹ ಮಾಡಬೇಕೆಂದೂ ತೀರ್ಮಾನ ಮಾಡಿದರು. ಇಷ್ಟೆಲ್ಲಾ ವ್ಯವಸ್ಥೆಯಾದ ನಂತರ ಮೋಹನನ ಮತ್ತು ಆತನ ಬೆಂಬಲಿಗರ ವಿರುದ್ಧ ಕಾರ್ಯಾಚರಣೆಯನ್ನು ಪ್ರಾರಂಭಿಸಿದರು. ಸುಮಾರು ಹತ್ತು ಸಾವಿರ ರೂಪಾಯಿಗಳನ್ನು ಖರ್ಚುಮಾಡಿ ತಾವು ಹೇಳಿದಂತೆ ಕೇಳುವ ಜನರನ್ನು ಕಾಂಗ್ರೆಸ್ಸಿನ ಪ್ರಾಥಮಿಕ ಸದಸ್ಯರನ್ನಾಗಿ ಸೇರಿಸಿದರು. ಆ ರೀತಿ ಸದಸ್ಯರಾದವರೆಲ್ಲರೂ ಒಂದಲ್ಲ ಒಂದು ವಿಧದಲ್ಲಿ ಈ ದುಷ್ಟ ಶಕ್ತಿಗಳ ಹಂಗಿಗೆ ಒಳಗಾಗಿದ್ದವರಾಗಿದ್ದರು. ರಂಗನಾಥನೂ, ನಾಗೇಂದ್ರನೂ ತಮ್ಮ ಆಳುಗಳನ್ನೂ ಮತ್ತು ಸಾಲಗಾರರನ್ನೂ ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಿದ್ದರು. ಕಾಂಗ್ರೆಸ್ ಸದಸ್ಯರಾಗಿದ್ದೇವೆಂಬುದು ಕೂಡ ಗೊತ್ತಿರಲಿಲ್ಲ. ಮೋಹನನಿಗೆ ಜನ ಬೆಂಬಲವಿತ್ತೇ ವಿನಾ ಧನ ಬೆಂಬಲವಿರಲಿಲ್ಲ. ಅವನೂ, ಅವನ ಕಡೆಯವರೂ ಕೆಲವರನ್ನು ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಿದ್ದರು. ಅವರು ಪ್ರಮಾಣಿಕರನ್ನೂ, ದೇಶಭಕ್ತರನ್ನೂ ಹುಡುಕಿ ಕಾಂಗ್ರೆಸ್ಸಿಗೆ ಸೇರಿಸಿದ್ದರು.

ಪ್ರಾಥಮಿಕ ಸದಸ್ಯರಿಂದ ಚುನಾಯಿತರಾದವರು ತಾಲ್ಲೂಕ್ ಕ್ರಾಂಗ್ರೆಸ್ ಸಮಿತಿಯ ಸದಸ್ಯರಾಗಬೇಕೆಂಬ ನಿಯಮವಿತ್ತು. ಆ ನಿಯಮಕ್ಕನುಗುಣವಾಗಿ, ತಾಲ್ಲೂಕ್ ಕಾಂಗ್ರೆಸ್ ಸಮಿತಿಗೆ ಚುನಾವಣೆ ನಡೆಯಬೇಕಾಗಿತ್ತು. ತಾಲ್ಲೂಕಿನ ಆದ್ಯಂತ ತಮಗೆ ಬೇಕಾಗಿದ್ದವರನ್ನೇ ಸದಸ್ಯರನ್ನಾಗಿ ಮಾಡಿ ಕೊಂಡಿದ್ದಾಗ್ಯೂ, ಕ್ರಮವಾದ ರೀತಿಯಲ್ಲಿ ಚುನಾವಣೆ ನಡೆದಲ್ಲಿ ಚುನಾವಣೆಯಲ್ಲಿ ಮೋಹನನೂ, ಅವನ ಹಿಂಬಾಲಕರೂ ಗೆಲ್ಲಬಹುದೆಂಬ ಭಯ ರಂಗನಾಥ ಮಿತ್ರಮಂಡಲಿಯವರನ್ನು ಬಾಧಿಸುತ್ತಿತ್ತು. ಆದ್ದರಿಂದ ಮೋಹನನಿಗೂ, ಅವನ ಆಪ್ತರಿಗೂ ಗೊತ್ತಾಗದ ರೀತಿಯಲ್ಲಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಗೆ ಚುನಾವಣೆಯನ್ನು ನಡೆಯಿಸಬೇಕೆಂದು ಅವರು ನಿರ್ಧರಿಸಿದರು. ತಾಲ್ಲೂಕ್ ಕಾಂಗ್ರೆಸ್

ಸಮಿತಿಯನ್ನು ಕಾರ್ಯದರ್ಶಿಯಾಗಿದ್ದ ಕಲ್ಲಪ್ಪನ ಸಹಾಯದಿಂದ ತಮಗೆ ಆಪ್ತರಾದವರನ್ನು ಚುನಾವಣೆಯ ಅಧಿಕಾರಿಗಳನ್ನಾಗಿ ನೇಮಿಸುವ ವ್ಯವಸ್ಥೆ ಮಾಡಿದರು. ಮುಗ್ಧನಾದ ಮೋಹನನಿಗೆ ಈ ಪಿತೂರಿ ಗೊತ್ತಾಗಲೇ ಇಲ್ಲ. ಚುನಾವಣೆಯ ಪಂಚಾಂಗವು ನಿರ್ಧಾರವಾಯಿತು. ಚುನಾವಣೆಯ ದಿನವೂ ಬಂತು. ಚುನಾವಣೆಯ ದಿನ ಚುನಾವಣೆಯ ಅಧಿಕಾರಿಗಳು ಮೋಹನನಿಗೂ, ಅವನ ಸ್ನೇಹಿತರಿಗೂ ಸಿಕ್ಕದೆ ತಲೆ ತಪ್ಪಿಸಿಕೊಂಡು ಓಡಾಡುತ್ತಾ ಇದ್ದು, ತಮಗೆ ಬೇಕಾದವರಿಂದ ಮಾತ್ರ ಉಮೇದುವಾರಿಕೆ ಅರ್ಜಿಗಳನ್ನು ತೆಗೆದುಕೊಂಡರು. ಚುನಾವಣೆಗೆ ನಿಗದಿಯಾಗಿದ್ದ ಕಾಲ ಮುಗಿದೊಡನೆ ಅವಿರೋಧವಾಗಿ ಚುನಾವಣೆ ನಡೆಯಿತೆಂದು ಬರವಣಿಗೆಯಲ್ಲಿ ಘೋಷಿಸಿದರು. ಮೋಹನನೂ ಮತ್ತು ಆತನ ಸ್ನೇಹಿತರೂ, ಉಮೇದುವಾರಿಕೆಯ ಅರ್ಜಿಗಳನ್ನು ಸಲ್ಲಿಸುವ ಸಲುವಾಗಿ ಚುನಾವಣೆಯ ಅಧಿಕಾರಿಗಳನ್ನು ಬಹಳವಾಗಿ ಹುಡುಕಿದ್ದರು. ಆದರೆ ಚುನಾವಣೆ ನಡೆಯಬೇಕಾಗಿದ್ದ ಸ್ಥಳದಲ್ಲಿ ಆ ಅಧಿಕಾರಿಗಳು ಇರಲೇ ಇಲ್ಲ. ಮರುದಿನ ಚುನಾವಣೆಯ ಫಲಿತಾಂಶವನ್ನು ಕಾರ್ಯದರ್ಶಿ ಕಲ್ಲಪ್ಪನು ತಾಲ್ಲೂಕ್ ಕಾಂಗ್ರೆಸ್ ಕಛೇರಿಯಲ್ಲಿ ಪ್ರಕಟಿಸಿದನು. ಆ ಪ್ರಕಟಣೆಯನ್ನು ನೋಡಿ ನಿಷ್ಠಾವಂತ ಕಾಂಗ್ರೆಸ್ ಕೆಲಸಗಾರರೆಲ್ಲರೂ ಅಚ್ಚರಿಗೊಂಡರು. ಕಾಂಗ್ರೆಸ್ ಸಂಸ್ಥೆಯಲ್ಲಿ ಬಹಳ ಕಾಲ ದುಡಿದ ತ್ಯಾಗ ಮಾಡಿದವರೊಬ್ಬರೂ ಕಾಂಗ್ರೆಸ್ ಸಮಿತಿಗೆ ಚುನಾಯಿತರಾಗಿರಲಿಲ್ಲ. ಲಾಭಕ್ಕೋಸ್ಕರ ಕಾಂಗ್ರೆಸ್ಸಿಗೆ ಸೇರಿಕೊಂಡಿದ್ದವರು ಮಾತ್ರ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿ ಚುನಾವಣೆಯ ಶಾಸ್ತ್ರದ ಮೂಲಕ ಬಂದಿದ್ದರು. ನಾಗೇಂದ್ರ, ರಂಗನಾಥ, ಶೀತೂರು ಕಲ್ಲಪ್ಪ, ನೀಲೇಗೌಡ, ಸಣ್ಣೇಗೌಡ, ಸಂಕಪೂಜಾರಿ, ವಸೂಲಿ ಸಾಬ್ಜಾನ್, ರಂಗನಾಥನ ಮೇಸ್ತ್ರಿ ಪೆರುಮಾಳ್, ನಾಗೇಂದ್ರನ ಗಾಡಿಯ ಸಾರಥಿ ಸದೆಯ ಮುಂತಾದವರು ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿದ್ದರು. ಕೆಲವು ದಿನಗಳನಂತರ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಆಡಳಿತವರ್ಗದ ಚುನಾವಣೆಯೂ ನಡೆಯಿತು. ಆ ಚುನಾವಣೆಯಲ್ಲಿ ರಂಗನಾಥನೂ ತಾಲ್ಲೂಕ್ ಸಮಿತಿಯ ಅಧ್ಯಕ್ಷನಾಗಿಯೂ, ನಾಗೇಂದ್ರನು ಕಾರ್ಯದರ್ಶಿಯಾಗಿಯೂ, ಸಂಕಪೂಜಾರಿಯು ಖಜಾಂಚಿಯಾಗಿಯೂ ಚುನಾಯಿತರಾದರು. ತಾಲ್ಲೂಕ್ ಕಾಂಗ್ರೆಸ್ ಸಮಿತಿಯಿಂದ ಒಬ್ಬ ಪ್ರತಿನಿಧಿಯನ್ನು ಆರಿಸಿ ಜಿಲ್ಲಾ ಕಾಂಗ್ರೆಸ್ ಸಮಿತಿಗೆ ಕಳುಹಿಸಬೇಕಾಗಿತ್ತು. ಶೀತೂರು ಕಲ್ಲಪ್ಪನು ತಾಲ್ಲೂಕ್ ಕಾಂಗ್ರೆಸ್ ಸಮಿತಿಯಿಂದ ಜಿಲ್ಲಾ ಕಾಂಗ್ರೆಸ್ ಸಮಿತಿಗೆ ಸದಸ್ಯನಾಗಿ ಆಯ್ಕೆಯಾದನು. ಕೆಲವು ದಿನಗಳನಂತರ ಕಲ್ಲಪ್ಪನು ಜಿಲ್ಲಾ ಕಾಂಗ್ರೆಸ್ ಸಮಿತಿಯಲ್ಲಿ ಉಪಾಧ್ಯಕ್ಷನಾಗಿ ಚುನಾಯಿಸಲ್ಪಟ್ಟನು.

ರಂಗನಾಥನೂ, ಅವನ ಸ್ನೇಹಿತರೂ ನಡೆಯಿಸಿದ ಮೋಸದ ಚುನಾವಣೆಯನ್ನು ನೋಡಿ ಪವಿತ್ರಪುರದ ತಾಲ್ಲೂಕಿನ ಬಹುಮಂದಿ ಕಾಂಗ್ರೆಸ್ ಕೆಲಸಗಾರರಿಗೆ ದಿಗ್ಭ್ರಮೆಯಾಯಿತು. ರಂಗನಾಥ ಮಿತ್ರಮಂಡಳಿಯವರ ಕಾರ್ಯ ಹಗಲುದರೋಡೆಗೆ ಸಮವೆಂದು ಜನಸಾಮಾನ್ಯರು ಆಡಿಕೊಳ್ಳುತ್ತಿದ್ದರು. ಪವಿತ್ರಪುರ ತಾಲ್ಲೂಕಿನಲ್ಲಿ ಕಾಂಗ್ರೆಸ್ ಸಂಸ್ಥೆ ಇಂತಹ ಮೋಸಗಾರರ ಕೈ ಸೇರಿರುವುದು ಸಂಸ್ಥೆಯ ಹಿತಕ್ಕೆ ತಕ್ಕುದಲ್ಲವೆಂದು

ಹಲವರು ಹೇಳುತ್ತಿದ್ದರು. ಈ ಮೋಸದ ಚುನಾವಣೆಯ ವಿರುದ್ಧ ಯಾವ ರೀತಿಯ ಕ್ರಮವನ್ನು ಕೈಗೊಳ್ಳಬೇಕೆಂಬುದನ್ನು ನಿರ್ಧರಿಸುವ ಸಲುವಾಗಿ ಪವಿತ್ರಪುರ ತಾಲ್ಲೂಕಿನ ಬಹುಮಂದಿ ಕಾಂಗ್ರೆಸ್ ಕೆಲಸಗಾರರು ಪವಿತ್ರಪುರದಲ್ಲಿ ಸಭೆ ಸೇರಿ ಸಮಾಲೋಚನೆ ನಡೆಯಿಸಿದರು. ಕಾಂಗ್ರೆಸ್ ಕೆಲಸಗಾರರಲ್ಲಿ ಕೆಲವರು ಕಾಂಗ್ರೆಸ್ಸನ್ನು ಬಿಡಬೇಕೆಂದು ವಾದಿಸಿದರು. ಇನ್ನೂ ಕೆಲವರು ಪ್ರತಿ ಕಾಂಗ್ರೆಸ್ಸನ್ನು ಸ್ಥಾಪಿಸಬೇಕೆಂದು ವಾದಿಸಿದರು. ಮತ್ತೆ ಕೆಲವರು ತಾಲ್ಲೂಕ್ ಕಾಂಗ್ರೆಸ್ ಕಛೇರಿಯ ಮುಂದೆ ಸತ್ಯಾಗ್ರಹ ಮಾಡಬೇಕೆಂದು ವಾದಿಸಿದರು. ದೀರ್ಘಕಾಲ ಚರ್ಚೆಯಾದ ನಂತರ ಮೋಹನನ ಸಲಹೆಯ ಮೇರೆಗೆ ಚುನಾವಣೆಯ ವಿರುದ್ಧ ಜಿಲ್ಲಾ ಕಾಂಗ್ರೆಸ್ ಸಮಿತಿಗೆ ಅಪೀಲನ್ನು ಹಾಕತಕ್ಕದೆಂದು ತೀರ್ಮಾನಿಸಿದರು.

ರಂಗನಾಥನೂ, ಅವನ ಸ್ನೇಹಿತರೂ ಸೇರಿ ಪವಿತ್ರಪುರದಲ್ಲಿ ಒಂದು ದಿನಪತ್ರಿಕೆಯನ್ನು ಹೊರಡಿಸುತ್ತಿದ್ದರು. ರಂಗನಾಥನ ಪರಮ ಮಿತ್ರನಾದ ಮಂಗಳದಾಸನು ಆ ಪತ್ರಿಕೆಯ ಸಂಪಾದಕನಾಗಿದ್ದನು. ಮಂಗಳದಾಸನು ಹೆಸರಿಗೆ ಮಾತ್ರ ಸಂಪಾದಕನಾಗಿದ್ದನು. ಪತ್ರಿಕೆಯ ಧ್ಯೇಯ, ಧೋರಣೆಗಳನ್ನು ಕಲ್ಲಪ್ಪನು ನಿರ್ಧರಿಸುತ್ತಿದ್ದನು. ಪತ್ರಿಕೆಯ ಖರ್ಚುವೆಚ್ಚಗಳನ್ನು ರಂಗನಾಥನು ವಹಿಸುತ್ತಿದ್ದನು. ರಂಗನಾಥ, ಕಲ್ಲಪ್ಪ, ನಾಗೇಂದ್ರ ಇವರುಗಳನ್ನು ಹೊಗಳುವುದೂ, ಮೋಹನ ಮತ್ತು ಅವನ ಸ್ನೇಹಿತರಾದ ಮೂರ್ತಿ ಮುಂತಾದವರನ್ನು ತೆಗಳುವುದೂ ಆ ಪತ್ರಿಕೆಯ ಮುಖ್ಯ ಕಸಬಾಗಿತ್ತು. ಶೀತೂರು ಕಲ್ಲಪ್ಪನು ಸ್ವಾತಂತ್ರ್ಯ ಸಂಗ್ರಾಮದಲ್ಲಿ ವೀರನೆಂದೂ, ರಂಗನಾಥನೂ ನಾಗೇಂದ್ರನೂ ಕಾಂಗ್ರೆಸ್ ಸಂಸ್ಥೆಗೆ ದೊರಕಿದ್ದ ಎರಡು ಅಮೂಲ್ಯ ರತ್ನಗಳೆಂದು ಆ ಪತ್ರಿಕೆಯಲ್ಲಿ ಆಗಾಗ ವಿವಿಧ ರೀತಿಗಳಲ್ಲಿ ಬರೆಯಲಾಗುತ್ತಿತ್ತು. ಆ ತ್ರಿಮೂರ್ತಿಗಳು ಕುಳಿತಿದ್ದು, ಉಸಿರುಬಿಟ್ಟದ್ದು ಆದಿಯಾಗಿ ಅವರ ಸಕಲ ಚಲನವಲನಗಳೂ ಆ ಪತ್ರಿಕೆಯಲ್ಲಿ ಪ್ರಕಟವಾಗುವಂತೆ ವ್ಯವಸ್ಥೆ ಮಾಡಿದ್ದರು. ಮೋಹನನು ಲಂಚಕೋರನೆಂದೂ, ಕುಡುಕನೆಂದೂ, ತನ್ನ ಬಂಧುಗಳ ಹೆಸರಿನಲ್ಲಿ ಆಸ್ತಿಯನ್ನು ಮಾಡಿದವನೆಂದೂ ಅವನ ಹೆಸರನ್ನು ಹೇಳದೆ ಅರ್ಥಗರ್ಭಿತವಾಗಿ ಅವನಿಗನ್ವಯಿಸುವ ರೀತಿಯಲ್ಲಿ ಸಮಯ ಸಿಕ್ಕಾಗಲೆಲ್ಲಾ ಆ ಪತ್ರಿಕೆಯ ಮೂಲಕ ಅಪಪ್ರಚಾರ ನಡೆಸುತ್ತಿದ್ದರು. ತಾಲ್ಲೂಕ್ ಕಾಂಗ್ರೆಸ್ ಸಮಿತಿಗೆ ಚುನಾವಣೆ ನಡೆಯುವ ಪೂರ್ವ ಕೆಲವು ದಿನಗಳು, ಆ ಪತ್ರಿಕೆಯು ಮೋಹನನ ವಿರುದ್ಧ ಒಂದು ದೊಡ್ಡ ಧಾಳಿಯನ್ನೇ ಎಬ್ಬಿಸಿದ್ದಿತು. ತಾಲ್ಲೂಕ್ ಕಾಂಗ್ರೆಸ್ ಸಮಿತಿಯು ಅನೇಕ ವರ್ಷಗಳಿಂದ ಒಬ್ಬ ವ್ಯಕ್ತಿಯ ಜಹಗೀರಿಯಾಗಿದೆಯೆಂದೂ ಆ ಸಮಿತಿಯಲ್ಲಿ ಕೆಲವು ವರ್ಷಗಳಿಂದೀಚೆಗೆ ಹೇರಳವಾದ ಹಣ ದುರುಪಯೋಗವಾಗಿದೆಯೆಂದೂ, ಕಾಂಗ್ರೆಸ್ಸಿನ ಹಿತದೃಷ್ಟಿಯಿಂದ ಯೋಗ್ಯರೊಬ್ಬರು ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗುವುದು ಅವಶ್ಯಕವೆಂದೂ, ಆ ಪತ್ರಿಕೆ ಪ್ರತಿಪಾದಿಸುತ್ತಿತ್ತು. ಚುನಾವಣೆಯ ಶಾಸ್ತ್ರ ಮುಗಿದನಂತರ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಹೊಸ ಆಡಳಿತವರ್ಗದವರನ್ನು ಪತ್ರಿಕೆಯಲ್ಲಿ ದಪ್ಪ ದಪ್ಪವಾದ ಅಕ್ಷರಗಳಲ್ಲಿ ಹೊಗಳಲಾಗಿತ್ತು. ದಕ್ಷನಾದ ಮತ್ತು ಹಣದಾಶೆಯಿಲ್ಲದ ರಂಗನಾಥನು ಅಧ್ಯಕ್ಷನಾಗಿ

ಚುನಾಯಿತನಾದದ್ದೂ, ಮೇಧಾವಿಯೂ ದೇಶಪ್ರೇಮಿಯೂ ಆದ ನಾಗೇಂದ್ರನು ಕಾರ್ಯದರ್ಶಿಯಾಗಿ ಚುನಾಯಿತನಾದದ್ದೂ, ಕಾಂಗ್ರೆಸ್ ಸಂಸ್ಥೆಯ ಮತ್ತು ತಾಲ್ಲೂಕಿನ ಭಾಗ್ಯವೆಂದು ಆ ಪತ್ರಿಕೆಯಲ್ಲಿ ಪ್ರಸ್ತಾಪಿಸಲಾಗಿತ್ತು. ಚುನಾವಣೆಯ ತರುವಾಯ ಪವಿತ್ರಪುರದಲ್ಲಿ ಸೇರಿದ ನಿಷ್ಠಾವಂತ ಕಾಂಗ್ರೆಸ್ ಕೆಲಸಗಾರರ ಸಭೆಯ ವಿಚಾರವನ್ನು ಕುರಿತು ಪ್ರಸ್ತಾಪಿಸುವಾಗ, ಅಧಿಕಾರ ಕೈತಪ್ಪಿಹೋದ ಸಂಕಟದಿಂದ ಸ್ವಾರ್ಥಿಗಳು ಆದರ್ಶ ಕಾಂಗ್ರೆಸ್ ಮುಖಂಡರಾದ ರಂಗನಾಥ ಮುಂತಾದವರಿಗೆ ಕಿರುಕುಳ ಕೊಡುವ ಇರಾದೆಯಿಂದ ಗುಂಪುರಾಜಕೀಯದಲ್ಲಿ ಮಗ್ನರಾಗಿದ್ದಾರೆಂದು ಮೋಹನ ಮುಂತಾದವರನ್ನು ಪತ್ರಿಕೆಯಲ್ಲಿ ಟೀಕಿಸಲಾಗಿತ್ತು. ಆ ಪತ್ರಿಕೆಯ ಸಹಾಯದಿಂದ ಮೋಹನನ ಪ್ರಭಾವವನ್ನು ತಗ್ಗಿಸಬಹುದೆಂದೂ, ಪ್ರಜಾಭಿಪ್ರಾಯವನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬಹುದೆಂದು ರಂಗನಾಥನೂ ಮತ್ತು ಅವನ ಸ್ನೇಹಿತರೂ ತಿಳಿದಿದ್ದರು. ಪ್ರತಿ ದಿನವೂ ಆ ಪತ್ರಿಕೆಯನ್ನು ತಾಲ್ಲೂಕಿನ ಮೂಲೆ ಮೂಲೆಗೂ ಮುಟ್ಟಿಸುವ ಏರ್ಪಾಡುಮಾಡಿದ್ದರು. ಅಂತೂ ದುಷ್ಟರಾದ ರಂಗನಾಥನೂ, ಅವನ ಸಂಗಾತಿಗಳೂ, ಸತ್ಯಸಂಧರಾದ ಮೋಹನ ಮತ್ತು ಅವನ ಸ್ನೇಹಿತರನ್ನು ಅಸತ್ಯವಂತರೆಂದು ಜಗತ್ತಿಗೆ ತೋರಿಸುವ ಸಾಹಸಕ್ಕೆ ಕೈಹಾಕಿದ್ದರು. ರಾಜಕಾರಣದಲ್ಲಿ ಜನತೆಯ ಬೆಂಬಲವನ್ನು ಪಡೆದಿರತಕ್ಕ ಸತ್ಯಸಂಧರನ್ನು ಸೋಲಿಸುವುದು ಸುಲಭವಲ್ಲವೆಂಬುದನ್ನು ಆ ಮೂರ್ಖರು ಅರಿತಿರಲಿಲ್ಲ.

ತಾಲ್ಲೂಕ್ ಕಾಂಗ್ರೆಸ್ ಸಮಿತಿಗೆ ನಡೆದಿದ್ದ ಚುನಾವಣೆಯು ಅಕ್ರಮವೆಂದೂ, ಆದ್ದರಿಂದ ಅದನ್ನು ರದ್ದುಪಡಿಸಬೇಕೆಂದೂ, ಮೋಹನನೂ ಅವನ ಕಡೆಯವರೂ ಜಿಲ್ಲಾ ಕಾಂಗ್ರೆಸ್ ಸಮಿತಿಗೆ ಮನವಿ ಮಾಡಿಕೊಂಡಿದ್ದರು. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು ರಂಗನಾಥನ ಕ್ಲಬ್ಬಿನ ಸ್ನೇಹಿತರಾಗಿದ್ದರು. ಅಲ್ಲದೆ ಶೀತೂರು ಕಲ್ಲಪ್ಪನು ಜಿಲ್ಲಾ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷನಾಗಿದ್ದನು. ಆದ್ದರಿಂದ ಆ ಮನವಿಗೆ ಯಾವ ಪುರಸ್ಕಾರವೂ ದೊರೆಯಲಿಲ್ಲ. ಅದನ್ನು ಇತ್ಯರ್ಥ ಮಾಡದೆ ಹಾಗೆಯೇ ತಳ್ಳಿದರು.

ಹೊಸ ಕಾಂಗ್ರೆಸ್ ಸಮಿತಿಯು ಅಧಿಕಾರಕ್ಕೆ ಬಂದನಂತರ ಕೆಲವು ತಿಂಗಳಲ್ಲಿ ಜಿಲ್ಲಾ ಬೋರ್ಡಿಗೆ ಚುನಾವಣೆ ನಡೆಯತಕ್ಕದ್ದೆಂದು ಸರ್ಕಾರದವರು ಪ್ರಚಾರಪಡಿಸಿದರು. ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಕಾಂಗ್ರೆಸ್ ಪರವಾಗಿ ಉಮೇದುವಾರರನ್ನು ನಿಲ್ಲಿಸತಕ್ಕದ್ದೆಂದು ಜಿಲ್ಲಾ ಕಾಂಗ್ರೆಸ್ ಸಮಿತಿಯವರು ತೀರ್ಮಾನ ಮಾಡಿದರು. ಉಮೇದುವಾರರನ್ನು ಆಯ್ಕೆ ಮಾಡುವುದಕ್ಕೂ, ಕಾಂಗ್ರೆಸ್ ಪರವಾಗಿ ಪ್ರಚಾರ ನಡೆಯಿಸುವುದಕ್ಕೂ, ಉಪಾಧ್ಯಕ್ಷ ಕಲ್ಲಪ್ಪನ ಅಧ್ಯಕ್ಷತೆಯಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿಯವರು ಒಂದು ಉಪ ಸಮಿತಿಯನ್ನು ನೇಮಿಸಿದರು. ಜಿಲ್ಲೆಯ ಆದ್ಯಂತ ನೂರಾರು ಜನರು ಅಭ್ಯರ್ಥಿಗಳಾಗಲಿಚ್ಛಿಸಿ ಉಪಸಮಿತಿಗೆ ಅರ್ಜಿಗಳನ್ನು ಸಲ್ಲಿಸಿದರು. ಕಲ್ಲಪ್ಪನಿಗೆ ಅದೊಂದು ಸದವಕಾಶ ದೊರೆತಂತಾಗಿತ್ತು. ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾದ ಮೇಲೆ ಆತನು ಅಧಿಕಾರಿಗಳ ಸಂಪರ್ಕವನ್ನು ಹೆಚ್ಚಾಗಿ ಬೆಳೆಸಿದ್ದನು. ಅಧಿಕಾರಿಗಳಿಂದ

ಕೆಲಸವನ್ನು ಮಾಡಿಸಿಕೊಡುವ ನೆಪದಲ್ಲೂ, ಕಾಂಗ್ರೆಸ್ ನಿಧಿಯ ನೆಪದಲ್ಲೂ ಮತ್ತು ಪ್ರಯಾಣದ ಖರ್ಚಿನ ನೆಪದಲ್ಲೂ, ಪ್ರತಿತಿಂಗಳಲ್ಲಿಯೂ ಒಂದು ಸಾವಿರ ರೂಪಾಯಿಗಳವರೆಗೆ ಅವನು ಸಂಪಾದಿಸುತ್ತಿದ್ದನು. ಒಂದು ಸಾರಿ ಲಂಚದ ರುಚಿಯನ್ನು ನೋಡಿದವರು ಎಲ್ಲಾ ಸಂದರ್ಭ ಸನ್ನಿವೇಶಗಳನ್ನೂ ಲಂಚ ಸ್ವೀಕಾರಕ್ಕಾಗಿ ಉಪಯೋಗಿಸಿಕೊಳ್ಳಬಲ್ಲರು. ಕಾಂಗ್ರೆಸ್ ಟಿಕೆಟ್ ಕೊಡಿಸುವ ನೆಪದಲ್ಲಿ ಕಲ್ಲಪ್ಪನು ಎಂಟೇ ದಿನಗಳಲ್ಲಿ ಎಂಟು ಸಾವಿರ ರೂಪಾಯಿಗಳನ್ನು ತನ್ನ ಬೊಕ್ಕಸಕ್ಕೆ ಸೇರಿಸಿದ್ದನು. ಪವಿತ್ರಪುರ ತಾಲ್ಲೂಕಿನಲ್ಲಿ ನಿಷ್ಠಾವಂತ ಕಾಂಗ್ರೆಸ್ಸಿಗರು ಯಾರಿಗೂ ಕಾಂಗ್ರೆಸ್ ಟಿಕೆಟ್ ಲಭಿಸಲಿಲ್ಲ. ಮೋಹನನ ಸ್ನೇಹಿತ ಕರಿಯಪ್ಪನು ಹರಿಜನ ಪಂಗಡಕ್ಕೆ ಸೇರಿದವನಾಗಿದ್ದು ವಿದ್ಯಾವಂತನಾಗಿದ್ದನು. ಜೊತೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಎರಡು ವರ್ಷಗಳಕಾಲ ಸೆರೆಮನೆಯಲ್ಲಿದ್ದನು. ಅಲ್ಲದೆ ಹಿಂದೆ ಕೆಲವು ವರ್ಷಗಳ ಕಾಲ ಜಿಲ್ಲಾ ಬೋರ್ಡ್ ಸದಸ್ಯರಾಗಿ ಅನುಭವವನ್ನು ಪಡೆದವನಾಗಿದ್ದನು. ಆದರೆ ರಂಗನಾಥನಿಗೂ, ಅವನ ಸ್ನೇಹಿತರಿಗೂ, ದೇಶಕ್ಕಾಗಿ ದುಡಿದವರಾಗಲಿ, ಜನಾನುರಾಗಿಗಳಾಗಲಿ ಬೇಕಾಗಿರಲಿಲ್ಲ. ಅವರಿಗೆ ತಾವು ಹೇಳಿದಂತೆ ಕೇಳುವವರು ಮಾತ್ರ ಬೇಕಾಗಿದ್ದರು. ಆದ್ದರಿಂದ ಅವನ ಕಾಂಗ್ರೆಸ್ ಟಿಕೆಟ್ಟನ್ನು ಕರಿಯಪ್ಪನಿಗೆ ಕೊಡಿಸುವ ಬದಲು ನೀಲೇಗೌಡನ ಊಳಿಗದ ಆಳು ನಿರಕ್ಷರಕುಕ್ಷಿ ಹೆಂಡಗುಡುಕ ಕಾಳ ಎಂಬುವವನಿಗೆ ಕೊಡಿಸಿದರು. ಅಲ್ಪಸಂಖ್ಯಾತರ ಪರವಾಗಿ, ವಸೂಲಿ ಸಾಬ್ಜಾನ್ ಎನ್ನುವವನು ಕಾಂಗ್ರೆಸ್ ಪರ ಉಮೇದುವಾರನಾದನು. ಉಳಿದ ಎರಡು ಸ್ಥಾನಗಳಿಗೆ ಸಂಕಪೂಜಾರಿಯೂ, ನೀಲೇಗೌಡನೂ ಆಯ್ಕೆಯಾದರು. ಅಂತೂ, ಪವಿತ್ರಪುರ ತಾಲ್ಲೂಕಿನಲ್ಲಿ ರಂಗನಾಥನೂ ಅವನ ಸ್ನೇಹಿತರೂ ತಮಗೆ ಬೇಕಾದವರಿಗೆ ಕಾಂಗ್ರೆಸ್ ಟಿಕೆಟನ್ನು ಕೊಡಿಸಿದ್ದರು.

ಹಳೆಯ ಕಾಂಗ್ರೆಸ್ ಕಾರ್ಯಕರ್ತರನ್ನು ಬಿಟ್ಟು ಕಾಂಗ್ರೆಸ್ಸಿನವರಿಗೆ ಇರಬೇಕಾದ ಯಾವ ಸದ್ಗುಣಗಳೂ ಇಲ್ಲದೆ ಇರತಕ್ಕ ಜನರಿಗೆ ಕಾಂಗ್ರೆಸ್ ಟಿಕೆಟ್ ಕೊಟ್ಟಿದ್ದರಿಂದ ಪವಿತ್ರಪುರ ತಾಲ್ಲೂಕಿನ ಜನರು ಕೋಪದಿಂದ ಕೆರಳಿದರು. ಕೋಪಗೊಂಡ ಜನರು ಕಾಂಗ್ರೆಸ್ ಪರವಾಗಿ ಚುನಾವಣೆಗೆ ನಿಂತವರನ್ನು ಹೇಗಾದರೂ ಮಾಡಿ ಸೋಲಿಸಬೇಕೆಂದು ಪಣ ತೊಟ್ಟರು. ಆದ್ದರಿಂದ ಚುನಾವಣೆಯಲ್ಲಿ ಮೋಹನ ಮುಂತಾದವರು ಕಾಂಗ್ರೆಸ್ ಪರವಾಗಿ ಎಷ್ಟು ಹೋರಾಡಿದರೂ ಜನರ ಮನಸ್ಸನ್ನು ಬದಲಾಯಿಸಲಾಗಲಿಲ್ಲ. ಕೋಪಗೊಂಡ ಜನರು ಮೋಹನನ ಮಾತುಗಳನ್ನೂ ಸಹ ಕೇಳಲಿಲ್ಲ. ಆದ್ದರಿಂದ ಕಾಂಗ್ರೆಸ್ ಪರವಾಗಿ ನಿಂತ ಅಭ್ಯರ್ಥಿಗಳೆಲ್ಲರೂ ಪವಿತ್ರಪುರ ತಾಲ್ಲೂಕಿನಲ್ಲಿ ಸೋತು ಹೋದರು. ಈ ಸೋಲು ಕಾಂಗ್ರೆಸ್ಸಿನ ಸೋಲಾಗಿರಲಿಲ್ಲ; ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಸೋಲಾಗಿತ್ತು. ಏಕೆಂದರೆ ಜನರು ಕಾಂಗ್ರೆಸ್ಸಿನಲ್ಲಿ ಭಕ್ತಿ ಗೌರವಗಳನ್ನಿಟ್ಟಿದ್ದರೂ ರಂಗನಾಥ ಮುಂತಾದವರ ಮೇಲಿನ ಸಿಟ್ಟಿಗಾಗಿ ಕಾಂಗ್ರೆಸ್ ಅಭ್ಯರ್ಥಿಗಳ ವಿರುದ್ಧವಾಗಿ ಮತವನ್ನು ನೀಡಿದ್ದರು. ಕಾಂಗ್ರೆಸ್ ಉಮೇದುವಾರರ ಸೋಲಿಗೆ ಮೋಹನನೇ ಕಾರಣನೆಂದು ರಂಗನಾಥ ಮುಂತಾದವರು ನಿಂದೆ ಮಾಡಲಾರಂಭಿಸಿದರು. ಅವರ ಪತ್ರಿಕೆಯಲ್ಲಿ

ಮೋಹನನು ಮೀರ್‌ಸಾಧಕನಂತೆ ಚುನಾವಣೆಯಲ್ಲಿ ವರ್ತಿಸಿದನೆಂದು ಬರೆಯಿಸಿದ್ದರು. ಚುನಾವಣೆಯಾದ ನಂತರ ತಾಲ್ಲೂಕ್ ಕಾಂಗ್ರೆಸ್ ಸಮಿತಿಯು ಅವಸರದ ಸಭೆಯೊಂದರನ್ನು ಸೇರಿಸಿ ಮೋಹನನು ಕಾಂಗ್ರೆಸ್ ಅಭ್ಯರ್ಥಿಗಳ ವಿರುದ್ಧ ಕೆಲಸ ಮಾಡಿದ್ದರಿಂದ, ಅವನನ್ನು ಕಾಂಗ್ರೆಸ್ ಸಂಸ್ಥೆಯಿಂದ ತೆಗೆದು ಹಾಕಬೇಕೆಂದು ಒಮ್ಮತದ ನಿರ್ಣಯ ಮಾಡಿದರು. ಆ ನಿರ್ಣಯದ ಪ್ರತಿಗಳನ್ನು ಜಿಲ್ಲಾ ಕಾಂಗ್ರೆಸ್ ಸಮಿತಿಗೂ, ಪ್ರದೇಶ ಕಾಂಗ್ರೆಸ್ ಸಮಿತಿಗೂ ಅವಸರ ಅವಸರವಾಗಿ ಕಳುಹಿಸಿಕೊಟ್ಟರು. ಯಥಾಪ್ರಕಾರ ತಮ್ಮ ಪತ್ರಿಕೆಯಲ್ಲಿ ಆ ನಿರ್ಣಯದ ಸಾರಾಂಶವನ್ನು ಎಂಟು ದಿನಗಳ ಕಾಲ ಎಡೆಬಿಡದೆ ಪ್ರಕಟಿಸಿದರು. ಜಿಲ್ಲಾ ಕಾಂಗ್ರೆಸ್ ಸಮಿತಿಯವರು ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ನಿರ್ಣಯವನ್ನು ಅನುಮೋದಿಸಿ ಮೋಹನನನ್ನು ಕಾಂಗ್ರೆಸ್ ಸಂಸ್ಥೆಯಿಂದ ಹೊರದೂಡಬೇಕೆಂದು ಪ್ರದೇಶ್ ಕಾಂಗ್ರೆಸ್ ಸಮಿತಿಗೆ ಶಿಫಾರಸ್ಸು ಮಾಡಿದರು. ಆದರೆ ಪ್ರದೇಶ ಕಾಂಗ್ರೆಸ್ ಸಮಿತಿಯವರಿಗೆ ಮೋಹನನು ಸತ್ಯಸಂಧನೆಂದು ಗೊತ್ತಾಗಿದ್ದುದರಿಂದ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಮತ್ತು ಜಿಲ್ಲಾ ಕಾಂಗ್ರೆಸ್ ಸಮಿತಿಯ ಸಲಹೆಗಳಿಗೆ ಪುರಸ್ಕಾರ ದೊರೆಯಲಿಲ್ಲ.

ಮೋಹನನನ್ನು ಕಾಂಗ್ರೆಸ್ಸಿನಿಂದ ಹೊರದೂಡಲು ಮಾಡಿದ್ದ ಸಂಚು ಸಫಲವಾಗದೆ ಹೋದದ್ದರಿಂದ ರಂಗನಾಥನಿಗೂ ಅವನ ಮಿತ್ರರಿಗೂ ಮುಖ ಭಂಗವಾಯಿತು. ಅವರು ಅದುವರೆಗೆ ನಡೆಸಿದ್ದ ಒಳಸಂಚು ಮತ್ತು ಅಪಪ್ರಚಾರಗಳಿಂದ ಮೋಹನನ ಗೌರವ ಪ್ರತಿಷ್ಠೆಗಳು ಕುಗ್ಗುವ ಬದಲು ಹೆಚ್ಚಾದವು. ರಂಗನಾಥನೂ ಅವನ ಮಿತ್ರರೂ ಕಾಂಗ್ರೆಸ್ ಸಮಿತಿಯನ್ನು ಆಕ್ರಮಿಸಿಕೊಂಡಿದ್ದರೆ, ಮೋಹನನು ಜನರ ಹೃದಯವನ್ನಾಕ್ರಮಿಸಿಕೊಂಡಿದ್ದನು. ಮುಂದೇನು ಮಾಡಬೇಕೆಂಬುದು ರಂಗನಾಥ ಮುಂತಾದವರ ಮುಂದಿನ ಪ್ರಶ್ನೆಯಾಗಿತ್ತು. ಆ ಪ್ರಶ್ನೆಗೆ ಪರಿಹಾರವನ್ನು ಹುಡುಕುವ ಸಲುವಾಗಿ ರಂಗನಾಥ ಮುಂತಾದವರು ಗುಪ್ತ ಸಭೆಯೊಂದನ್ನು ಸೇರಿಸಿದ್ದರು. ಆ ಸಭೆಯಲ್ಲಿ ರಂಗನಾಥ, ನಾಗೇಂದ್ರ, ಸಣ್ಣೇಗೌಡ, ನೀಲೇಗೌಡ, ಸಂಕಪೂಜಾರಿ, ಸಾಬ್ಜಾನ್, ಪವಿತ್ರಪುರದ ಮಠದ ಪಾರುಪತ್ತೇಗಾರರು ಮತ್ತು ಕೆಲವರು ಪ್ರಮುಖ ಭೂಮಾಲೀಕರೂ ಸಹ ಭಾಗವಹಿಸಿದ್ದರು. ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ವಶಪಡಿಸಿಕೊಂಡ ಮಾತ್ರಕ್ಕೆ ತಾಲ್ಲೂಕಿನ ಜನರನ್ನು ವಶಪಡಿಸಿಕೊಂಡಂತೆ ಆಗಲಿಲ್ಲವೆಂಬುದು ಸಭಿಕರಿಗೆ ಆಗಲೇ ಮನವರಿಕೆಯಾಗಿತ್ತು. ದೀರ್ಘಕಾಲ ಸಭೆಯಲ್ಲಿ ಸಮಾಲೋಚನೆ ನಡೆದನಂತರ, ಸ್ಥಳೀಯ ಅಧಿಕಾರಿಗಳನ್ನೂ ಕೆಲವು ಮಂತ್ರಿಗಳನ್ನೂ ತಮ್ಮ ಕಡೆಗೆ ಒಲಿಸಿಕೊಂಡ ಹೊರತು ಮೋಹನನನ್ನು ಬಗ್ಗಿಸಲಾಗುವುದಿಲ್ಲವೆಂದು ಬಹುಮಂದಿ ಅಭಿಪ್ರಾಯಪಟ್ಟರು.

ಮಂತ್ರಿಗಳನ್ನು ಒಲಿಸಿಕೊಳ್ಳುವ ಜವಾಬ್ದಾರಿಯನ್ನು ಕಲ್ಲಪ್ಪನಿಗೂ, ಸ್ಥಳೀಯ ಅಧಿಕಾರಗಳನ್ನು ಒಲಿಸಿಕೊಳ್ಳುವ ಜವಾಬ್ದಾರಿಯನ್ನು ರಂಗನಾಥನಿಗೂ ವಹಿಸಿದರು. ಕಲ್ಲಪ್ಪನು ಅತಿವಿನಯ ಸವಿಮಾತುಗಳ ಹುಸಿನಗೆಯ ನಿಸ್ಸೀಮನಾಗಿದ್ದನು. ಅವನು ಆಡಳಿತದಲ್ಲಿರುವವರನ್ನು ಸುಲಭವಾಗಿ ತನ್ನ ವಶಪಡಿಕೊಳ್ಳಬಲ್ಲನೆಂಬುದು ಅವನ

ಸ್ನೇಹಿತರಿಗೆ ಗೊತ್ತಿತ್ತು. ರಂಗನಾಥನು ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾಗಿ, ಸ್ಥಳೀಯ ಕ್ಲಬ್ಬಿನ ಕಾರ್ಯದರ್ಶಿಯಾಗಿ ಆಗಲೇ ಕೆಲವರು ಅಧಿಕಾರಿಗಳ ಪರಿಚಯ ಮಾಡಿಕೊಂಡಿದ್ದನು. ಅಲ್ಲದೆ ಪವಿತ್ರಪುರದಲ್ಲಿ ಅತ್ಯಾಧುನಿಕ ನಾಗಕರಿಕರೆನಿಸಿ ಕೊಂಡಿದ್ದವರು ಕದ್ದು ಕುಡಿಯುವುದಕ್ಕಾಗಿ ಮತ್ತು ಜೂಜಾಡುವುದಕ್ಕಾಗಿ ಒಂದು ಗುಪ್ತ ಸಂಘವನ್ನು ಸ್ಥಾಪಿಸಿಕೊಂಡಿದ್ದರು. ರಂಗನಾಥನೂ, ಕೆಲವು ಸ್ಥಳೀಯ ಅಧಿಕಾರಿಗಳೂ, ಆ ಗುಪ್ತ ಸಂಘದ ಸದಸ್ಯರಾಗಿದ್ದರು. ಕುಡಿತದ ಅಥವಾ ಲಂಚದ ಹವ್ಯಾಸವಿರುವ ಅಧಿಕಾರಿಗಳು ಸುಲಭವಾಗಿ ರಂಗನಾಥನ ಬಲೆಗೆ ಬೀಳುತ್ತಿದ್ದರು. ಮೋಹನನಿಗೆ ಲಂಚಕೋರರನ್ನೂ, ಕುಡುಕರನ್ನೂ ಕಂಡರಾಗುತ್ತಿರಲಿಲ್ಲ. ಅವನು ಕೆಲವರು ಲಂಚಕೋರ ಸ್ಥಳಿಯ ಅಧಿಕಾರಿಗಳ ಮೇಲೆ ಮೇಲಾಧಿಕಾರಿಗಳಿಗೂ ಮಂತ್ರಿಗಳಿಗೂ ದೂರು ಹೇಳಿದ್ದನು. ಆ ಅಧಿಕಾರಿಗಳೆಲ್ಲರೂ ರಂಗನಾಥನ ಜೊತೆಯಲ್ಲಿ ಷರೀಕಾಗಿದ್ದರು.

ಪವಿತ್ರಪುರದ ಅಮಲ್ದಾರರು ಸ್ವತಃ ಲಂಚಕೋರರಲ್ಲದಿದ್ದರೂ ಅವರ ಕೈ ಕೆಳಗಿನ ಅಧಿಕಾರಿಗಳಲ್ಲಿದ್ದ ಲಂಚಗುಳಿತನವನ್ನು ನಿಲ್ಲಿಸಲು ಅಸಮರ್ಥರಾಗಿದ್ದರು. ತಾಲ್ಲೂಕು ಕಛೇರಿಯಲ್ಲಿದ್ದ ಗುಮಾಸ್ತರು ಕೆಲವರು ಅದೇ ತಾಲ್ಲೂಕಿನಲ್ಲಿ ಹುಟ್ಟಿ ಬೆಳೆದವರಾಗಿದ್ದು ಹಲವು ವರ್ಷಗಳಿಂದ ಅಲ್ಲೇ ನೌಕರಿಯನ್ನು ಮಾಡುತ್ತಿದ್ದರು. ಅವರ ಪಾಲಿಗೆ ತಾಲ್ಲೂಕ್ ಕಛೇರಿಯು ಒಗ್ಗಿದ ಹುಲ್ಲುಗಾವಲಾಗಿತ್ತು. ಒಗ್ಗಿದ ಹುಲ್ಲುಗಾವಲಿನಲ್ಲಿ ಮೇಯಲು ಅವರಿಗೆ ಸುಲಭವಾಗಿತ್ತು. ಅಮಲ್ದಾರರಿಗೆ ಅಮಲ್ದಾರಿ ಕೆಲಸ ಸರಿಯಾಗಿ ಗೊತ್ತಿರಲಿಲ್ಲ. ಆದ್ದರಿಂದ ಅವರನ್ನು ಕಂಡರೆ ಕೈಕೆಳಗಿನ ಅಧಿಕಾರಿಗಳಿಗೆ ಭಯ ಭಕ್ತಿ ಲವಲೇಶವೂ ಇರಲಿಲ್ಲ. ಮಂತ್ರಿಗಳಾಗಲಿ, ಅಧಿಕಾರಿಗಳಾಗಲಿ ಪ್ರಾಮಾಣಿಕರಾಗಿದ್ದು ನೈತಿಕ ಶಕ್ತಿಯನ್ನು ಪಡೆದು, ತಮ್ಮ ಕೆಲಸವನ್ನು ತಿಳಿದುಕೊಂಡಿದ್ದರೆ ಮಾತ್ರ ಕೈಕೆಳಗಿನ ಅಧಿಕಾರಿಗಳನ್ನು ಹತೋಟಿಯಲ್ಲಿಟ್ಟಿರುವುದು ಸಾಧ್ಯ. ಇಲ್ಲವಾದರೆ ಅವರೇ ಕೈಕೆಳಗಿನ ಅಧಿಕಾರಿಗಳ ಕೈಗೊಂಬೆಗಳಾಗುತ್ತಾರೆ. ಪವಿತ್ರಪುರದ ಅಮಲ್ದಾರರೂ ಸಹ ಗುಮಾಸ್ತರ ಕೈಗೊಂಬೆಯಾಗಿದ್ದರು. ತಾಲ್ಲೂಕು ಕಛೇರಿಯಲ್ಲಿ ಕಾಗದ ಪತ್ರಗಳು ಕಸದ ಗುಡ್ಡೆಯಂತೆ ಬಿದ್ದಿದ್ದವು. ಹಣವಿದ್ದವರಿಗೆ ಅಥವಾ ಪ್ರಭಾವಶಾಲಿಗಳಿಗೆ ಸಂಬಂಧಪಟ್ಟ ಕಾಗದ ಪತ್ರಗಳು ಸುಲಭವಾಗಿ ಚಲಿಸುತ್ತಿದ್ದವು. ಉಳಿದವು ಕೊಳೆಯುತ್ತಿದ್ದವು. ಅನಕ್ಷರಸ್ಥರಾಗಿದ್ದ ಅನಾಮಧೇಯರ ಅರ್ಜಿಗಳನ್ನು ಕೇಳುವವರೇ ಇರಲಿಲ್ಲ. ನೌಕರರ ಕೈ ಬೆಚ್ಚಗಾದಾಗ ಮಾತ್ರ ಒಮ್ಮೊಮ್ಮೆ ಆ ಅರ್ಜಿಗಳು ಚಲಿಸುತ್ತಿದ್ದವು. ಗೇಣಿಶಾಸನವು ಗೇಣಿದಾರರ ರಕ್ಷಣೆಗೋಸ್ಕರ ಮಾಡಿದ್ದ ಕಾನೂನಾಗಿತ್ತು. ಆದರೆ ಗೇಣಿದಾರರ ರಕ್ಷಣೆ ಸ್ಥಳೀಯ ರಾಜಕಾರಣಿಗಳಿಗೂ ಬೇಕಾಗಿರಲಿಲ್ಲ. ಸ್ಥಳೀಯ ಅಧಿಕಾರಿಗಳಿಗೂ ಬೇಕಾಗಿರಲಿಲ್ಲ. ಸ್ಥಳೀಯ ರಾಜಕಾರಣಿಗಳಿಗೆ ತಮಗೆ ಸಿಕ್ಕಬೇಕಾದ್ದು ಸಿಕ್ಕರೆ ಸಾಕಾಗಿತ್ತು. ಸ್ಥಳೀಯ ಅಧಿಕಾರಿಗಳಿಗೆ ತಮಗೆ ಬರಬೇಕಾದ್ದು ಬಂದರೆ ಸಾಕಾಗಿತ್ತು. ನಿರ್ಗತಿಕ ಗೇಣಿದಾರರಿಂದ ಅಧಿಕಾರಿಗಳಿಗಾಗಲಿ ರಾಜಕಾರಣಿಗಳಿಗಾಗಲಿ ಯಾವ ಲಾಭವೂ ದೊರಕುವಂತಿರಲಿಲ್ಲ. ಹಣವಂತ ಭೂಮಾಲೀಕರ ಸಂಪರ್ಕದಿಂದ ಅವರಿಗೆ ಹಲವು ಪ್ರಯೋಜನಗಳಿದ್ದವು.

ಬಡಬಗ್ಗರ ಗೋಳನ್ನು ಕಟ್ಟಿಕೊಂಡು ಅವರಿಗೆ ಆಗಬೇಕಾದ್ದು ಏನು ಇರಲಿಲ್ಲ. ರಂಗನಾಥನೂ, ಅವರ ಮಿತ್ರರೂ ಬಹಿರಂಗವಾಗಿ ಗೇಣಿದಾರರ ರಕ್ಷಣೆಯಾಗಬೇಕೆಂದು ಉಪನ್ಯಾಸಗಳನ್ನು ಮಾಡುತ್ತಿದ್ದರೂ, ಅಂತರಂಗವಾಗಿ ಗೇಣಿಶಾಸನವನ್ನು ಅವರು ವಿರೋಧಿಸುತ್ತಿದ್ದರು.

ದಿನೇ ದಿನೇ ತಾಲ್ಲೂಕಿನ ಆಡಳಿತದಲ್ಲಿ ರಂಗನಾಥನ ಮಿತ್ರಮಂಡಳಿಯವರು ಪ್ರಭಾವ ಹೆಚ್ಚಾಗುತ್ತಾ ಇತ್ತು. ಸ್ಥಳೀಯ ಅಧಿಕಾರಿಗಳನೇಕರು ರಂಗನಾಥ ಮತ್ತು ಕಲ್ಲಪ್ಪನ ಪ್ರಭಾವಕ್ಕೆ ಒಳಗಾಗಿದ್ದರು. ಉಳಿದ ಕೆಲವು ಅಧಿಕಾರಿಗಳಿಗೆ ಮೋಹನನನ್ನು ಕಂಡರೆ ಗೌರವವಿತ್ತು. ಆದರೆ ಅವರಿಗೆ ರಂಗನಾಥನನ್ನೂ ಮತ್ತು ಕಲ್ಲಪ್ಪನನ್ನೂ ಕಂಡರೆ ಭಯವಿದ್ದುದರಿಂದ ಅವರು ಮೋಹನನ ಸಂಗಡ ಮಾತನ್ನಾಡುವುದಕ್ಕೂ ಹೆದರುತ್ತಿದ್ದರು. ಕಲ್ಲಪ್ಪನು ಸುಳ್ಳಿನ ಬಲೆಯನ್ನು ನೇಯುವುದರಲ್ಲಿ ಪ್ರವೀಣನಾಗಿದ್ದನು. ಅವನು ತನಗಾದ ಅಧಿಕಾರಿಗಳ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಿ ಅವರನ್ನು ವರ್ಗ ಮಾಡಿಸುತ್ತಿದ್ದರು. ಆದ್ದರಿಂದ ಪ್ರಾಮಾಣಿಕ ಅಧಿಕಾರಿಗಳು ಅವನಿಗೆ ಹೆದರಿ, ಅವನು ಹೇಳಿದ ಕೆಲಸ ಕಾರ್ಯಗಳನ್ನು ತಡವಿಲ್ಲದೆ ಮಾಡಿ ಕೊಡುತ್ತಿದ್ದರು. ಜಿಲ್ಲಾ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷನಾದ ಮೇಲೆ ತಾಲ್ಲೂಕಿನ ಎಲ್ಲ ವ್ಯವಹಾರಗಳಲ್ಲಿಯೂ ಕಲ್ಲಪ್ಪನ ಕೈವಾಡವಿರುತ್ತಿತ್ತು. ಲಂಚಕೋರ ಅಧಿಕಾರಿಗಳಿಗೆ ಕಲ್ಲಪ್ಪನಿಂದಲೂ, ರಂಗನಾಥನಿಂದಲೂ ರಕ್ಷಣೆ ದೊರೆಯುತ್ತಿತ್ತು. ಆದ್ದರಿಂದ ಆ ಅಧಿಕಾರಿಗಳು ಅವರಿಬ್ಬರ ಆಣತಿಯ ಮೇರೆಗೆ ನಡೆಯುತ್ತಿದ್ದರು. ಕಲ್ಲಪ್ಪನು ಕೆಲವು ಮಂತ್ರಿಗಳಿಗೆ ಮೋಹನನ ವಿಚಾರದಲ್ಲಿ ಇಲ್ಲದ ಸಲ್ಲದ ಚಾಡಿಯನ್ನು ಹೇಳಿ ಅವರ ಮನಸ್ಸು ಕೆಡಿಸಿದ್ದರು. ಆ ಮಂತ್ರಿಗಳ ಮನಸ್ಸಿನಲ್ಲಿ ಮೋಹನನು ಕೆಟ್ಟವನೆಂಬ ಭಾವನೆ ಮೂಡುವಂತೆ ಅವನು ಮಾಡಿದ್ದನು. ಅಲ್ಲದೆ ಗುಂಪು ರಾಜಕಾರಣ ದೆಸೆಯಿಂದ ಕೆಲವರು ಮಂತ್ರಿಗಳಿಗೆ ಮೋಹನನನ್ನು ಕಂಡರಾಗು ತ್ತಿರಲಿಲ್ಲ. ಹೀಗಾಗಿ ಮೋಹನನ ಮಾತು ಮಂತ್ರಿಗಳಲ್ಲಾಗಲಿ ಅಧಿಕಾರಿಗಳಲ್ಲಾಗಲಿ ನಡೆಯುವಂತಿರಲಿಲ್ಲ.

ನೀತಿ ನಿಯಮಗಳಿಗೆ ವಿರುದ್ಧವಾಗಿ ಅನುಕೂಲತೆಗಳನ್ನು ಪಡೆಯಬೇಕೆಂಬ ಆಶೆಯುಳ್ಳವರೆಲ್ಲರೂ ಕಲ್ಲಪ್ಪನನ್ನು ಆಶ್ರಯಿಸಿ ಅವನ ಬಳಿಯಲ್ಲಿ ಸುಳಿದಾಡುತ್ತಿದ್ದರು. ಅವರಿಂದ ಅವನಿಗೆ ಲಾಭವಿತ್ತು. ಅವನಿಂದ ಅವರಿಗೆ ಲಾಭವಿತ್ತು. ಅಕ್ರಮ ವ್ಯವಹಾರಗಳಲ್ಲಿ ತೊಡಗಿರುವವರಿಗೆ ಕಲ್ಲಪ್ಪನು ಗುರುವಾಗಿದ್ದನು. ಅಂತಹ ಜನರನ್ನು ಮೋಹನನು ತನ್ನ ಬಳಿ ಸೇರಿಸುತ್ತಿರಲಿಲ್ಲ. ಅಧಿಕಾರಿಗಳನ್ನೂ, ಮಂತ್ರಿಗಳನ್ನೂ ವಶಪಡಿಸಿಕೊಳ್ಳುವ ಕಲ್ಲಪ್ಪನ ಪ್ರಯೋಗ ತಂತ್ರ ಅಸಾಧಾರಣವಾಗಿತ್ತು. ಅದನ್ನಿಲ್ಲಿ ವಿವರಿಸುವುದು ಅವಶ್ಯಕ. ಕಲ್ಲಪ್ಪನು ಸ್ವರಾಜ್ಯ ಬರುವುದಕ್ಕಿಂತ ಮುಂಚೆ ಸರ್ಕಾರದ ಕೃಪಾಶ್ರಯದಲ್ಲಿ ಬದುಕಿದ್ದವನು. ಸ್ವರಾಜ್ಯ ಬಂದನಂತರ, ಅದರಲ್ಲಿಯೂ ಜಿಲ್ಲಾ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷನಾದ ಮೇಲೆ, ಅವನು ಗಿರಾಕಿಗಳ ಖರ್ಚಿನಲ್ಲಿ ತಿಂಗಳಿಗೆ ಕನಿಷ್ಠ ಪಕ್ಷ ಹದಿನೇಳು ದಿನಗಳ ಕಾಲ ರಾಜಧಾನಿಯಲ್ಲಿರುತ್ತಿದ್ದನು. ಅಧಿಕಾರದಲ್ಲಿರುವವರನ್ನು ಹೊಗಳಿದರೆ ಅವರನ್ನು

ಸುಲಭವಾಗಿ ಒಲಿಸಿಕೊಳ್ಳಬಹುದೆಂಬುದನ್ನು ಅವನು ತಿಳಿದುಕೊಂಡಿದ್ದನು. ಪವಿತ್ರಪುರಕ್ಕೆ ಮಂತ್ರಿಗಳು ಅಥವಾ ಅಧಿಕಾರಿಗಳು ಆಗಮಿಸುತ್ತಾರೆಂಬುದನ್ನು ತಿಳಿದರೆ ಅವನು ಅವರ ಆಗಮನಕ್ಕಾಗಿ ಪ್ರವಾಸಿಮಂದಿರದಲ್ಲಿ ಕಾದಿರುತ್ತಿದ್ದನು. ಪ್ರವಾಸಿ ಮಂದಿರಕ್ಕೆ ಅತಿಥಿಗಳು ಬಂದೊಡನೆ ಎರಡು ನಿಂಬೆಹಣ್ಣುಗಳನ್ನು ಅವರಿಗೆ ಕೊಟ್ಟು ತನ್ನ ಪರಿಚಯ ಮಾಡಿಕೊಳ್ಳುತ್ತಿದ್ದನು. ಪರಿಚಯ ಮಾಡಿಕೊಳ್ಳುವಾಗ ಜಿಲ್ಲಾ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷ, ಮಾಜಿ ಜಿಲ್ಲಾ ಬೋರ್ಡ್ ಸದಸ್ಯ, ಸಹಕಾರ ಸಂಘದ ಅಧ್ಯಕ್ಷ ಮುಂತಾಗಿ ತನ್ನ ಬಿರುದಾವಳಿಗಳನ್ನು ಅತಿಥಿಗಳಿಗೆ ವಿವರಿಸುತ್ತಿದ್ದನು. ಒಮ್ಮೊಮ್ಮೆ ಅವನ ಜೊತೆಯಲ್ಲಿದ್ದ ಸ್ಥಳೀಯ ಲಂಚಕೋರ ಅಧಿಕಾರಿಗಳು ಅವನ ಬಿರುದಾವಳಿಗಳನ್ನು ಅತಿಥಿಗಳಿಗೆ ವಿವರಿಸುತ್ತಿದ್ದರು. ಅತಿಥಿಗಳು ಸಣ್ಣ ಅಧಿಕಾರಿಗಳಾಗಿದ್ದರೆ ಕಲ್ಲಪ್ಪನು ಬಹಳ ಸಲಿಗೆಯಿಂದ ಎಷ್ಟೋ ವರ್ಷಗಳ ಹಳೆಯ ಸ್ನೇಹಿತನಂತೆ ಮಾತನಾಡಿಸುತ್ತಿದ್ದನು. ಅತಿಥಿಗಳು ಮಂತ್ರಿಗಳಾಗಿದ್ದರೆ ಅಥವಾ ಉನ್ನತ ಮಟ್ಟದ ಅಧಿಕಾರಿಗಳಾಗಿದ್ದರೆ ಹೂವಿನ ಹಾರಗಳನ್ನು ಅರ್ಪಿಸಿ ನಯವಿನಯ ಭಯ ಭಕ್ತಿಗಳನ್ನು ಪ್ರದರ್ಶಿಸುತ್ತಿದ್ದನು. ಅವರನ್ನು ಕುರಿತು "ತಾವು ದೊಡ್ ಮನಸ್ಸು ಮಾಡಿ ನಮ್ಮೂರಿಗೆ ಬಂದದ್ದು ನಮ್ ಪುಣ್ಯ. ತಾವು ಅಧಿಕಾರಕ್ಕೆ ಬಂದ್ಮೇಲೆ ಆಡಳಿತ ಎಷ್ಟೋ ಸುಧಾರಿಸಿದೆ" ಎಂದು ಅವರನ್ನು ಹೊಗಳುತ್ತಿದ್ದನು. ಪಾಪ! ಅತಿಥಿಗಳಿಗೆ ಕಲ್ಲಪ್ಪನ ಬಂಡವಾಳ ಹೇಗೆ ಗೊತ್ತಾಗಬೇಕು? ಅವನೊಬ್ಬ ಸುಸಂಸ್ಕೃತ ವ್ಯಕ್ತಿಯೆಂದು ಅವರು ತಿಳಿಯುತ್ತಿದ್ದರು. ಜಿಲ್ಲಾ ಕಾಂಗ್ರೆಸ್ ಉಪಾಧ್ಯಕ್ಷನಾದ ಮೇಲೆ ಅವನು ಕೆಲವರನ್ನು ಮಂತ್ರಿಗಳ ಸ್ನೇಹವನ್ನು ಸಂಪಾದಿಸಿದನು. ಪಾಪ! ಮಂತ್ರಿಗಳಿಗೂ ಸಹ ಅವನ ಬಂಡವಾಳ ಗೊತ್ತಾಗುತ್ತಿರಲಿಲ್ಲ. ಅವನೊಬ್ಬ ದೊಡ್ಡ ಕಾಂಗ್ರೆಸ್ ಮುಖಂಡನೆಂದು ಮಂತ್ರಿಗಳು ಭಾವಿಸುತ್ತಿದ್ದರು. ಕಲ್ಲಪ್ಪನು ರಾಜಧಾನಿಗೆ ಬಂದಾಗಲೆಲ್ಲಾ ಮಂತ್ರಿಗಳನ್ನು ನೋಡುವ ಪದ್ಧತಿಯನ್ನಿಟ್ಟಿದ್ದನು. ಕೆಲಸವಿರಲಿ ಅಥವಾ ಇಲ್ಲದಿರಲಿ ಎಲ್ಲಾ ಮಂತ್ರಿಗಳನ್ನೂ, ಮುಖ್ಯಮಂತ್ರಿಗಳನ್ನೂ ಕಂಡು ನಿಂಬೆಹಣ್ಣುಗಳನ್ನು ಕೊಟ್ಟು ಅವರ ಕ್ಷೇಮ ಸಮಾಚಾರವನ್ನು ವಿಚಾರಿಸುತ್ತಿದ್ದನು. ಕಲ್ಲಪ್ಪನು ಸಮಯ ಸಂದರ್ಭವನ್ನು ನೋಡಿ ಮಂತ್ರಿಗಳಿಗೆ ಆಗದ ರಾಜಕಾರಣಿಗಳನ್ನು ಹಳಿದು ಮಾತನಾಡುತ್ತಿದ್ದನು. ಒಮ್ಮೊಮ್ಮೆ ಅವರ ಮೇಲೆ ಚಾಡಿಯನ್ನು ಚುಚ್ಚುತ್ತಿದ್ದನು.

ರಾಜಧಾನಿಯಿಂದ ಪವಿತ್ರಪುರಕ್ಕೆ ವಾಪಸು ಹೋದಾಗಲೆಲ್ಲಾ ಕಲ್ಲಪ್ಪನು ರಾಜಧಾನಿಯಲ್ಲಿ ತಾನು ಮಾಡಿದ್ದ ಸಾಹಸದ ಕಾರ್ಯಗಳನ್ನು ಸವಿಸ್ತಾರವಾಗಿ ಪವಿತ್ರಪುರದ ಸಾರ್ವಜನಿಕರಲ್ಲೂ, ಅಧಿಕಾರಿಗಳಲ್ಲೂ ವರ್ಣಿಸುತ್ತಿದ್ದನು. ಮುಗ್ಧರಾದ ಹಳ್ಳಿಯ ಜನರ ಎದುರು, ಅಮಲ್ದಾರರಿಂದ ಹಿಡಿದು ಮಂತ್ರಿಗಳವರೆಗೆ ತನ್ನ ಮಾತು ನಡೆಯುತ್ತದೆಯೆಂದು ಕೊಚ್ಚಿ ಕೊಳ್ಳುತ್ತಿದ್ದನು. ರಾಜಧಾನಿಯಿಂದ ಪವಿತ್ರಪುರಕ್ಕೆ ಅವನು ಹಿಂದಿರುಗಿದೊಡನೆ ಅಮಾಲ್ದಾರರ ಬಳಿಗೆ ಹೋಗಿ ತಾನು ರಾಜಧಾನಿಯಲ್ಲಿದ್ದಾಗ ರೆವಿನ್ಯೂ ಸಚಿವರನ್ನು ಭೇಟಿಮಾಡಿದ್ದುದನ್ನೂ, ಅವರು ತಮಗೆ ಕಾಫಿಯನ್ನು ತರಿಸಿಕೊಟ್ಟಿದ್ದನ್ನೂ ತನ್ನನ್ನು ಅವರು ಊಟಕ್ಕೆ ಕರೆದುದನ್ನೂ, ಮುಖ್ಯ ಸಚಿವರು ಆ ದಿನ ತನ್ನನ್ನು ಆಹ್ವಾನಿಸಿದ್ದರಿಂದ

ತಾನು ರೆವಿನ್ಯೂ ಸಚಿವರಲ್ಲಿಗೆ ಊಟಕ್ಕೆ ಹೋಗಲಾಗದೆ ಇದ್ದುದನ್ನೂ, ತಾನು ರಾಜಧಾನಿಯಲ್ಲಿದ್ದ ವಿಚಾರವನ್ನು ಮುಖ್ಯ ಸಚಿವರು ಹೇಗೋ ತಿಳಿದುಕೊಂಡು ತಾನಿದ್ದ ಹೋಟೇಲಿಗೆ ಫೋನು ಮಾಡಿದ್ದನ್ನೂ, ಮುಖ್ಯ ಸಚಿವರು ತಮ್ಮ ಕಾರನ್ನು ಹೋಟೇಲಿಗೆ ಕಳುಹಿಸಿ ತನ್ನನ್ನು ಕರೆಯಿಸಿಕೊಂಡಿದ್ದನ್ನೂ, ತಾನು ಅವರಲ್ಲಿ ಊಟಮಾಡಿದ್ದನ್ನೂ, ತಾಲ್ಲೂಕಿನ ಆಡಳಿತ ಹೇಗಿದೆಯೆಂದು ಅವರು ವಿಚಾರಿಸಿದ್ದನ್ನೂ, ಆಡಳಿತ ಸುಲಲಿತವಾಗಿದೆಯೆಂದು ತಾನು ಹೇಳಿದುದನ್ನೂ, ವಿವರಿಸುತ್ತಿದ್ದನು. ಅನಂತರ ಪೊಲೀಸ್ ಇನ್‌ಸ್ಪೆಕ್ಟರ ಬಳಿಗೆ ಹೋಗಿ ತಾನು ಗೃಹ ಸಚಿವರನ್ನು ನೋಡಿದುದಾಗಿಯೂ, ಅವರೊಡನೆ ಕಾಫಿಯನ್ನು ಕುಡಿದುದಾಗಿಯೂ, ಊರಿಗೆ ಬರುವಾಗ ಅವರ ಕಾರಿನಲ್ಲೇ ರೈಲ್ವೇ ಸ್ಟೇಷನ್‌ಗೆ ಬಂದುದಾಗಿಯೂ, ಹಲವು ಸುಳ್ಳಿನ ಕಂತೆಗಳನ್ನು ಇನ್‌ಸ್ಪೆಕ್ಟರ್ ಮುಂದಿಡುತ್ತಿದ್ದನು. ಸ್ಥಳೀಯ ಅಧಿಕಾರಿಗಳು ಅವನು ಹೇಳುತ್ತಿದ್ದ ಕತೆಗಳನ್ನು ಬಹಳ ಆಸಕ್ತಿಯಿಂದ ಕೇಳುತ್ತಿದ್ದರು. ಅವರ ದೃಷ್ಟಿಯಲ್ಲಿ ಅವನೊಬ್ಬ ಗಣ್ಯಮುಖಂಡನಾಗಿದ್ದನು. ಅವರು ತಮ್ಮ ವರ್ಗಾವರ್ಗಿಗಳ ವಿಚಾರದಲ್ಲಿ ಮತ್ತು ಸಂಬಳ ಸಾರಿಗೆಗಳ ವಿಚಾರದಲ್ಲಿ ಆಗಾಗ ಅವನನ್ನು ಆಶ್ರಯಿಸುತ್ತಿದ್ದರು. ಅಧಿಕಾರಿಗಳೊಡನೆ ಕಲ್ಲಪ್ಪನ ಸಂಪರ್ಕ ಹೆಚ್ಚಿದಂತೆಲ್ಲಾ ಅವನ ವರಮಾನವೂ ಹೆಚ್ಚುತ್ತಿತ್ತು. ಕಲ್ಲಪ್ಪನು ಪವಿತ್ರಪುರಕ್ಕೆ ಬಂದ ಮಂತ್ರಿಗಳನ್ನು ತನ್ನ ಮನೆಗೆ ಆಹ್ವಾನಿಸುತ್ತಿದ್ದನು. ಮಂತ್ರಿಗಳ ಮೇಲಿನ ಪ್ರೇಮದಿಂದ ಅವರನ್ನು ಆಹ್ವಾನಿಸುತ್ತಿರಲಿಲ್ಲ; ಅಧಿಕಾರಿಗಳಲ್ಲಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳಲಿಕ್ಕಾಗಿ ಆಹ್ವಾನಿಸುತ್ತಿದ್ದನು.

ಇತ್ತ ರಂಗನಾಥನೂ ಸಹ ಅಧಿಕಾರಿಗಳ ಸಂಪರ್ಕವನ್ನು ಬೆಳೆಸಿಕೊಂಡಿದ್ದನು. ಅಂದು ಪವಿತ್ರಪುರದ ತಾಲ್ಲೂಕು ಒಬ್ಬ ಸೂಪರಿಂಟೆಂಡಿಂಗ್ ಇಂಜನೀಯರವರ ಅಧಿಕಾರ ವ್ಯಾಪ್ತಿಗೆ ಒಳಗಾಗಿತ್ತು. ಆ ಇಂಜನೀಯರು ಹಡಗು ನುಂಗುವ ಮಹನೀಯರಾಗಿದ್ದರು. ಆ ಇಂಜನೀಯರೂ, ರಂಗನಾಥನೂ ತುಂಬಾ ಸ್ನೇಹಿತರಾಗಿದ್ದರು. ಅವರ ಸಹಾಯದಿಂದ ರಂಗನಾಥನು ಕಂಟ್ರಾಕ್ಟ್ ನೆಪದಲ್ಲಿ ಲಕ್ಷಾಂತರ ರೂಪಾಯಿಗಳನ್ನು ಸಂಪಾದನೆ ಮಾಡುತ್ತಿದ್ದನು. ಸರ್ಕಾರದವರು ಕಾಮಗಾರಿಗಳಿಗಾಗಿ ಖರ್ಚುಮಾಡುತ್ತಿದ್ದ ಹಣದಲ್ಲಿ ಮೂರನೆ ಒಂದು ಭಾಗವನ್ನು ಆ ಇಂಜನೀಯರೂ, ರಂಗನಾಥನೂ ಹಂಚಿಕೊಳ್ಳುತ್ತಿದ್ದರು. ನಿರಾಯಾಸವಾಗಿ ಬರುತ್ತಿದ್ದ ಹೇರಳವಾದ ಅಕ್ರಮಲಾಭದಲ್ಲಿ ರಂಗನಾಥನು ರಾಜಕಾರಣಕ್ಕೋಸ್ಕರ ಕೆಲವು ಭಾಗವನ್ನು ಮೀಸಲಾಗಿಟ್ಟಿದ್ದನು. ಆ ರೀತಿ ಮೀಸಲಾಗಿಟ್ಟ ಹಣದಿಂದಲೇ ಮಂಗಳದಾಸನ ಹೆಸರಿನಲ್ಲಿ ದಿನಪತ್ರಿಕೆಯನ್ನು ಹೊರಡಿಸುತ್ತಿದ್ದನು. ಆ ಹಣದಿಂದಲೇ ತನ್ನದೇ ಆದ ಆಧುನಿಕ ರೀತಿಯ ಅತಿಥಿಗೃಹವನ್ನೂ ಸಹ ಕಟ್ಟಿಸಿದನು. ಪವಿತ್ರಪುರಕ್ಕೆ ಬರುತ್ತಿದ್ದ ಇಂಜನಿಯರುಗಳನ್ನೂ, ದೊಡ್ಡ ಅಧಿಕಾರಿಗಳನ್ನೂ ತನ್ನ ಜೇಬಿಗೆ ಹಾಕಿಕೊಳ್ಳುವ ಉದ್ದೇಶದಿಂದ ಆ ಅತಿಥಿಗೃಹವನ್ನು ಕಟ್ಟಿಸಿದನು. ಆ ಅತಿಥಿಗೃಹದಲ್ಲಿ ಉಳಿದುಕೊಳ್ಳುತ್ತಿದ್ದ ಸಾಹೇಬರುಗಳಿಗೆ ಎಲ್ಲ ವಿಧವಾದ ಸೌಕರ್ಯಗಳನ್ನೂ ಅವನು ಒದಗಿಸುತ್ತಿದ್ದನು. ಕುಡಿಯುವ

ಅಭ್ಯಾಸವಿದ್ದವರಿಗೆ ಬ್ರಾಂದಿ, ವ್ಹಿಸ್ಕಿಗಳನ್ನು ಒದಗಿಸುತ್ತಿದ್ದನು. ಅವನೊಬ್ಬ ಸಭ್ಯನೆಂಬ ಭಾವನೆಯಿಂದ ಮೋಸಹೋಗಿ ಕೆಲವು ಒಳ್ಳೆಯ ಅಧಿಕಾರಿಗಳೂ, ಒಳ್ಳೆಯ ರಾಜಕಾರಣಿಗಳೂ, ಆ ಭವನದಲ್ಲಿ ಒಮ್ಮೊಮ್ಮೆ ತಂಗಿರುತ್ತಿದ್ದರು. ಕುಡುಕರೂ, ಲಂಚಕೋರರೂ ಆಗಿದ್ದವರು ಮಾತ್ರ ಸರ್ಕಾರಿ ಪ್ರವಾಸಿ ಮಂದಿರಕ್ಕೆ ಹೋಗದೆ ರಂಗನಾಥನ ಆತಿಥ್ಯದಲ್ಲೇ ತಮ್ಮ ಪ್ರವಾಸದ ಅವಧಿಯನ್ನು ಸುಖವಾಗಿ ಕಳೆಯುತ್ತಿದ್ದರು.

ಪವಿತ್ರಪುರದಲ್ಲಿ ಪಾನ ನಿರೋಧ ಜಾರಿಗೆ ಬಂದನಂತರ ಸಂಕಪೂಜಾರಿಯು ಕಳ್ಳಬಟ್ಟಿ ಸಾರಾಯಿ ಉದ್ಯಮದಲ್ಲಿ ನಿರತನಾಗಿದ್ದನು. ಅಂದು ಪವಿತ್ರಪುರದಲ್ಲಿ ದಕ್ಷರೂ, ಪ್ರಮಾಣಿಕರೂ, ನಿಷ್ಪಕ್ಷಪಾತಿಗಳೂ ಆಗಿದ್ದ ಪೊಲೀಸ್ ಇನ್‌ಸ್ಪೆಕ್ಟರೊಬ್ಬರಿದ್ದರು. ಅವರು ಯಾರಿಗೂ ಹೆದರದೆ ಇರತಕ್ಕ ಅಧಿಕಾರಿಗಳಾಗಿದ್ದರು. ಒಂದು ದಿನ ಆ ಇನ್‌ಸ್ಪೆಕ್ಟರು ತಮ್ಮ ಸಿಬ್ಬಂದಿಯೊಡನೆ ಕಳ್ಳಬಟ್ಟಿ ಗಡಂಗಿಗೆ ಮುತ್ತಿಗೆ ಹಾಕಿದರು. ಅದೃಷ್ಟವಶಾತ್ ಸಂಕಪೂಜಾರಿಯು ಆ ದಿನ ಅಲ್ಲಿರಲಿಲ್ಲ. ಆತನ ಭಾವ ಡೊಂಕಪೂಜಾರಿಯೂ, ಭಟ್ಟಿ ಇಳಿಸುವ ಆಳುಗಳೂ ಪೋಲಿಸರ ಕೈಗೆ ಸಿಕ್ಕಿ ಬಿದ್ದರು. ಅವರ ಮೇಲೆ ಮೊಕದ್ದಮೆ ನಡೆದು, ಅವರೆಲ್ಲರಿಗೂ ತಲಾ ಮೂರು ತಿಂಗಳ ಕಠಿಣಶಿಕ್ಷೆಯಾಯಿತು. ಆ ಘಟನೆಯಿಂದ ಸಂಕಪೂಜಾರಿಯು ಹೆದರಿ ತಲ್ಲಣಿಸಿಹೋಗಿದ್ದನು. ಆ ಪೊಲೀಸ್ ಇನ್‌ಸ್ಪೆಕ್ಟರು ಪವಿತ್ರಪುರ ತಾಲ್ಲೂಕಿನಲ್ಲಿರುವವರೆಗೆ ತನ್ನ ಕಳ್ಳ ವ್ಯಾಪಾರ ಸುಸೂತ್ರವಾಗಿ ಸಾಗಲಾರದೆಂಬ ತೀರ್ಮಾನಕ್ಕೆ ಬಂದಿದ್ದನು. ಆದರೆ ಸಲೀಸಾಗಿ ಯಾವ ಕಷ್ಟವೂ ಇಲ್ಲದೆ ಬರುತ್ತಿದ್ದ ಹೇರಳವಾದ ವರಮಾನವನ್ನು ಸುಲಭವಾಗಿ ಬಿಡಲು ಅವನು ಸಿದ್ಧನಾಗಿರಲಿಲ್ಲ. ಆದ್ದರಿಂದ ಹೇಗಾದರೂ ಮಾಡಿ ಇನ್‌ಸ್ಪೆಕ್ಟರನ್ನು ವರ್ಗಮಾಡಿಸಬೇಕೆಂದು ಅವನು ಸಂಕಲ್ಪ ಮಾಡಿದನು. ಸಂಕಪೂಜಾರಿಯು ರಂಗನಾಥನನ್ನೂ, ಕಲ್ಲಪ್ಪನನ್ನೂ ಕಂಡು ತನ್ನ ಕಷ್ಟವನ್ನು ಅವರಲ್ಲಿ ನಿವೇದಿಸಿಕೊಂಡನು. ರಂಗನಾಥನ ರಾಜಕಾರಣಕ್ಕೆ ಸಂಕಪೂಜಾರಿಯು ಬಲಗೈಯಂತಿದ್ದನು. ಕಳ್ಳಭಟ್ಟಿ ಉದ್ಯಮದಿಂದ ಬರುತ್ತಿದ್ದ ಹಣದಲ್ಲಿ ಸ್ವಲ್ಪ ಭಾಗವನ್ನು ಸಂಕಪೂಜಾರಿಯೇ ರಂಗನಾಥ ಮಿತ್ರಮಂಡಳಿಯವರ ರಾಜಕಾರಣಕ್ಕಾಗಿ ಕೊಡುತ್ತಿದ್ದನು. ಆದ್ದರಿಂದ ರಂಗನಾಥನಾಗಲಿ ಕಲ್ಲಪ್ಪನಾಗಲಿ ಸಂಕಪೂಜಾರಿಯನ್ನು ಕೈಬಿಡಲು ಸಿದ್ಧರಾಗಿರಲಿಲ್ಲ. ಇನ್‌ಸ್ಪೆಕ್ಟರನ್ನು ವರ್ಗಮಾಡಿಸುವುದಾಗಿ ಅವರಿಬ್ಬರೂ ಪೂಜಾರಿಗೆ ಧೈರ್ಯ ಹೇಳಿದರು. ಅಂದಿನಿಂದ ಅವರಿಬ್ಬರೂ ಸೇರಿ ನಿಷ್ಠಾವಂತ ಇನ್‌ಸ್ಪೆಕ್ಟರ ಮೇಲೆ ಪ್ರತಿವಾರ ಒಂದೆರಡು ದೂರುಗಳು ಸರ್ಕಾರಕ್ಕೆ ಹೋಗುವಂತೆ ಮಾಡಿದರು. ಸರ್ಕಾರಕ್ಕೆ ಹೋಗತಕ್ಕ ಕೆಲವು ಅರ್ಜಿಗಳಿಗೆ ಸಂಕಪೂಜಾರಿಯ ಆಳುಗಳಿಂದ ಸಹಿ ಹಾಕಿಸುತ್ತಿದ್ದರು. ಇನ್ನೂ ಕೆಲವು ಅರ್ಜಿಗಳಿಗೆ ರಂಗನಾಥನ ಕೂಲಿಯಾಳುಗಳ ರುಜುಗಳನ್ನು ಹಾಕಿಸುತ್ತಿದ್ದರು. ಮತ್ತೆ ಕೆಲವು ಅರ್ಜಿಗಳಲ್ಲಿ ಅನಾಮಧೇಯ ವ್ಯಕ್ತಿಗಳ ಹೆಸರುಗಳನ್ನು ನಮೂದು ಮಾಡುತ್ತಿದ್ದರು. ಆ ಅರ್ಜಿಗಳಲ್ಲಿ ಇನ್‌ಸ್ಪೆಕ್ಟರ ಮೇಲೆ ನಾನಾ ಆಪಾದನೆಗಳನ್ನು ಮಾಡಿದ್ದರು. ಮೂರು ನಾಲ್ಕು ತಿಂಗಳ ಅವಧಿಯಲ್ಲಿ ಇನ್‌ಸ್ಪೆಕ್ಟರ ವಿರುದ್ಧ ಅರ್ಜಿಗಳ ಹೊರೆಯೇ ಸರ್ಕಾರಕ್ಕೆ ಹೋಗುವಂತೆ ಮಾಡಿದ್ದರು.

ಆ ಅರ್ಜಿಗಳನ್ನು ನೋಡಿ ಗೃಹಸಚಿವರಿಗೆ ಸ್ವಾಭಾವಿಕವಾಗಿ ಇನ್‌ಸ್ಪೆಕ್ಟರ ಮೇಲೆ ಅನುಮಾನ ಉಂಟಾಯಿತು.

ಅಷ್ಟು ಹೊತ್ತಿಗೆ ಸರಿಯಾಗಿ ಒಂದು ದಿನ ಕಲ್ಲಪ್ಪನ ಸವಾರಿ ಯಾವುದೋ ಬೇರೆ ಕೆಲಸದ ನೆಪದಲ್ಲಿ ಗೃಹಸಚಿವರನ್ನು ಕಂಡು, ಅವರ ಯೋಗಕ್ಷೇಮವನ್ನು ವಿಚಾರಿಸಿ, ಅವರ ದಕ್ಷತೆಯನ್ನು ಹೊಗಳಿ, ಅವರ ಆಗಮನಕ್ಕಾಗಿ ಪವಿತ್ರಪುರ ತಾಲ್ಲೂಕಿನ ಜನರು ಹಾತೊರೆಯುತ್ತಿದ್ದಾರೆಂದು ಹೇಳಿ, ಅವರನ್ನು ಪವಿತ್ರಪುರಕ್ಕೆ ಆಹ್ವಾನಿಸಿದನು. ಅಲ್ಲದೆ ಮಾತುಕತೆಯಾದನಂತರ ಸಚಿವರ ಕೊಠಡಿಯಿಂದ ಹೊರಡುತ್ತಿರುವಾಗ ತನಗೇನೂ ಸಂಬಂಧವಿಲ್ಲದವನಂತೆ ನಟಿಸುತ್ತಾ, ಪೊಲೀಸ್ ಇನ್‌ಸ್ಪೆಕ್ಟರ ಮೇಲೆ ಸಾರ್ವಜನಿಕರ ದೂರು ಹೆಚ್ಚಾಗಿದೆಯೆಂದೂ, ಮೋಹನನೂ ಇನ್‌ಸ್ಪೆಕ್ಟರೂ ಸೇರಿ ಲಕ್ಷಾಂತರ ರೂಪಾಯಿಗಳ ಅಕ್ರಮ ಸಂಪಾದನೆ ಮಾಡಿದ್ದರೆಂದು ಜನರಾಡಿಕೊಳ್ಳುತ್ತಿದ್ದಾರೆಂದೂ, ಹೇಳಿ ಹೊರಟು ಹೋದನು. ಅಲ್ಲಿಂದ ಕಲ್ಲಪ್ಪನು ನೇರವಾಗಿ ಪೊಲೀಸ್ ಇಲಾಖೆಯ ಮುಖ್ಯಾಧಿಕಾರಿಗಳ ಬಳಿಗೆ ಹೋಗಿ, ಪವಿತ್ರಪುರ ತಾಲ್ಲೂಕಿನ ಹಳ್ಳಿಯೊಂದಕ್ಕೆ ಪೊಲೀಸ್ ಠಾಣೆಯ ಅವಶ್ಯಕತೆ ಇದೆಯೆಂದು ಹೇಳಿಕೊಳ್ಳುವವನಂತೆ ನಟಿಸಿ ಮಾತನಾಡುತ್ತಿದ್ದಾಗ "ಸಾಹೇಬರು ಪೊಲೀಸ್ ಇಲಾಖೆಯ ಛಾರ್ಜ್ ತಗೊಂಡಮ್ಯಾಲೆ ಬಹಳ ಚಂದಾಗಿ ಕೆಲ್ಸಾ ನಡೀತಿದೆ. ಇದು ತಮ್ಮುಂದೆ ಹೇಳೂದಲ್ಲ. ಹಿಂದೆ ಎಷ್ಟೋ ಅಧಿಕಾರಿಗಳು ಬಂದ್ರು ಹೋದ್ರು, ಆದ್ರೆ ತಮ್ಮ ಕಾಲ್ದಲ್ಲಿ ದಕ್ಷತೆ ಹೆಚ್ಚಾಗಿರುವಂತೆ ಹಿಂದೆ ಯಾವಾಗ್ಲೂ ಇರ್ಲಿಲ್ಲ" ಎಂದು ಹೇಳಿದನು. ಸಾಹೇಬರು ಅವನ ಮಾತನ್ನು ಕೇಳಿ ಆನಂದಭರಿತರಾದರು. ಅವರು ಕಲ್ಲಪ್ಪನಿಗೆ ಕಾಫಿಯನ್ನು ತರಿಸಿಕೊಟ್ಟು, ಇಲಾಖೆಯಲ್ಲಿ ಏನಾದರೂ ನ್ಯೂನತೆಗಳು ಕಂಡು ಬಂದರೆ ತಕ್ಷಣ ತಮಗೆ ತಿಳಿಸಬೇಕೆಂದು ಹೇಳಿದರು. ಕಲ್ಲಪ್ಪನು ಆ ಸಮಯವನ್ನುಪಯೋಗಿಸಿಕೊಂಡು ಪವಿತ್ರಪುರದ ಪೊಲೀಸ್ ಇನ್‌ಸ್ಪೆಕ್ಟರಮೇಲೆ ಇಲ್ಲದ ಸಲ್ಲದ ಚಾಡಿಯನ್ನು ಹೇಳಿ ಹೊರಟುಹೋದನು. ಇನ್‌ಸ್ಪೆಕ್ಟರನ್ನು ವರ್ಗ ಮಾಡಬೇಕೆಂದು ಅವನು ಮಂತ್ರಿಗಳೊಡನೆಯೂ ಹೇಳಲಿಲ್ಲ; ಇಲಾಖೆಯ ಮುಖ್ಯಾಧಿಕಾರಿಗಳೊಡನೆಯೂ ಹೇಳಲಿಲ್ಲ. ಆದರೆ ಅವನಾಡಿದ ಚಾಡಿಯ ಮಾತುಗಳು ಮಂತ್ರಿಗಳ ಮೇಲೂ, ಇಲಾಖೆಯ ಮುಖ್ಯ ಅಧಿಕಾರಿಗಳ ಮೇಲೂ ಸಾಕಾದಷ್ಟು ಪರಿಣಾಮವನ್ನು ಉಂಟು ಮಾಡಿದ್ದವು. ಆ ಪರಿಣಾಮದ ದೆಸೆಯಿಂದ ಎಂಟು ದಿನಗಳೊಳಗಾಗಿ ನಿಷ್ಠಾವಂತರಾಗಿದ್ದ ಪೊಲೀಸ್ ಇನ್‌ಸ್ಪೆಕ್ಟರಿಗೆ ಬೇರೊಂದು ಜಿಲ್ಲೆಗೆ ವರ್ಗವಾಯಿತು. ಅವರ ಬದಲಿಗೆ ಪವಿತ್ರಪುರಕ್ಕೆ ಬಂದಿದ್ದ ಪೊಲೀಸ್ ಇನ್‌ಸ್ಪೆಕ್ಟರು ಶುದ್ಧ ಕುಡುಕರೂ, ಲಂಚಕೋರರೂ ಆಗಿದ್ದರು. ಸಾಲದುದಕ್ಕೆ ಅವರು ಕಲ್ಲಪ್ಪನ ದೂರದ ಬಂಧುವಾಗಿದ್ದರು. ಕಲ್ಲಪ್ಪನೂ, ರಂಗನಾಥನೂ ಸೇರಿ ಆ ಇನ್‌ಸ್ಪೆಕ್ಟರ ಸಹಾಯದಿಂದ ಏನುಬೇಕಾದರೂ ಮಾಡಬಹುದಾಗಿತ್ತು. ಹೊಸ ಇನ್‌ಸ್ಪೆಕ್ಟರು ಪವಿತ್ರಪುರಕ್ಕೆ ಬಂದಿದ್ದು ಸಂಕಪೂಜಾರಿಗೆ ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತಾಗಿತ್ತು. ಅವನ ಕಳ್ಳಭಟ್ಟಿ ಉದ್ಯಮ ನಿರಾತಂಕವಾಗಿ ನಡೆಯಲು ಯಾವ ಎಡರು ತೊಡರುಗಳೂ ಇರಲಿಲ್ಲ. ಸಂಕಪೂಜಾರಿಯೂ,

ರಂಗನಾಥನೂ ಇನ್‌ಸ್ಪೆಕ್ಟರನ್ನು ಆಗಾಗ ತಮ್ಮ ಮನೆಗೆ ಆಹ್ವಾನಿಸಿ ಔತಣ ಮಾಡಿಸುತ್ತಿದ್ದರು. ವಿದೇಶೀ ಬೀರು ಮತ್ತು ವ್ಹಿಸ್ಕಿಗಳನ್ನು ತರಿಸಿ ಮೂವರೂ ಜ್ಞಾನತಪ್ಪುವಷ್ಟು ಕುಡಿಯುತ್ತಿದ್ದರು. ಸಂಕಪೂಜಾರಿಯು ಇನ್‌ಸ್ಪೆಕ್ಟರಿಗೆ ತಿಂಗಳಿಗೆ ಒಂದು ಸಾವಿರ ರೂಪಾಯಿಗಳವರೆಗೆ ಮಾಮೂಲು ಕೊಡುತ್ತಿದ್ದನು. ಬರುಬರುತ್ತಾ ಪೊಲೀಸ್ ಇನ್‌ಸ್ಪೆಕ್ಟರ್ ರಂಗನಾಥನ ಮತ್ತು ಅವನ ಸ್ನೇಹಿತರ ಕೈಗೊಂಬೆಯಾದರು. ತಾಲ್ಲೂಕಿನ ಇತರ ಪೊಲೀಸ್ ಅಧಿಕಾರಿಗಳು ರಂಗನಾಥ ಮುಂತಾದವರನ್ನು ಕಂಡರೆ ಹೆದರಿ ನಡುಗುತ್ತಿದ್ದರು.

ಆಡಳಿತದ ಹೆಸರಿನಲ್ಲಿ ತಾಲ್ಲೂಕಿನಲ್ಲಾಗುತ್ತಿದ್ದ ಅನಾಹುತವನ್ನು ನೋಡಿ ಮೋಹನನೂ, ಮೂರ್ತಿಯೂ ಕಿಡಿಕಿಡಿಯಾಗಿದ್ದರು. ದುಷ್ಟ ಶಿಕ್ಷಣ ಶಿಷ್ಟಪರಿಪಾಲನೆ ಆಡಳಿತದ ಗುರಿಯಾಗಿರಬೇಕು. ಸಜ್ಜನರ ಪುರಸ್ಕಾರ ಮತ್ತು ದುರ್ಜನರ ತಿರಸ್ಕಾರ ಸಾಹಿತ್ಯದ ಗುರಿಯಾಗಿರಬೇಕು. ಆದರೆ ಅಂದು ಪವಿತ್ರಪುರದಲ್ಲಿ ದುಷ್ಟ ಶಿಕ್ಷಣ ಶಿಷ್ಟಪರಿಪಾಲನೆಯ ಬದಲು ಶಿಷ್ಟ ಶಿಕ್ಷಣ ದುಷ್ಟ ಪರಿಪಾಲನೆ ನಡೆಯುತ್ತಿತ್ತು. ಸಜ್ಜನರಾಗಿದ್ದವರು ಹೆದರಿ ಸದ್ದಿಲ್ಲದೆ ಮೂಲೆಯನ್ನು ಸೇರಿದ್ದರು. ದುಷ್ಟರಾಜಕಾರಣಿಗಳೂ, ಕಾಳಸಂತೆ ವ್ಯಾಪಾರಿಗಳೂ, ಲಾಭಬಡುಕ ಕಂಟ್ರಾಕ್ಟರುಗಳೂ, ಲಂಚಕೋರ ಅಧಿಕಾರಿಗಳೂ ಒಟ್ಟಾಗಿ, ಜನಸಾಮಾನ್ಯರನ್ನು ಲೂಟಿ ಮಾಡುತ್ತಿದ್ದರು. ಸರ್ಕಾರದವರು ಪ್ರಜೆಗಳ ಪ್ರಯೋಜನಕ್ಕಾಗಿ ಖರ್ಚು ಮಾಡುತ್ತಿದ್ದ ಹಣದಲ್ಲಿ ಅರೆವಾಸಿ ಮೊಬಲಗು ಈ ಜನರ ಜೇಬಿಗೆ ಸೇರುತ್ತಿತ್ತು. ಹೊಸದಾಗಿ ಬಂದ ಇನ್‌ಸ್ಪೆಕ್ಟರ ವರ್ತನೆಯನ್ನು ಸಹಿಸಲಾರದೆ ಮೋಹನನು ಅವರ ವಿರುದ್ಧ ಇಲಾಖೆಯ ಮುಖ್ಯಾಧಿಕಾರಿಗಳಿಗೆ ಒಂದು ಪತ್ರವನ್ನು ಬರೆದಿದ್ದನು. ಮುಖ್ಯಾಧಿಕಾರಿಗಳು ಆ ಪತ್ರವನ್ನು ಇನ್‌ಸ್ಪೆಕ್ಟರಿಗೆ ಕಳುಹಿಸಿ ಅದರಲ್ಲಿ ಕಂಡ ಆರೋಪಗಳಿಗೆ ಸಮಾಜಾಯಿಸಿ ಕೊಡಬೇಕೆಂದು ಆಜ್ಞೆ ಮಾಡಿದ್ದನು. ಮೋಹನನ ಪತ್ರವನ್ನು ನೋಡಿದ ಇನ್‌ಸ್ಪೆಕ್ಟರು ಅವನ ಮೇಲೆ ಬಹಳ ಕುಪಿತರಾದರು. ಸಮಯ ಸಿಕ್ಕಾಗ ಮೋಹನನಿಗೆ ಬುದ್ಧಿ ಕಲಿಸುವುದಾಗಿ ಅವರು ಮನಸ್ಸಿನಲ್ಲೇ ಸಂಕಲ್ಪ ಮಾಡಿದರು.

## ೧೦. ಹುಚ್ಚು ಬಾವಿ

ತಾಲ್ಲೂಕಿನಲ್ಲಿ ಆಗುತ್ತಿದ್ದ ವ್ಯವಹಾರಗಳನ್ನು ನೋಡಿ ಮೂರ್ತಿಗೆ ರಾಜಕಾರಣದಲ್ಲಿ ಬೇಸರವುಂಟಾಗಿತ್ತು. ಪವಿತ್ರಪುರದಲ್ಲಿ ನಡೆಯುತ್ತಿದ್ದ ಅಂದಿನ ರಾಜಕಾರಣದಲ್ಲಿ ಗಾಂಧೀ ತತ್ತ್ವಗಳಿಗೆ ಎಳ್ಳಷ್ಟೂ ಬೆಲೆಯಿರಲಿಲ್ಲ. ಗಾಂಧೀಜಿಯವರು ಉಪದೇಶದಂತೆ ನಡೆಯುತ್ತಿದ್ದ ಮೋಹನನಿಗೆ ದುಷ್ಟ ಶಕ್ತಿಗಳು ಕೊಡುತ್ತಿದ್ದ ಕಷ್ಟಗಳನ್ನು ನೋಡಿ ಮೂರ್ತಿ ಬಹಳ ಮರುಗಿದ್ದನು. ಅಸತ್ಯ ಅಧರ್ಮಗಳನ್ನು ಸತ್ಯಧರ್ಮಗಳಿಂದ ಗೆಲ್ಲುವುದು ಸಾಧ್ಯವಿಲ್ಲವೆಂದು ಅವನು ಯೋಚಿಸುವಂತಹ ಸನ್ನಿವೇಶ ಅಂದು ಪವಿತ್ರಪುರದಲ್ಲಿತ್ತು. ಮುಳ್ಳನ್ನು ಮುಳ್ಳಿನಿಂದಲೇ ಕೀಳಬೇಕೆಂದು ಅಭಿಪ್ರಾಯ ಪಡುವ ಸ್ಥಿತಿಗೆ ಅವನು ಬಂದಿದ್ದನು. ಮೋಹನನಿಗೆ ಜನಸಾಮಾನ್ಯರ ಮೇಲೆ ಅದ್ಭುತವಾದ ಹಿಡಿತವಿತ್ತು. ಅವನು ತನ್ನಲ್ಲಿರುವ ಶಕ್ತಿಯನ್ನು ಸರಿಯಾಗಿ ಉಪಯೋಗಿಸಿದ್ದರೆ ರಂಗನಾಥ ಮಿತ್ರಮಂಡಲಿಯವರು ಉಸಿರೆತ್ತದಂತೆ ಮಾಡಬಹುದಾಗಿತ್ತೆಂದು ಮೂರ್ತಿಯು ತಿಳಿದಿದ್ದನು. ಹಲವು ಮಂದಿ ನಿಷ್ಠಾವಂತ ಕಾಂಗ್ರೆಸ್ ಕೆಲಸಗಾರರ ದುರ್ಗತಿಗೆ ಮೋಹನನ ಹೇಡಿತನದ ರಾಜಕಾರಣವೇ ಕಾರಣವೆಂದು ಅವನು ಭಾವಿಸಿದ್ದನು. ರಂಗನಾಥನ ಮತ್ತು ಆತನ ಸ್ನೇಹಿತರ ವಿರುದ್ಧ ತಾಲ್ಲೂಕಿನ ಜನರನ್ನು ಮೋಹನನು ಎತ್ತಿಕಟ್ಟಬೇಕೆಂದು ಮೂರ್ತಿ ಆಶಿಸುತ್ತಿದ್ದನು. ಆದರೆ ಕಾಂಗ್ರೆಸ್ ಸಂಸ್ಥೆಗೆ ಸೇರಿದ ಜನರ ಮೇಲೆ ಜನತೆಯನ್ನು ಹುರಿದುಂಬಿಸಿ ಎತ್ತಿಕಟ್ಟುವುದು ಮೋಹನನಿಗೆ ಎಳ್ಳಷ್ಟೂ ಇಷ್ಟವಿರಲಿಲ್ಲ. ಹೇಗಾದರೂ ಮಾಡಿ ಮೋಹನನ ಮನಸ್ಸನ್ನು ಬದಲಾಯಿಸಬೇಕೆಂಬ ಉದ್ದೇಶದಿಂದ ಒಂದು ದಿನ ಮೂರ್ತಿಯು ಪಂಜರವಳ್ಳಿಗೆ ಹೋದನು. ಬಂದ ಸ್ನೇಹಿತನನ್ನು ಮೋಹನನು ಆದರದಿಂದ ಸ್ವಾಗತಿಸಿ ಉಪಚರಿಸಿದನು. ಕುಶಲ ಪ್ರಶ್ನೆಗಳೂ, ಉಪಚಾರವೂ ಮುಗಿದ ನಂತರ ಮೂರ್ತಿ ತಾನು ಬಂದಿರುವ ವಿಚಾರವನ್ನು ತಿಳಿಸಿದನು. ಮನಸ್ಸನ್ನು ಬಿಚ್ಚಿ ಮಾತನಾಡಬಹುದೆಂದು ಮೋಹನನು ತನ್ನ ಸ್ನೇಹಿತನಿಗೆ ಸೂಚಿಸಿದನು. ಶಾಂತಮೂರ್ತಿಯಾದ ಮೂರ್ತಿಯು ಆ ದಿನ ಉಗ್ರಸ್ವರೂಪಿಯಾಗಿದ್ದನು. ಚುಚ್ಚುನುಡಿಗಳಿಂದಲೇ ತನ್ನ ಮಾತುಗಳನ್ನು ಮೊದಲುಮಾಡಿ ಈ ರೀತಿ ನುಡಿದನು.

"ಮೋಹನ್, ಗಾಂಧೀ ತತ್ವದ ಹೆಸರಿನಲ್ಲಿ ನೀನು ನಡೆಯಿಸುತ್ತಿರುವ ರಾಜಕಾರಣದಿಂದ ನಿನ್ನನ್ನು ನಂಬಿದವರೆಲ್ಲರೂ ನಿರ್ನಾಮವಾಗುತ್ತಿದ್ದಾರೆ. ದಡ್ಡರಿಗೆ 'ದೊಣ್ಣೆ ಪೆಟ್ಟು ಜಾಣರಿಗೆ ಮಾತಿನ ಪೆಟ್ಟು' ಅನ್ನುವ ಹಾಗೆ ಸತ್ಯ ಅಹಿಂಸೆಗಳು ಸುಸಂಸ್ಕೃತರನ್ನು ವಶಪಡಿಸಿಕೊಳ್ಳುವ ಸಾಧನೆಗಳೇ ಹೊರತು ಮೃಗಗಳಂತಿರುವ ವರನ್ನು ಗೆಲ್ಲುವ ಅಸ್ತ್ರಗಳಲ್ಲ. ಸಂಪೂರ್ಣ ತಾಮಸ ಪ್ರವೃತ್ತಿಗಳಿಂದ ತುಂಬಿರುವ

ರಂಗನಾಥ, ಕಲ್ಲಪ್ಪ, ನಾಗೇಂದ್ರ ಇವರುಗಳ ಮುಂದೆ ನಿನ್ನ ಸತ್ಯ ಅಹಿಂಸೆಗಳ ಆಟ ನಡೆಯುವುದಿಲ್ಲವೆಂಬುದನ್ನು ನೀನು ಮನಗಾಣಬೇಕು. ಗಾಂಧೀಜಿಯವರು ಆಂಗ್ಲೇಯರ ವಿರುದ್ಧ ಸತ್ಯ ಅಹಿಂಸೆಗಳ ಹೋರಾಟವನ್ನು ನಡೆಸಿದರು. ಆಂಗ್ಲೇಯರು ಸುಸಂಸ್ಕೃತರಾಗಿದ್ದರಿಂದ ಸತ್ಯ ಅಹಿಂಸೆಗಳಿಗೆ ತಲೆಬಾಗಿ ನಮಗೆ ಸ್ವರಾಜ್ಯವನ್ನು ಕೊಟ್ಟರು. ಅದೇ ನಮ್ಮ ನೆರೆ ರಾಷ್ಟ್ರವಾದ ಚೀನಾ ಸರ್ಕಾರದ ವಿರುದ್ಧ ಮಹಾತ್ಮಗಾಂಧೀಜಿಯವರು ಸತ್ಯಾಗ್ರಹ ಹೂಡಿದ್ದರೆ ಚೀನಿಯರು ಅವರನ್ನು ಗುಂಡಿಟ್ಟು ಕೊಲ್ಲುತ್ತಿದ್ದರು. ಚೀನಾ ಸರ್ಕಾರಕ್ಕೆ ನಮ್ಮ ದೇಶದ ಮೇಲೆ ಕಣ್ಣಿದೆಯೆಂದು ಕೇಳಿದ್ದೇನೆ. ಒಂದು ವೇಳೆ ಅವರು ನಮ್ಮ ಮೇಲೆ ದಂಡೆತ್ತಿ ಬಂದರೆ ಅವರನ್ನು ಶಕ್ತಿಯಿಂದ ಗೆಲ್ಲಬೇಕೇ ಹೊರತು ಸತ್ಯಾಗ್ರಹದಿಂದಲ್ಲ. ಸತ್ಯ ಅಹಿಂಸೆಗಳ ವಿಚಾರದಲ್ಲಿ ನಮ್ಮ ದೃಷ್ಟಿಕೋನ ಸ್ವಲ್ಪ ಬದಲಾವಣೆ ಆಗಬೇಕಾದ ಕಾಲ ಸನ್ನಿಹಿತವಾಗಿದೆ. ಸತ್ಯದ ಹೆಸರಿನಲ್ಲಿ ಅಸತ್ಯವನ್ನು ಸಹಿಸುವುದು ಮೂರ್ಖತನ; ಅಹಿಂಸೆಯ ಹೆಸರಿನಲ್ಲಿ ಹಿಂಸೆಯನ್ನು ಸಹಿಸುವುದು ಹೇಡಿತನ. ರಂಗನಾಥನೂ ಅವನ ಸ್ನೇಹಿತರೂ ಹಲವು ತಲೆಮಾರುಗಳಿಂದ ಮೋಸದಿಂದ ಸಂಪಾದನೆ ಮಾಡಿದ ಮನೆತನಗಳಲ್ಲಿ ಹುಟ್ಟಿ ಬೆಳೆದವರು. ಆದ್ದರಿಂದ ರಕ್ತಗತವಾಗಿ ದುಷ್ಟ ಪ್ರವೃತ್ತಿ ಅವರಲ್ಲಿ ಹುಟ್ಟಿ ಬೆಳೆದಿದೆ. ಅಂತಹ ಜನರೊಡನೆ ವ್ಯವಹರಿಸುವಾಗ ಅವರಿಗರ್ಥವಾಗುವ ಅಸ್ತ್ರಗಳನ್ನೇ ಉಪಯೋಗಿಸಬೇಕು. ಗೊತ್ತಾಯಿತೆ?"

"ಗೊತ್ತಾಯಿತಪ್ಪಾ, ಮೂರ್ತಿ, ಪೂರ್ತಿ ಹೇಳಿಬಿಡು"

"ನೀನು ಅಸತ್ಯದ ಮಾರ್ಗವನ್ನು ಅವಲಂಬಿಸಬೇಕೆಂದು ನಾನು ಹೇಳುವುದಿಲ್ಲ. ನೀನು ಜನತೆಯ ಮುಂದೆ ಮರೆಮಾಚದೆ ಹೇಳಿದರೆ ಸಾಕು. ಜನತೆಗೆ ನಿಜಾಂಶ ತಿಳಿದರೆ ನಿನ್ನ ರಾಜಕೀಯ ವೈರಿಗಳು ನಿರ್ನಾಮವಾಗುತ್ತಾರೆ. ರಂಗನಾಥನೂ, ಅವನ ಸ್ನೇಹಿತರೂ ದೇಶಾಭಿಮಾನದ ಪೋಷಾಕನ್ನು ಧರಿಸಿದ್ದರೂ ಅವರಿಗೆ ನಿಜವಾಗಿಯೂ ದೇಶಾಭಿಮಾನವಿಲ್ಲ. ಜನತೆಗೆ ಅವರ ಮೇಲೆ ಪ್ರೇಮವಿಲ್ಲ; ಅವರಿಗೆ ಜನತೆಯ ಮೇಲೆ ಪ್ರೇಮವಿಲ್ಲ. ಜನತೆಯ ಮೇಲೆ ಪ್ರೀತಿಯಿಲ್ಲದವರು ದೇಶಭಿಮಾನಿಗಳೆಂದೆನಿಸಿ ಕೊಳ್ಳಲಾರರು. ದೇಶಾಭಿಮಾನವಿಲ್ಲದ ಜನರು ರಾಜಕಾರಣದಲ್ಲಿರಬಾರದು. ಜಗತ್ತಿನಲ್ಲಿರುವ ದುರ್ಗುಣಗಳೆಲ್ಲವೂ ರಂಗನಾಥನಲ್ಲಿ ಮತ್ತು ಕಲ್ಲಪ್ಪನಲ್ಲಿ ಕೇಂದ್ರೀಕೃತವಾಗಿವೆ. ಅಂತಹ ವ್ಯಕ್ತಿಗಳನ್ನು ಕಾಂಗ್ರೆಸ್ಸಿನವರೆಂಬ ಕಾರಣದಿಂದ ಸುಮ್ಮನೆ ಬಿಡುವುದು ಬಹಳ ಪಾಪ. ನೆರೆಹೊರೆಯ ರಾಷ್ಟ್ರಗಳು ನಮ್ಮ ದೇಶವನ್ನು ಕಬಳಿಸಬೇಕೆಂಬ ಉದ್ದೇಶದಿಂದ ನಮ್ಮ ಮೇಲೆ ವಕ್ರ ದೃಷ್ಟಿಯನ್ನು ಬೀರುತ್ತಿರುವ ಈ ಕಾಲದಲ್ಲಿ ಅಪ್ರತಿಮ ದೇಶಭಕ್ತ ಕಾಂಗ್ರೆಸ್ಸಿಗರ ಅವಶ್ಯಕತೆ ಹೆಚ್ಚಾಗಿದೆ. ಪವಿತ್ರಪುರ ತಾಲ್ಲೂಕಿನಲ್ಲಿ ಕಾಂಗ್ರೆಸ್ಸನ್ನು ಉಳಿಸಬೇಕಾದರೆ ರಂಗನಾಥ ಮಿತ್ರಮಂಡಲಿಯವರು ಅಳಿಯಲೇಬೇಕು. ಜನತೆಯೂ ಬಹುಮಂದಿ ಕಾಂಗ್ರೆಸ್ ಕಾರ್ಯಕರ್ತರೂ ಒಂದು ಮಾರ್ಗವನ್ನು ಹಿಡಿದಿದ್ದರೆ ಈ ಪುಢಾರಿಗಳು ಇನ್ನೊಂದು ಮಾರ್ಗವನ್ನು ಹಿಡಿದಿದ್ದಾರೆ. ಕಾಂಗ್ರೆಸ್ಸಿನ ಮೇಲ್ಮೆಗಾಗಿ, ಮಹಾಜನರ ಮೇಲ್ಮೆಗಾಗಿ ನಿನ್ನನ್ನು ನಂಬಿದವರ ಮೇಲ್ಮೆಗಾಗಿ, ಇಂದಿನಿಂದ ನಿನ್ನ ಹೇಡಿತನದ ರಾಜಕಾರಣವನ್ನು

ಬದಿಗೊತ್ತಿ ವೀರಯೋಧನಂತೆ ಬಾಳು. ದುರದೃಷ್ಟವಶಾತ್ ನಮ್ಮ ದೇಶಕ್ಕೂ ಚೀನಾದೇಶಕ್ಕೂ ಯುದ್ಧ ಸಂಭವಿಸಿದರೆ ನಾವೆಲ್ಲರೂ ವೀರ ಯೋಧರಂತೆ ಹೋರಾಡಬೇಕಾಗುತ್ತದೆ. ಸೈನಿಕರಿಗಿರಬೇಕಾದ ಶಿಸ್ತು, ಸಾಹಸ, ದೇಶಪ್ರೇಮಗಳು ನಮ್ಮಲ್ಲಿ ಬೆಳೆಯಬೇಕು. ಗಾಂಧೀಜಿಯವರು ಸತ್ಯ, ಅಹಿಂಸೆಗಳ ಹೆಸರಿನಲ್ಲಿ ಹೇಡಿಗಳಾಗಿರ ಬೇಕೆಂದು ಎಂದೂ ನಮಗೆ ಬೋಧಿಸಿರಲಿಲ್ಲ, ಕಳೆದ ಒಂಬತ್ತು ವರ್ಷಗಳಿಂದ ನೀನು ನಡೆಯಿಸುತ್ತಿರುವ ರಾಜಕಾರಣದಿಂದ ನಿನಗಾಗಲಿ, ನಿನ್ನ ಕಡೆಯವರಿಗಾಗಲಿ ಬಂದ ಲಾಭವೇನು? ಆ ದುಷ್ಟರಂತೆ ನೀನೂ ರಾಜಕಾರಣ ಮಾಡಿದ್ದರೆ ಐದಾರು ಲಕ್ಷ ರೂಪಾಯಿಗಳನ್ನು ಸಂಪಾದಿಸಬಹುದಾಗಿತ್ತು. ಮಹಡಿ ಮನೆಯಲ್ಲಿ ವಾಸ ಮಾಡಬಹು ದಾಗಿತ್ತು. ಒಳ್ಳೆಯ ಕಾರಿನಲ್ಲಿ ತಿರುಗಾಡಬಹುದಾಗಿತ್ತು. ನಿಮ್ಮವ್ವನೂ ಸುಖವಾಗಿರುತ್ತಿದ್ದರು. ಮುರುಕಲು ಮನೆ, ಗೇಣೆಯ ಭೂಮಿ, ಬಡತನ, ರಂಗನಾಥ ಮುಂತಾದವರಿಂದ ಕಿರುಕುಳ ಇವೇ ನಿನಗೆ ಕಳೆದ ಒಂಬತ್ತು ವರ್ಷಗಳಲ್ಲಿ ಬಂದಿರುವ ಲಾಭ"

"ಮೂರ್ತೀ, ದೇವರೊಬ್ಬನಿದ್ದಾನೆಂಬುದನ್ನು ನೀನು ಮರೆಯಬಾರದು. ದೇವರು ಮತ್ತು ಜನರು ಮೆಚ್ಚುವಂತೆ ನಾವು ನಡೆಯಬೇಕು"

"ಮೋಹನಾ, ಜನರು ನಿನ್ನನ್ನು ಮೆಚ್ಚಿದ್ದಾರೆಂದು ನೀನು ತಿಳಿದಿದ್ದರೆ ಅದು ನಿನ್ನ ಮೂರ್ಖತನವನ್ನು ನೀನೊಬ್ಬ ಮಹಾತ್ಮನೆಂದು ಜನರು ನಿನ್ನನ್ನು ತಿಳಿದಿದ್ದರೆ ಚಿಂತೆಯಿರಲಿಲ್ಲ. ಆ ಭಾಗ್ಯವೂ ನಿನಗಿಲ್ಲ. ಸ್ವರಾಜ್ಯಕ್ಕಾಗಿ ನೀವು ಹೋರಾಟ ನಡೆಸುತ್ತಿದ್ದ ಕಾಲದಲ್ಲಿ ಸತ್ಯವಂತರಾದವರಿಗೆ ಸಮಾಜದಲ್ಲಿ ಗೌರವವಿತ್ತು. ಗರೀಬರಾಗಿ ಬೀದಿಯ ಭಿಕಾರಿಗಳಾಗಿದ್ದರೂ ಕೂಡ, ಅವರು ಸತ್ಯಸಂಧರಾಗಿದ್ದರೆ ಅವರಿಗೆ ಸಮಾಜದಲ್ಲಿ ಪುರಸ್ಕಾರವಿತ್ತು. ಇಂದಿನ ಸಮಾಜದಲ್ಲಿ ಸತ್ಯವಂತರನ್ನು ಕೇಳುವವರಾರು? ಈ ತಾಲ್ಲೂಕಿನಲ್ಲಿ, ಸತ್ಯವಂತರಾಗಿ, ಗಾಂಧೀಜಿಯವರು ನಿಜವಾದ ಶಿಷ್ಯರಾಗಿ ಬಾಳಿದ ತ್ಯಾಗಶೀಲರಾದ ಕಾಂಗ್ರೆಸ್ ಕೆಲಸಗಾರರ ಗತಿ ಏನಾಗಿದೆ ಇಂದು? ಅವರನ್ನು ಯಾರು ಪುರಸ್ಕರಿಸುತ್ತಾರೆ? ನಿನ್ನ ವಿಚಾರನ್ನೆ ತೆಗೆದುಕೋ. ಅಸತ್ಯವಂತರೂ ಕುಡುಕರೂ ಆಗಿರುವ ರಂಗನಾಥನೂ, ಅವನ ಸ್ನೇಹಿತರೂ, ಸತ್ಯಸಂಧನಾಗಿ ನಿನ್ನನ್ನು ಲಂಚಕೋರನೆಂದೂ, ಕುಡಕನೆಂದು ಹೇಳುತ್ತಾರೆ. ಏನಿದು ಅನ್ಯಾಯ? ಅಸತ್ಯವಂತರು ಸತ್ಯವಂತನಾದ ನಿನ್ನನ್ನು ಟೀಕೆ ಮಾಡುವುದು! ನಿನ್ನ ಮೇಲೆ ಪದೇ ಪದೇ ಬರತಕ್ಕ ಟೀಕೆಗಳನ್ನು ಕೇಳಿದ ಜನರು ನಿನ್ನ ವಿಚಾರದಲ್ಲಿ ಸಂಶಯ ಪಡತಕ್ಕ ಪರಿಸ್ಥಿತಿ ಬಂದೊದಗಿದೆ. ಮೊನ್ನೆ ನಿನ್ನ ಹಿತೈಷಿಗಳೊಬ್ಬರು ನನ್ನೊಡನೆ ಮಾತನಾಡುತ್ತಿದ್ದಾಗ, 'ಮೋಹನನ ವಿಚಾರದಲ್ಲಿ ಜನರು ಆಡುವುದು ನೋಡಿದರೆ ಬೆಂಕಿಯಿಲ್ಲದೆ ಹೊಗೆ ಬರುತ್ತದೆಯೇ? ಎಂದು ಯೋಚಿಸ ಬೇಕಾಗುತ್ತದೆ' ಎಂದು ಹೇಳಿದರು. ನನಗೆ ಬಹಳ ಸಿಟ್ಟು ಬಂತು. ಬೆಂಕಿಯಿಲ್ಲದೆ ಹೊಗೆಯನ್ನು ಹೊರಡಿಸತಕ್ಕ ರಂಗನಾಥನಂತಹ ಮಹಾತ್ಮರು ಈಗಿನ ರಾಜಕಾರಣದಲ್ಲಿ ಅಲ್ಲಲ್ಲಿ ಇದ್ದಾರೆಂದು ಅವರಿಗೆ ಹೇಳಿದೆ. ಸಾರ್ವಜನಿಕ ಕ್ಷೇತ್ರದಲ್ಲಿ ಪ್ರಾಮಾಣಿಕತೆಯಿಂದ ದುಡಿಯುವವರಿಗೆ, ಆರ್ಥಿಕ ದೃಷ್ಟಿಯಿಂದ ಪ್ರಯೋಜನವಿಲ್ಲದಿದ್ದರೂ

ಸಹ ಅವರ ವಿಚಾರದಲ್ಲಿ ಸಾರ್ವಜನಿಕರ ಬಾಯಲ್ಲಿ ಕೆಲವು ಒಳ್ಳೆಯ ಮಾತುಗಳಾದರೂ, ಬರುತ್ತಿರಬೇಕು. ಅದೂ ಇಲ್ಲದಿದ್ದರೆ ಪ್ರಮಾಣಿಕತೆಗೆ ರಾಜಕಾರಣದಲ್ಲಿ ಪುರಸ್ಕಾರ ದೊರೆಯಲಾರದು. ಇಂದಿನ ರಾಜಕಾರಣದಲ್ಲಿ ಅದಕ್ಕೂ ಗತಿ ಇಲ್ಲವಲ್ಲಪ್ಪಾ. ಸುಸಂಸ್ಕೃತರೆಂದೆನಿಸಿ ಕೊಂಡಿರುವ ಕೆಲವರು ವ್ಯಾಪಾರಿಗಳೂ, ದಳ್ಳಾಳಿಗಳೂ, ಕೆಲವರು ಅಧಿಕಾರಿಗಳೂ, ನಿನಗಿಂತಲೂ ಹೆಚ್ಚಾಗಿ ಕಲ್ಲಪ್ಪನನ್ನೂ ರಂಗನಾಥನನ್ನೂ ಗೌರವಿಸುತ್ತಾರೆ. ನೀನು ದೇವರ ಅವತಾರದಂತೆ ಇದ್ದೀಯ, ಅವರು ದೆವ್ವಗಳ ಅವತಾರದಂತೆ ಇದ್ದಾರೆ. ನೀನು ದೇವರ ವಿಚಾರದಲ್ಲಿ ಪದೇ ಪದೇ ಮಾತನಾಡುತ್ತೀಯ. ದೇವರಿದ್ದಿದ್ದರೆ ನಿನ್ನಂತಹ ಒಳ್ಳೆಯ ವ್ಯಕ್ತಿಗೆ ಜೀವನದಲ್ಲಿ ಇಷ್ಟೊಂದು ಎಡರು ತೊಡರುಗಳು ಬರಬೇಕೆ? ದೇವರು ರಜಾ ತೆಗೆದುಕೊಂಡಿರಬೇಕೆಂದು ತೋರುತ್ತದೆ. ಮೋಹನಾ, ಇದು ಸತ್ಯವಂತರಿಗೆ ಕಾಲವಲ್ಲಪ್ಪಾ. ಬತ್ತಲೆಯಲ್ಲಿರುವವರ ಊರಲ್ಲಿ ಬಟ್ಟೆಯನ್ನುಟ್ಟುಕೊಳ್ಳುವವರು ಅಪಹಾಸ್ಯಕ್ಕೆ ಗುರಿಯಾಗುತ್ತಾರೆ. ಮೂರ್ಖರಿರುವ ಊರಲ್ಲಿ ವಿವೇಕಿಯಾಗಲು ಯತ್ನಿಸುವವನು ಶತಮೂರ್ಖನಾಗುತ್ತಾನೆ".

"ಮೂರ್ತಿ, ನಿನ್ನ ಉಪನ್ಯಾಸ ಸ್ವಾರಸ್ಯವಾಗಿದೆ. ಮುಗಿಯಿತೋ ಇನ್ನೂ ಇದೆಯೋ?"

"ಕೊನೆಯದಾಗಿ ಒಂದು ಕತೆಯನ್ನು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಕೇಳು ಮೋಹನ, ಅದು ಸ್ವಾರಸ್ಯವಾಗಿದೆ. ಒಂದೂರಿನಲ್ಲಿ ಒಬ್ಬ ರಾಜನಿದ್ದನಂತೆ. ಆ ಊರನಲ್ಲಿ ಎರಡೇ ಬಾವಿಗಳಿದ್ದವಂತೆ. ಒಂದು ಬಾವಿ ಅರಮನೆಯ ಆವರಣದಲ್ಲಿದ್ದು, ಅದರ ನೀರನ್ನು ಅರಮನೆಯಲ್ಲಿದ್ದ ರಾಜರಾಣಿಯರೂ, ಅವರ ಕುಟುಂಬವರ್ಗದವರೂ, ಪರಿವಾರದವರೂ ಕುಡಿಯುತ್ತಿದ್ದರಂತೆ. ಇನ್ನೊಂದು ಬಾವಿ ಊರಿನ ಮಧ್ಯೆ ಇದ್ದು ಅದರ ನೀರನ್ನು ಪ್ರಜಾವರ್ಗದವರು ಕುಡಿಯುತ್ತಿದ್ದರಂತೆ. ಅದಾವುದೋ ಕಾರಣದಿಂದ ಪ್ರಜಾವರ್ಗದವರು ಉಪಯೋಗಿಸುತ್ತಿದ್ದ ಬಾವಿಯ ನೀರು ನಂಜಾಗಿ ಆ ನೀರನ್ನು ಕುಡಿದ ಪ್ರಜೆಗಳೆಲ್ಲರಿಗೂ ಹುಚ್ಚು ಹಿಡಿಯಿತಂತೆ. ಹುಚ್ಚು ಹಿಡಿದ ಪ್ರಜೆಗಳ ಕಣ್ಣಿಗೆ ಅರಮನೆಯಲ್ಲಿದ್ದ ರಾಜ, ರಾಣಿ, ಮಂತ್ರಿ ಮುಂತಾದವರು ಹುಚ್ಚರಂತೆ ಕಂಡರು. ರಾಜನಿಗೆ ಹುಚ್ಚು ಹಿಡಿದಿದೆ ಎಂದೂ ಆದ್ದರಿಂದ ಅವನನ್ನು ಪದಚ್ಯುತನನ್ನಾಗಿ ಮಾಡಬೇಕೆಂದೂ, ಹುಚ್ಚರಾದ ಪ್ರಜೆಗಳು ಒಂದು ಚಳವಳಿಯನ್ನು ಪ್ರಾರಂಭಿಸಿದರು. ರಾಜನಿಗೆ ದಿಗ್ಭ್ರಮೆಯಾಯಿತು. ಸೋಜಿಗದಲ್ಲಿ ಸೋಜಿಗವಾಗಿತ್ತು. ಏನು ಮಾಡಬೇಕೆಂಬುದು ರಾಜನಿಗೆ ಹೊಳೆಯಲಿಲ್ಲ. ಅವನು ಮಂತ್ರಿಯನ್ನು ಕರೆಯಿಸಿ ಅವನ ಸಲಹೆಯನ್ನು ಕೇಳಿದನು. ಮಂತ್ರಿ ಬಹಳ ಹೊತ್ತು ಯೋಚಿಸಿ ಒಂದು ಪರಿಹಾರವನ್ನು ಸೂಚಿಸಿದನು. ಊರ ಮಧ್ಯೆ ಇದ್ದ ಹುಚ್ಚು ಬಾವಿಯ ನೀರನ್ನು ತಂದು ಅರಮನೆಯಲ್ಲಿದ್ದವರೆಲ್ಲರೂ ಕುಡಿದರೆ ಪ್ರಜೆಗಳ ಚಳವಳಿ ನಿಲ್ಲುವುದೆಂದು ಮಂತ್ರಿ ಸೂಚಿಸಿದನು. ಮಂತ್ರಿಯ ಸಲಹೆ ರಾಜನಿಗೆ ಒಪ್ಪಿಗೆಯಾಯಿತು. ಮರುದಿನ ಹುಚ್ಚು ಬಾವಿಯಿಂದ ಒಂದು ಬಿಂದಿಗೆ ನೀರನ್ನು ತಂದು ರಾಜ, ರಾಣಿ, ರಾಜಕುಮಾರರು,

ರಾಜಕುಮಾರಿಯರು. ಮಂತ್ರಿ ಮತ್ತು ಪರಿವಾರವರ್ಗದವರು ಅದನ್ನು ಕುಡಿದರು. ಕುಡಿದ ಸ್ವಲ್ಪ ಕಾಲದಲ್ಲಿ ಅವರೆಲ್ಲರೂ ಹುಚ್ಚರಾದರು. ತಮ್ಮಂತೆ ಹುಚ್ಚರಾದ ರಾಜ, ರಾಣಿ, ಮಂತ್ರಿ ಮುಂತಾದವರನ್ನು ನೋಡಿದ ಪ್ರಜೆಗಳಿಗೆ ಆನಂದವಾಯಿತು. ಆನಂದಭರಿತರಾದ ಹುಚ್ಚು ಪ್ರಜೆಗಳು ತಮ್ಮ ಹುಚ್ಚು ರಾಜನನ್ನು ಕುರಿತು "ರಾಜನಿಗೆ ಹುಚ್ಚು ಬಿಟ್ಟಿತು" ಎಂಬುದಾಗಿ ಕೇಕೆ ಹಾಕಿ ಚಳವಳಿಯನ್ನು ನಿಲ್ಲಿಸಿದರು. ಅನಂತರ ರಾಜರಾಣಿಯರು ಪ್ರಜೆಗಳೊಡನೆ ಹೊಂದಿಕೊಂಡು ಸುಖವಾಗಿ ಬಾಳಿದರು. ಅವರು ಹುಚ್ಚು ಬಾವಿಯ ನೀರನ್ನು ಕುಡಿದು ಹುಚ್ಚರಾಗದೆ ಇದ್ದಿದ್ದರೆ ನುಚ್ಚುನೂರಾಗಿ ಹೋಗುತ್ತಿದ್ದರು. ನಾನು ನೀನು ಇಂದಿನ ರಾಜಕಾರಣಕ್ಕೆ ಹೊಂದಿಕೊಂಡು ಹೋಗಬೇಕಾಗಿದೆ. ರಂಗನಾಥ ಮುಂತಾದವರನ್ನು ಗೆಲ್ಲಬೇಕಾದರೆ ಸಾಮ, ಭೇದ, ದಂಡ ಇವುಗಳೆಲ್ಲವನ್ನು ಅನುಸರಿಸಬೇಕಾಗುತ್ತದೆ. ದುಷ್ಟರನ್ನು ಗೆಲ್ಲುವ ಸಲುವಾಗಿ ಮಾರ್ಗಗಳನ್ನು ಅನುಸರಿಸುವುದು ತಪ್ಪೇನೂ ಅಲ್ಲ"

"ಮೂರ್ತೀ, ನೀನು ನಿಜವಾಗಿಯೂ ಹುಚ್ಚ ಬಾವಿಯ ನೀರನ್ನು ಕುಡಿದವನಂತೆ ಮಾತನಾಡಿದೆ. ಗಾಂಧೀಜಿಯವರ ಉಪದೇಶವನ್ನು ಮರೆತೆಯಾ? ಜಗತ್ತಿನ ಮಹಾಪುರುಷರೆಲ್ಲರೂ ಸತ್ಯಕ್ಕೋಸ್ಕರ ಬಲಿಯಾದವರು. ಆದರ್ಶ ಜೀವವನ್ನಪ್ಪಿದವರು ಕಷ್ಟಪಡಲೇಬೇಕು. ಕಷ್ಟಪಡದೆ ಬೊಜ್ಜುಬೆಳೆಸಿಕೊಂಡು ಸುಖವಾಗಿ ಬಾಳಬೇಕೆಂದು ನಿನಗಿಚ್ಛೆ ಇದ್ದರೆ ನೀನೂ ರಂಗನಾಥನಂತೆ ಕಳ್ಳ ವ್ಯವಹಾರಗಳಲ್ಲಿ ಕೈ ಹಾಕಬಹುದು. ಅಥವಾ ಕಲ್ಲಪ್ಪನಂತೆ ಲಂಚಕೋರನಾಗಬಹುದು. ನನ್ನ ಅಡ್ಡಿಯೇನೂ ಇಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ ಅಂತಿಮದಲ್ಲಿ ಸತ್ಯಕ್ಕೆ ಜಯವಿದೆ. ದೇವರ ಮೇಲೆ ಕೋಪಗೊಳ್ಳುವುದಾದರೆ ಮೂರ್ಖತನ. ದೇವರಿರುವುದು ನಿನಗೆ ಕಾಲಕ್ರಮೇಣ ಗೊತ್ತಾಗುತ್ತದೆ. ಇಂದಿನ ಸಮಾಜ ನೀನು ಹೇಳುವಷ್ಟು ಕೆಟ್ಟುಹೋಗಿಲ್ಲ ಸಮಾಜದ ಮೇಲ್ಪದರದಲ್ಲಿ ಇರುವವರು ಮಾತ್ರ ಅಲ್ಲಲ್ಲಿ ಕೆಟ್ಟು ಹೋಗಿದ್ದಾರೆ. ಇಂದೂ ಸಹ ಜನಸಾಮಾನ್ಯರು ಸತ್ಯವಂತರನ್ನು ಗೌರವಿಸುತ್ತಾರೆ. ಮಾನವರು ಅಪರಿಪೂರ್ಣ ಜೀವಿಗಳು. ಅವರು ಯಾವಾಗಲೂ ಸಂಪೂರ್ಣ ಸತ್ಯವಂತರಾಗಿರಲಿಲ್ಲ. ಪ್ರತಿಯೊಬ್ಬ ವ್ಯಕ್ತಿಯಲ್ಲೂ ದುರ್ಗುಣ ಸದ್ಗುಣಗಳು ಸಮ್ಮಿಶ್ರವಾಗಿವೆ. ದುರ್ಗುಣಗಳಿಗಿಂತ ಸದ್ಗುಣಗಳು ಹೆಚ್ಚಾಗಿದ್ದರೆ ಆ ವ್ಯಕ್ತಿಯನ್ನು ಒಳ್ಳೆಯವನೆನ್ನುತ್ತಾರೆ. ನೂರಕ್ಕೆ ನೂರರಷ್ಟು ಒಳ್ಳೆಯವರಾಗಿರುವವರು ಪರಮಹಂಸರೆಂದೆನಿಸಿಕೊಳ್ಳುತ್ತಾರೆ. ವ್ಯಕ್ತಿಯಲ್ಲಿರುವಂತೆ ಸಮಾಜದಲ್ಲೂ ಒಳ್ಳೆಯದು ಕೆಟ್ಟದ್ದು ಸಮ್ಮಿಶ್ರವಾಗಿದೆ. ಆದರೆ ಕೆಟ್ಟದ್ದಕ್ಕೂ ಒಂದು ಮಿತಿಯಿರಬೇಕು. ಎಂದು ಸಮಾಜದಲ್ಲಿ ದುಷ್ಟ ಶಕ್ತಿಗಳು ಮಿತಿಮೊರಿದ ಪ್ರಮಾಣದಲ್ಲಿ ತಲೆ ಎತ್ತುತ್ತವೆಯೋ ಅಂದು ಸಮಾಜದ ಅವನತಿ ಪ್ರಾರಂಭವಾಗುತ್ತದೆ. ಎಂದು ಸಮಾಜವು ಮಿತಿಮೀರಿದ ಪ್ರಮಾಣದಲ್ಲಿ ನೈತಿಕ ಅವನತಿಯನ್ನು ಹೊಂದುತ್ತದೋ ಅಂದು ದುಷ್ಟಶಿಕ್ಷಣ ಶಿಷ್ಟಪರಿಪಾಲನೆಗೆ ಪ್ರಕೃತಿ ಸೂಕ್ತಸನ್ನಿವೇಶವನ್ನು ನಿರ್ಮಿಸುತ್ತದೆ. ಕೆಲವು ಅಧಿಕಾರಿಗಳೂ, ವ್ಯಾಪಾರಿಗಳೂ, ರಂಗನಾಥನಿಗೂ ಮತ್ತು ಕಲ್ಲಪ್ಪನಿಗೂ ಹೆಚ್ಚು ಗೌರವವನ್ನು

ಕೊಡುತ್ತಾರೆಂಬುದನ್ನು ನೀನು ಪ್ರಸ್ತಾಪಿಸಿದೆ. ಅದು ಸ್ವಾಭಾವಿಕ. ಅಧಿಕಾರಿಗಳ ಪೈಕಿ ಲಂಚಕೋರರಾಗಿದ್ದವರು, ವ್ಯಾಪಾರಿಗಳ ಪೈಕಿ ಕಾಳಸಂತೆ ವ್ಯಾಪಾರದಲ್ಲಿ ತೊಡಗಿರುವವರು, ಲಂಚಕೋರ ರಾಜಕಾರಣಿಗಳಿಗೇ ಹೆಚ್ಚು ಪುರಸ್ಕಾರ ಕೊಡುತ್ತಾರೆ. ನನ್ನಂತವರಿಂದ ಅವರಿಗೆ ಯಾವ ಲಾಭವೂ ಇಲ್ಲ. ಅನೀತಿ ಮಾರ್ಗಗಳಿಂದ ಸಂಪಾದನೆ ಮಾಡುವವರು ಗೊಬ್ಬರದ ಹುಳುಗಳಿದ್ದಂತೆ. ಗೊಬ್ಬರದ ಹುಳುಗಳು ಗೊಬ್ಬರದಲ್ಲಿ ಬೆಳೆಯಬಹುದೇ ಹೊರತು ಶುದ್ಧ ಪ್ರದೇಶದಲ್ಲಿ ಬೆಳೆಯಲಾರವು. ಅಂತೆಯೇ ಹೇಸಿಗೆ ಲಂಚಕೋರರೂ, ಮೋಸದ ಲಾಭಕೋರರೂ, ಹೊಲಸು ರಾಜಕಾರಣದಲ್ಲಿ ಮತ್ತು ಕಲುಷಿತ ಆಡಳಿತದಲ್ಲಿ ಹುಲುಸಾಗಿ ಬೆಳೆಯಬಲ್ಲರು. ರಾಜಕಾರಣ ಹದಗೆಟ್ಟು, ಆಡಳಿತ ಕುಲಗೆಟ್ಟು ಹೋದಾಗ ಲಂಚಕೋರ ಅಧಿಕಾರಿಗಳಿಗೂ, ಕಾಳಸಂತೆ ವ್ಯಾಪಾರಿಗಳಿಗೂ ಹೆಚ್ಚು ಲಾಭ ಮೂರ್ತಿ. ಈ ತಾಲ್ಲೂಕಿನ ಇಂದಿನ ರಾಜಕಾರಣದಲ್ಲಿ ಹುಚ್ಚು ಬಾವಿಯ ನೀರನ್ನು ಕುಡಿದವರೇ ಹೆಚ್ಚಾಗಿದ್ದಾರೆ. ಆದರೆ ನಾನೂ, ನೀನೂ ಸುಖದಾಸೆಯಿಂದ ಹುಚ್ಚರಾಗಿ, ಹುಚ್ಚು ಪ್ರವಾಹದಲ್ಲಿ ತೇಲಿಹೋದರೆ ಮುಂದಿನ ಪೀಳಿಗೆಯ ಗತಿಯೇನಾಗುತ್ತದೆಯೆಂಬುದನ್ನು ಯೋಚಿಸು, ಹುಚ್ಚು ಬಾವಿಯ ನೀರನ್ನು ಶುದ್ಧಗೊಳಿಸಿ ಮುಂದಿನ ಪೀಳಿಗೆ ಹುಚ್ಚಾಗದಂತೆ ಮಾಡುವುದು ನಮ್ಮ ಪವಿತ್ರ ಕರ್ತವ್ಯ. ನಾನು ಮಾತ್ರ ನನ್ನ ಆದರ್ಶವನ್ನು ಬಿಡಲಾರೆ. ನನ್ನ ನಾಯಕತ್ವದಲ್ಲಿ ನಿನಗೆ ನಂಬಿಕೆಯಿಲ್ಲದಿದ್ದರೆ ನೀನು ಬೇರೆ ಮಾರ್ಗವನ್ನು ಹುಡುಕಬಹುದು" ಎಂದು ಮೋಹನ ನುಡಿದನು

ಮೋಹನನ ದೃಢ ಚಿತ್ತವನ್ನು ನೋಡಿ ಮೂರ್ತಿ ಮೆಚ್ಚಿದನು. ಅವನ ಆದರ್ಶ ಜೀವನವನ್ನು ಬದಲಾಯಿಸಲು ತಾನು ಮಾಡಿದ್ದ ಪ್ರಯತ್ನಕ್ಕಾಗಿ ಪರಿತಾಪಪಟ್ಟನು. ತಾನು ಆಡಿದ ಚುಚ್ಚು ನುಡಿಗಳಿಂದ ಬೇಸರಗೊಳ್ಳಬಾರದೆಂದು ಮೋಹನನ ಕ್ಷಮೆಬೇಡಿ ಅವನು ಪವಿತ್ರಪುರಕ್ಕೆ ಹಿಂದಿರುಗಿದನು.

## ೧೧. ಸುಳ್ಳು ಮೊಕದ್ದಮೆ

ಸ್ವಾತಂತ್ರ್ಯ ದಿನಾಚರಣೆಯ ದಿನ ಪವಿತ್ರಪುರದಲ್ಲಿ ಮೋಹನನ ಅಧ್ಯಕ್ಷತೆಯಲ್ಲಿ ಒಂದು ಸಾರ್ವಜನಿಕ ಸಭೆಯೂ ಸೇರಿತ್ತು. ಸಭೆಯಲ್ಲಿ ಅಧಿಕಾರಿಗಳೂ, ಸಾರ್ವಜನಿಕ ಮುಖಂಡರೂ ಭಾಗವಹಿಸಿದ್ದರು. ಸಭೆಯನ್ನು ಕುರಿತು ರಂಗನಾಥನೂ, ಕಲ್ಲಪ್ಪನೂ ಮತ್ತು ನಾಗೇಂದ್ರನೂ ಭಾಷಣ ಮಾಡಿದರು. ಭಾಷಣಕಾರರೆಲ್ಲರೂ ತಮ್ಮ ಭಾಷಣಗಳಲ್ಲಿ ಹತ್ತು ವರುಷಗಳ ಅವಧಿಯಲ್ಲಿ ದೇಶದಾದ್ಯಂತ ಸಾಧಿಸಿದ್ದ ಪ್ರಗತಿಯನ್ನು ಪ್ರಸ್ತಾಪಿಸಿದರು. ಜೊತೆಗೆ ಸಮಾಜವಾದವನ್ನೂ ಮತ್ತು ಪಾನನಿರೋಧವನ್ನೂ ಅನುಷ್ಠಾನಕ್ಕೆ ತರತಕ್ಕ ಸರ್ಕಾರದ ಪ್ರಯತ್ನಕ್ಕೆ ಸಾರ್ವಜನಿಕರು ಬೆಂಬಲ ನೀಡಬೇಕೆಂದೂ, ಜನರು ಕಷ್ಟಪಟ್ಟು ದುಡಿಮೆ ಮಾಡಬೇಕೆಂದೂ, ಸತ್ಯಸಂಧರಾಗಿ ಬಾಳಬೇಕೆಂದೂ ಉಪದೇಶಮಾಡಿದರು. ಅಧ್ಯಕ್ಷತೆ ವಹಿಸಿದ್ದ ಮೋಹನನಿಗೆ ಈ ಭಾಷಣಗಳನ್ನು ಕೇಳಿ ಸಿಟ್ಟುನೆತ್ತಿಗೇರಿತ್ತು. ಅವನ ಅಧ್ಯಕ್ಷಭಾಷಣದಲ್ಲಿ ವೇದಾಂತವನ್ನು ಹೇಳುವ ಜನರು ವೇದಾಂತಿಗಳಂತೆ ವರ್ತಿಸಬೇಕೆಂದೂ, ಪಾನನಿರೋಧದ ಯಶಸ್ಸಿಗಾಗಿ ಸರ್ಕಾರದವರು ಸಕಲ ಪ್ರಯತ್ನಗಳನ್ನು ಮಾಡುತ್ತಿದ್ದರೂ ಪಾನನಿರೋಧವನ್ನು ಪ್ರತಿಪಾದನೆ ಮಾಡುವ ಹೊಣೆಯನ್ನು ಹೊತ್ತಿರತಕ್ಕ ಕೆಲವರು ಮುಖಂಡರೂ, ಪಾನನಿರೋಧವನ್ನು ಜಾರಿಗೆ ತರತಕ್ಕ ಕೆಲವರು ಅಧಿಕಾರಿಗಳೂ, ಕದ್ದು ಕುಡಿಯುತ್ತಿದ್ದುದರಿಂದ ಪಾನನಿರೋಧವು ಸರ್ಕಾರವು ನಿರೀಕ್ಷಿಸಿದಷ್ಟು ಮಟ್ಟಿಗೆ ಯಶಸ್ವಿಯಾಗಿಲ್ಲವೆಂದೂ ಹೇಳಿದನು. ಮುಂದುವರಿದು, ಕೆಲವರಿಗೆ ಉಪನ್ಯಾಸ ಮಾಡುವ ಕಾಲದಲ್ಲಿ ಮತ್ತು ಓಟನ್ನು ಕೇಳುವ ಕಾಲದಲ್ಲಿ ಮಾತ್ರ ಸಮಾಜವಾದ ಬೇಕಾಗಿರುತ್ತದೆಯೇ ಹೊರತು ಉಳಿದ ಸಂದರ್ಭಗಳಲ್ಲಿ ಅದು ಬೇಕಾಗಿಲ್ಲವೆಂದು ಅರ್ಥಗರ್ಭಿತವಾಗಿ ನುಡಿದನು. “ಕಂಡಿದ್ದನ್ನು ಕಂಡಹಾಗೆ ಹೇಳಿದರೆ ಕೆಂಡದಂತಹ ಕೋಪ ಬರುತ್ತದೆ” ಎಂಬ ಗಾದೆಗನುಸಾರವಾಗಿ ಮೋಹನನ ಮಾತುಗಳನ್ನು ಕೇಳಿದ ಭಾಷಣಕಾರರೂ, ಪೊಲೀಸ್ ಇನ್‌ಸ್ಪೆಕ್ಟರೂ, ಕೋಪೋದ್ರಿಕ್ತರಾಗಿದ್ದರು. ತಮಗೆ ಬಹಿರಂಗವಾಗಿ ಅವಮಾನ ಮಾಡಿದ ಮೋಹನನ ಮೇಲೆ ಹೇಗೆ ಸೇಡು ತೀರಿಸಿಕೊಳ್ಳಬಹುದೆಂಬುದನ್ನು ಅವರು ಮನಸ್ಸಿನಲ್ಲೇ ಮೆಲುಕು ಹಾಕುತ್ತಿದ್ದರು.

ಆದಿನ ಸಾಯಂಕಾಲ ರಂಗನಾಥನ ಮನೆಯಲ್ಲಿ ಪುಟ್ಟ ಸಭೆಯೊಂದು ಸೇರಿತ್ತು. ಅದು ಮೋಹನನ ಮೇಲೆ ಯಾವ ರೀತಿಯಲ್ಲಿ ಯಶಸ್ವಿಯಾಗಿ ಪ್ರತೀಕಾರವನ್ನು ಕೈಗೊಳ್ಳಬೇಕೆಂಬುದನ್ನು ನಿರ್ಧರಿಸತಕ್ಕ ಗುಪ್ತಸಭೆಯಾಗಿತ್ತು. ಗುಪ್ತಸಭೆಯಾಗಿದ್ದರಿಂದ ಅನಿಷ್ಟ ಕೂಟದ ಪ್ರಮುಖರು ಮಾತ್ರ ಸಭೆಯಲ್ಲಿ ಭಾಗವಹಿಸಿದ್ದರು. ಮೋಹನನ ಹೆಸರಿಗೆ ಮಸಿಯನ್ನು ಬಳಿದು ಅವನ ರಾಜಕೀಯ ಭವಿಷ್ಯವನ್ನು ಕೊನೆಗಾಣಿಸುವ

ಸಲುವಾಗಿ ಹಲವು ಯೋಜನೆಗಳನ್ನು ಚರ್ಚಿಸಿದರು. ಕೆಲವರು ಮೋಹನನ ಮೇಲೆ ಅಪಪ್ರಚಾರವನ್ನು ಹೆಚ್ಚಿಸಬೇಕೆಂದು ವಾದಿಸಿದರು. ಸಭೆಯಲ್ಲಿ ಹಾಜರಿದ್ದ ಭೂಮಾಲೀಕರೊಬ್ಬರು "ಅವ ಪಂಜ್ರೊಳ್ಳಿ ಕಾಡಾಗೆ ಹೋಗಾಗ ಒಂದು ಗುಂಡ್ಯಾಕೆ ಹಾಕ್ಬಾರ್ದು" ಎಂದು ಪ್ರಶ್ನಿಸಿದ್ದರು. ಸಂಕಪೂಜಾರಿಯು ತನ್ನದೇ ಆದ ಒಂದು ಹಂಚಿಕೆಯನ್ನು ಆ ಗುಪ್ತಸಭೆಯ ಮುಂದಿಟ್ಟನು. ಮೋಹನನು ಊರಲ್ಲಿ ಇಲ್ಲದಿರುವಾಗ, ಮೋಹನನ ತಾಯಿಯು ಮನೆಯನ್ನು ಬಿಟ್ಟುಬಾವಿಗೋ ಅಥವಾ ದನದ ಕೊಟ್ಟಿಗೆಗೋ ಹೋದಾಗ ಆಕೆಗೆ ಗೊತ್ತಿಲ್ಲದಂತೆ ಮೋಹನನ ಕೊಠಡಿಯಲ್ಲಿ ಬ್ರಾಂದಿ ಸೀಸೆಯೊಂದನ್ನಿಟ್ಟು ಪೊಲೀಸರಿಗೆ ಫಿರ್ಯಾದನ್ನು ಕೊಡುವುದು ಸಂಕಪೂಜಾರಿಯ ಹಂಚಿಕೆಯಾಗಿತ್ತು. ಆ ಸಲಹೆಯನ್ನು, ಬಹಳ ಸೂಕ್ತವಾದದ್ದೆಂದು ಎಲ್ಲರೂ ಒಪ್ಪಿದರು. ಆ ಸಲಹೆಯನ್ನು ಕಾರ್ಯಗತಮಾಡುವ ಜವಾಬ್ದಾರಿಯನ್ನು ಸಂಕಪೂಜಾರಿಗೇ ವಹಿಸಿದರು. ಸಂಕಪೂಜಾರಿಯು ಪೊಲೀಸ್ ಇನ್‌ಸ್ಪೆಕ್ಟರೊಡನೆ ಸಮಾಲೋಚನೆ ಮಾಡಿ ಸಲಹೆಯನ್ನು ಜಾರಿಗೆ ತರಬೇಕೆಂದು ತೀರ್ಮಾನ ಮಾಡಿದರು.

ಕೆಲವು ದಿನಗಳನಂತರ ಮೋಹನನು ಪಂಜರವಳ್ಳಿಯಲ್ಲಿ ಇಲ್ಲದಿದ್ದುದನ್ನು ತಿಳಿದುಕೊಂಡು ಸಂಕಪೂಜಾರಿಯು ವಿದೇಶಿ ಬ್ರಾಂದಿ ಶೀಸೆಯೊಂದನ್ನು ಚೀಲದಲ್ಲಿಟ್ಟುಕೊಂಡು ಬೈಸಿಕಲ್ಲಿನಲ್ಲಿ ಪಂಜರವಳ್ಳಿಗೆ ಹೋದನು. ಬೈಸಿಕಲ್ಲನ್ನು ಮೋಹನನ ಮನೆಯ ಹಿಂದುಗಡೆ ಹಾಡ್ಯದಲ್ಲಿಟ್ಟು ಸಪ್ಪಳವಿಲ್ಲದೆ ಚೆನ್ನಮ್ಮನ ಚಲನವಲನಗಳನ್ನು ಹಾಡ್ಯದಲ್ಲಿ ಕಾದು ನಿಂತು ನೋಡುತ್ತಿದ್ದನು. ಚೆನ್ನಮ್ಮನು ಹಾಲು ಕರೆಯುವ ಸಲುವಾಗಿ ಮನೆಯ ಪಕ್ಕದಲ್ಲಿದ್ದ ದನದ ಕೊಟ್ಟಿಗೆಗೆ ಹೋದೊಡನೆ ಸಂಕಪೂಜಾರಿಯು ಹಾಡ್ಯದಿಂದ ಬ್ರಾಂದಿ ಶೀಸೆಯೊಡನೆ ಮೆಲ್ಲಗೆ ಮೋಹನನ ಮನೆಯೊಳಗೆ ಹೋಗಿ ಶೀಸೆಯನ್ನು ಮೋಹನನು ಮಲಗುವ ಕೊಠಡಿಯಲ್ಲಿ ನಾಗಂದಿಗೆಯ ಮೇಲೆ ಯಾರಿಗೂ ಕಾಣಿಸಿದಂತೆ ಇರಿಸಿದನು. ತನ್ನ ಕಾರ್ಯವಾದ ಮೇಲೆ ಸಂಕಪೂಜಾರಿ ಹೊರಗಡೆ ಬಂದು ಅಂಗಳದಲ್ಲಿ ನಿರಾಪರಾಧಿಯಂತೆ ನಿಂತುಕೊಂಡಿದ್ದನು. ಚೆನ್ನಮ್ಮನು ಕೊಟ್ಟಿಗೆಯಿಂದ ಮನೆಗೆ ಬಂದೊಡನೆ ಆಗತಾನೆ ಬಂದವನಂತೆ "ಮುತ್ತೂರಿಗೆ ಹ್ವಾಯ್ಕಂತ ಬಂದೆ, ದಾರೀಲಿ ಹಾಂಗೆ ಮೋಹನಯ್ಯನ, ನಿಮ್ನ ನೋಡ್ಕಂದು ಮನ್ಸಾಯ್ತು. ಹ್ಯಾಂಗಿದೀರಿ ಅಂತ ಕಾಂಬ್ಕೆ ಅಂತ ಬಂದೆ" ಎಂದನು. ಚೆನ್ನಮ್ಮನು 'ಚೆಂದಾಗಿದೀವಪ್ಪ ಮೋಹ್ನ ಪ್ಯಾಟೆಗೋಗ್ಯಾನೆ' ಎಂದು ಹೇಳಿ ಸಂಕಪೂಜಾರಿಗೆ ಎಲೆ ಅಡಕೆಗಳನ್ನು ಕೊಟ್ಟು ಕಳುಹಿಸಿಕೊಟ್ಟಳು. ಸಂಕಪೂಜಾರಿಯು ತನ್ನ ಸಾಧನೆಯನ್ನು ತನ್ನ ಧಣಿಯಾದ ರಂಗನಾಥನಿಗೂ, ನಂತರ ಪೊಲೀಸ್ ಇನ್‌ಸ್ಪೆಕ್ಟರಿಗೂ ವರದಿ ಮಾಡಿದನು. ಪೊಲೀಸ್ ಇನ್‌ಸ್ಪೆಕ್ಟರು ಮೋಹನನು ಮರಳಿ ಪಂಜರವಳ್ಳಿಗೆ ಹೋಗುವುದನ್ನೇ ಎದುರು ನೋಡುತ್ತಿದ್ದರು. ಅವನು ಪಂಜರವಳ್ಳಿಗೆ ಹೋಗುವುದನ್ನು ಕಾಯ್ದು ನೋಡಬೇಕೆಂದು ಗುಪ್ತ ಪೊಲೀಸಿನವರಿಗೆ ತಾಕೀತು ಮಾಡಿದ್ದರು.

ಮರುದಿನ ಮೋಹನನು ತನ್ನ ಮನೆಯಲ್ಲಿದ್ದ ಸಮಾಚಾರವನ್ನು ತಿಳಿದುಕೊಂಡು ಪೊಲೀಸ್ ಇನ್‌ಸ್ಪೆಕ್ಟರು ತಮ್ಮ ಪಡೆಯೊಡನೆ ಪಂಜರವಳ್ಳಿಗೆ ನುಗ್ಗಿದರು. ಪಂಜರವಳ್ಳಿಯನ್ನು ತಲುಪಿದನಂತರ ನಾಗೇಂದ್ರನನ್ನೂ, ನೀಲೇಗೌಡನನ್ನೂ ಮತ್ತು ಸಣ್ಣೇಗೌಡನನ್ನೂ ಬರಮಾಡಿಕೊಂಡು ಅವರೊಡನೆ ಮಸಲತ್ತು ನಡೆಯಿಸಿದರು. ಅನಂತರ ಎಲ್ಲರೂ ಸೇರಿ ಮೋಹನನ ಮನೆಗೆ ಹೋದರು. ಮನೆಯನ್ನು ತಲುಪಿದನಂತರ ಮನೆಯ ಸುತ್ತ ಪೊಲೀಸ್ ಪಹರೆಯನ್ನು ನೇಮಿಸಿ ಇನ್‌ಸ್ಪೆಕ್ಟರವರು ಕೆಲವರು ಪೊಲೀಸ್ ಸಿಪಾಯಿ ಗಳೊಡನೆ ಮತ್ತು ಪಂಚಾಯಿತರಾದ ನಾಗೇಂದ್ರ ಮುಂತಾದವರೊಡನೆ ಮನೆಯೊಳಕ್ಕೆ ನುಗ್ಗಿದರು. ಪೊಲೀಸಿನವರು ಏಕಾಏಕಿ ತನ್ನ ಮನೆಯ ಮೇಲೆ ಧಾಳಿ ನಡೆಸುತ್ತಿದ್ದುದನ್ನು ನೋಡಿ ಮೋಹನನಿಗೆ ಆಶ್ಚರ್ಯವಾಯಿತು, ಸಿಟ್ಟೂ ಬಂತು. ಇನ್‌ಸ್ಪೆಕ್ಟರನ್ನು ಕುರಿತು "ಏನ್ರೀ ಇನ್‌ಸ್ಪೆಕ್ಟ್ರೇ ಹೇಳ್ದೆಕೇಳ್ದೆ ಏಕಾಏಕಿ ಮನೆಯೊಳಗೆ ನುಗ್ಗುತ್ತಾ ಇದ್ದೀರಿ? ವಾರೆಂಟು ಗೀರೆಂಟು ಇದ್ದರೆ ತೋರಿಸಿ. ಸುಖಾಸುಮ್ಮನೆ ಶಾಸನ ಸದಸ್ಯನೊಬ್ಬನ ಮನೆಗೆ ನುಗ್ಗುವುದು ಪೊಲೀಸ್ ಇಲಾಖೆಗೆ ಗೌರವ ತರತಕ್ಕುದಲ್ಲ" ಎಂದನು.

"ಶಾಸನ ಸಭಾ ಸದಸ್ಯರು ಬಾಯಿಗೆ ಬಂದಂತೆ ಎಲ್ಲಿ ಬೇಕಾದರೂ ಮಾತನಾಡಬಹುದು. ಆದರೆ ಕಾನೂನಿಗೇನೂ ಅವರು ಹೆಚ್ಚಲ್ಲ. ನಾನು ಮಾಡುವ ಕೆಲಸ ನಮ್ಮ ಇಲಾಖೆಗೆ ಗೌರವ ತರುತ್ತದೆಯೋ ಅಥವಾ ನಿಮಗೆ ಗೌರವ ತರುತ್ತದೆಯೋ ಎಂಬುದನ್ನು ಈಗಲೇ ಹತ್ತು ನಿಮಿಷಗಳಲ್ಲಿ ತೋರಿಸುತ್ತೇನೆ" ಎಂದು ದರ್ಪದಿಂದ ಹೇಳಿ, ಪೊಲೀಸ್ ಇನ್‌ಸ್ಪೆಕ್ಟರು ಮೋಹನನ ಕೊಠಡಿಗೆ ಪಂಚಾಯ್ತರೊಡನೆ ನುಗ್ಗಿ ಸಂಕಪೂಜಾರಿಯು ಮೊದಲೇ ತಿಳಿಸಿದ್ದ ಜಾಗದಲ್ಲಿ ಕೈಹಾಕಿ ಬ್ರಾಂದಿ ಸೀಸೆಯನ್ನು ಹೊರತೆಗೆದು "ನೋಡ್ರಿ ಪಂಚಾಯ್ತರೇ. ನಾನೇನೂ ಜಾದೂ ಮಾಡಿ ಈ ಬಾಟ್ಲಿ ತಯಾರ್ಮಾಡಲಿಲ್ಲ. ಈ ಮಹನೀಯರು ಶಾಸನ ಸಭಾ ಸದಸ್ಯರಂತೆ! ಗೌರವಸ್ಥರಂತೆ! ವೇದಿಕೆಯ ಮೇಲೆ ಉದ್ದುದ್ದ ಭಾಷಣಮಾಡಿ ಗಾಂಧೀ ಶಿಷ್ಯರಂತೆ ನಟಿಸುವುದು. ಮಾಡುವುದು ಇಂತಹ ನಾಚಿಕೆಗೇಡಿನ ಕೆಲಸ. ಇವರಂತಹ ಆಷಾಢಭೂತಿಗಳಿಂದಲೇ ನಮ್ಮ ಕಾಂಗ್ರೆಸ್ ಸರ್ಕಾರಕ್ಕೆ ಕೆಟ್ಟ ಹೆಸರು ಬಂದಿರೋದು ಮೋಹನ್, ನಿಮ್ಮನ್ನು ದಸ್ತಗಿರಿ ಮಾಡಿದ್ದೀನಿ" ಎಂದರು.

ಮೋಹನನಿಗೆ ಇದು ತನ್ನ ರಾಜಕೀಯ ವಿರೋಧಿಗಳು ಮಾಡಿದ ತಂತ್ರವೆಂದು ತಕ್ಷಣ ಹೊಳೆಯಿತು. ಆದರೆ ಆ ತಂತ್ರಕ್ಕೆ ಆ ತಕ್ಷಣ ಮಾಡುವುದೇನೂ ಇರಲಿಲ್ಲ. ಚಿಂತಾಕ್ರಾಂತನಾಗಿ ನಿಂತಿದ್ದನು. ಇದನ್ನೆಲ್ಲಾ ನೋಡುತ್ತಿದ್ದ ಚೆನ್ನಮ್ಮ ಬಿಕ್ಕಿ ಬಿಕ್ಕಿ ಅಳುತ್ತಾ ಇನ್‌ಸ್ಪೆಕ್ಟರ ಕಾಲಿಗೆ ಬಿದ್ದು "ಸ್ವಾಮೀ ನನ್ಮಗನ್ನ ಕಾಪಾಡ್ಬೇಕು. ನಮ್ಮನೇಲಿ ಯಾವಾಗ್ಲೂ ಬಿರೇಂಡಿ ಬಾಟ್ಲೆ ಇರಲ್ಲ. ಯಾರೋ ಕಿತ್ರಿಮ ಮಾಡ್ಯಾರೆ. ನಾ ದಿಕ್ಕಿಲ್ಲದ ಮುಂಡೆ. ನನ್ನೋಡಾರೂ ನನ್ಮಗನ್ನ ಬಿಡಿ" ಎಂದಳು "ಕಾಲ್ಬಿಡಮ್ಮ ನೀನೂ ಒಳ್ಳೆಯವಳು, ನಿನ್ಮಗನೂ ವಳ್ಳೆಯವನು. ಮಗನಂತೆ ನೀನೂ ಆಷಾಢಭೂತಿ. ಮಗನಿಗೆ ತಕ್ಕತಾಯಿ; ತಾಯಿಗೆ ತಕ್ಕಮಗ ಹೋಗಾಚೆ" ಎಂದು ಇನ್‌ಸ್ಪೆಕ್ಟರು ಗರ್ಜಿಸಿದರು.

ಅವರ ಆರ್ಭಟಕ್ಕೆ ಹೆದರಿ ಚೆನ್ನಮ್ಮನು ಅವರ ಕಾಲನ್ನು ಬಿಟ್ಟು ಒಂದು ಮೂಲೆಯಲ್ಲಿ ನಡುಗುತ್ತಾ ನಿಂತಿದ್ದಳು. ನಾಗೇಂದ್ರನು ಮಹಜರನ್ನು ಬರೆದನು. ಮಹಜರಿಗೆ ಹಾಜರಿದ್ದವರ ರುಜುವನ್ನು ಹಾಕಿಸಿ ಮೋಹನನ ಕೈಗಳಿಗೆ ಬೇಡಿಯನ್ನು ಹಾಕಿ ಅವನನ್ನು ಕರೆದುಕೊಂಡು ಹೋಗಲು ಪೊಲೀಸಿನವರು ಉದ್ಯುಕ್ತರಾದರು. ಅದನ್ನು ನೋಡಿದ ಚೆನ್ನಮ್ಮನು ಗಟ್ಟಿಯಾಗಿ ರೋಧಿಸಲಾಂಭಿಸಿದಳು. ತಾಯಿಯ ಅಳುವನ್ನು ನೋಡಿದ ಮೋಹನನಿಗೂ ಅಳು ಬಂತು. ತಾಯಿಯನ್ನು ಕುರಿತು "ಅವ್ವಾ, ಯಾರನ್ನಾದರೂ ಜಾಮೀನು ಕೊಟ್ಟು ರಾತ್ರಿ ಅಥವಾ ಬೆಳಿಗ್ಗೆ ಬರುತ್ತೇನೆ. ನೀನು ಹೆದರಬೇಕಾಗಿಲ್ಲ. ರಂಗನಾಥನ ಗುಂಪಿನವರು ನನಗೆ ಅವಮಾನ ಮಾಡುವ ಉದ್ದೇಶದಿಂದ ಈ ಕೆಲಸ ಮಾಡಿದ್ದಾರೆ. ಸತ್ಯಕ್ಕೆ ಜಯವಿದೆ" ಎನ್ನುತ್ತಿರುವಲ್ಲಿ, ಬೇಡಿಯನ್ನು ಹಿಡಿದಿದ್ದ ಪೋಲಿಸಿನವನು "ಸಾಕ್ರಿ ನಿಮ್ಮ ಹರಿಕತೆ, ಕೈಗೆ ಬೇಡಿ ಬಿದ್ಮ್ಯಾಲೆ ಹೀಗೆಲ್ಲಾ ಹರಿಕತೆ ಮಾಡ್ಬಾರ್ದು. ಸಂತೆ ಮೈದಾನ್‌ದಾಗೆ ಅವತ್ತು ಭಾಷಣ ಮಾಡ್ದಂಗಲ್ಲಾ. ಹೊರಡಿ" ಎಂದು ಮೋಹನನನ್ನು ಎಳೆದನು. ಮೋಹನನಿಗೆ ವಿಪರೀತ ಸಿಟ್ಟು ಬಂತು. ಆದರೆ ಮಾಡುವುದೇನು? ಪೊಲೀಸಿನವರ ಹಿಂದೆ ಸದ್ದಿಲ್ಲದೆ ಹೊರಟನು.

ಮೋಹನ ತನ್ನ ಜೀವಮಾನದಲ್ಲೇ ಇಂತಹ ಅವಮಾನವನ್ನು ಅನುಭವಿಸಿರಲಿಲ್ಲ. ಸಾಧ್ಯವಿದ್ದಿದ್ದರೆ ಆತ್ಮಹತ್ಯೆವನ್ನು ಮಾಡಿಕೊಳ್ಳಲೂ ಸಹ ಅವನು ಹಿಂಜರಿಯುತ್ತಿರಲಿಲ್ಲ. ಪಂಜರವಳ್ಳಿಯಿಂದ ಪವಿತ್ರಪುರಕ್ಕೆ ಮೂರು ಮೈಲಿಗಳ ದೂರ ನಡೆಯಬೇಕಾಗಿತ್ತು. ಪೊಲೀಸಿನವರು ಮೋಹನನಿಗೆ ಅವಮಾನ ಮಾಡುವ ಉದ್ದೇಶದಿಂದ ಅವನನ್ನು ನಡೆಯಿಸಿ ಕೊಂಡೇ ಹೋಗುತ್ತಿದ್ದರು. ಅವನನ್ನು ಬಂಧಿಸಿದ ಸುದ್ದಿ ಕಾಳ್ಗಿಚ್ಚಿನಂತೆ ತಾಲ್ಲೂಕಿನ ಎಲ್ಲಾ ಕಡೆಯಲ್ಲೂ ಹಬ್ಬಿತು. ಅವನನ್ನು ಮೆಚ್ಚಿದ ಜನರು ತಂಡೋಪತಂಡವಾಗಿ ಅಲ್ಲಲ್ಲಿ ದಾರಿಯಲ್ಲಿ ಅವನಿಗಾಗಿ ಕಾಯುತ್ತಿದ್ದರು. ಮೋಹನನೊಡನೆ ಮಾತನಾಡಲು ಅವರಿಗ್ಯಾರಿಗೂ ಪೊಲೀಸಿನವರು ಅವಕಾಶ ಕೊಡಲಿಲ್ಲ. ಅವನ ದುರವಸ್ಥೆಯನ್ನು ನೋಡಿ ಆ ಜನರು ದುಃಖದಿಂದ ಮರುಗಿದರು. ಮೋಹನನು ನಡೆಯುತ್ತಿದ್ದರೂ, ಅವನ ಮನಸ್ಸು ಬಾಹ್ಯಜಗತ್ತನ್ನು ಮರೆತಿತ್ತು. ನಾನಾ ವಿಚಾರಗಳನ್ನು ಕುರಿತು ಅವನು ಯೋಚಿಸುತ್ತಿದ್ದನು.

"ಸತ್ಯಸಂಧನಾಗಿ ಬಾಳಿದ ತಪ್ಪಿಗೆ ಭಗವಂತನು ನನಗೆ ಈ ಶಿಕ್ಷೆಯನ್ನು ವಿಧಿಸಬಾರದಾಗಿತ್ತು. ನಾನು ಮಾಡಿದ ತಪ್ಪಾದರೂ ಏನು? ಮಹಾತ್ಮ ಗಾಂಧೀಜಿಯವರು ಸತ್ಯ, ಅಹಿಂಸೆಗಳ ಸಹಾಯದಿಂದ ಸೋಲನ್ನೇ ಅರಿಯದ ಬ್ರಿಟಿಷರನ್ನು ಗೆದ್ದರು. ನಾನು ಯಃಕಶ್ಚಿತ್ ರಂಗನಾಥ ಮಿತ್ರಮಂಡಳಿಯವರನ್ನು ಗೆಲ್ಲಲು ಅಸಮರ್ಥನಾಗಿದ್ದೇನೆ. ಕಾರಣವೇನು? ನನ್ನಲ್ಲೇನಾದರೂ ಲೋಪದೋಷಗಳಿವೆಯೋ? ಆದ್ದರಿಂದ ನನಗೆ ಇಂತಹ ಕಷ್ಟಗಳು ಪ್ರಾಪ್ತವಾಗುತ್ತಾ ಇವೆಯೇ? ಛೇ ಇಲ್ಲ ಅನೇಕ ಬಾರಿ ನನ್ನ ಮನಸ್ಸನ್ನು ಒಳಹೊಕ್ಕು ಶೋಧನೆ ಮಾಡಿದ್ದೇನೆ. ನನ್ನಲ್ಲಿ ಹೆಚ್ಚಿನ ಲೋಪದೋಷಗಳೇನೂ ಇಲ್ಲ. ಮೂರ್ತಿ ಹೇಳಿದ್ದನ್ನು ಮರೆತಿದ್ದೆ. ಗಾಂಧೀಜಿಯವರು ನಡೆಯಿಸಿದ್ದು ಸುಸಂಸ್ಕೃತರಾದ ಆಂಗ್ಲೇಯರ ವಿರುದ್ಧ; ನನ್ನ ಹೋರಾಟ ಹಂದಿಗಳಂತಿರುವ ರಂಗನಾಥ

ಮುಂತಾದವರ ವಿರುದ್ಧ; ಮೃಗಗಳ ಮಟ್ಟದಲ್ಲಿರುವ ಈ ಜನರಿಗೆ ನನ್ನ ಸ್ವಭಾವ ಅರ್ಥವಾಗುವುದಾದರೂ ಹೇಗೆ? ಈಗ ಗಾಂಧೀಜಿಯವರು ಬದುಕಿದ್ದು, ಅವರೇನಾದರೂ ಈ ಮಾನವಸ್ವರೂಪದ ಮೃಗಗಳ ವಿರುದ್ಧ ಸತ್ಯಾಗ್ರಹ ನಡೆಯಿಸಿದ್ದರೆ ಈ ದುಷ್ಟರು ಅವರಿಗೆ ವಿಷ ಹಾಕುತ್ತಿದ್ದರು". ಇವೇ ಮುಂತಾದ ವಿಚಾರಗಳು ಅವನ ಮನಸ್ಸಿನಲ್ಲಿ ಹೊಳೆದು ಹಾಯ್ದು ಹೋದವು.

ಅಷ್ಟರಲ್ಲಿ ಪವಿತ್ರಪುರ ಕಾಣಿಸಿತು. ಊರ ಸಮೀಪ ಹೋದೊಡನೆ ಊರ ಬಾಗಿಲಿನಲ್ಲಿ ಮೂರ್ತಿ ನಿಂತಿದ್ದು ಮೋಹನನಿಗೆ ಕಾಣಿಸಿತು. ಮೂರ್ತಿ ಇನ್‌ಸ್ಪೆಕ್ಟರನ್ನು ಕಂಡು ತಾನು ಮೋಹನನಿಗೆ ಜಾಮೀನಾಗುವುದಾಗಿಯೂ, ಅವನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಬೇಕಾಗಿಯೂ ಪ್ರಾರ್ಥಿಸಿದನು. ಇನ್‌ಸ್ಪೆಕ್ಟರು ಅಹಂಕಾರ ವಾಣಿಯಿಂದ ಮೂರ್ತಿಯನ್ನು ಗದರಿಸಿ ಅವನ ಪ್ರಾರ್ಥನೆಯನ್ನು ನಿರಾಕರಿಸಿದರು. ಮೋಹನನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡದಿರಲು ಕಾರಣವಿತ್ತು. ಅವನನ್ನು ಬೇಡಿಗಳ ಸಮೇತ ಪವಿತ್ರಪುರದ ಬೀದಿಗಳಲ್ಲಿ ಮೆರವಣಿಗೆ ಮಾಡಿಸಬೇಕೆಂಬುದು ಇನ್‌ಸ್ಪೆಕ್ಟರ ಉದ್ದೇಶವಾಗಿತ್ತು. ಪವಿತ್ರಪುರದ ದೊಡ್ಡಪೇಟೆಯಲ್ಲಿ ಪೊಲೀಸ್ ಪಡೆ ಸಮೇತ ಮೋಹನನನ್ನು ನೋಡಲು ಸಾವಿರಾರು ಜನರು ಸೇರಿದ್ದರು. ಅದೇ ಬೀದಿಯಲ್ಲಿ ಹಿಂದೆ ಹಲವುಬಾರಿ ಮೋಹನನಿಗೆ ವಿಜೃಂಭಣೆಯ ಮೆರವಣಿಗೆಗಳು ನಡೆದಿದ್ದವು. ಆ ಮೆರವಣಿಗೆಗಳು ಮೋಹನನ ಹಿರಿಮೆಯನ್ನು ಹೆಚ್ಚಿಸತಕ್ಕವಾಗಿದ್ದವು. ಇಂದಿನ ಮೆರವಣಿಗೆ ಅವನ ಗೌರವ ಪ್ರತಿಷ್ಠೆಯನ್ನು ಕುಗ್ಗಿಸತಕ್ಕದ್ದಾಗಿತ್ತು. ಸಾವಿರಾರು ಜನರು ಈ ಮೆರವಣಿಗೆಯನ್ನು ನೋಡಿ ದುಃಖಪಟ್ಟರು. ದುರುದ್ದೇಶದಿಂದ ದುಷ್ಕರ್ಮಿಗಳಾದ ರಂಗನಾಥ ಮುಂತಾದವರು ಇನ್‌ಸ್ಪೆಕ್ಟರೊಡನೆ ಷರೀಕಾಗಿ ಮೋಹನನ ಮೇಲೆ ಸುಳ್ಳು ಆಪಾದನೆಯನ್ನು ಹೊರಿಸಿದ್ದಾರೆಂದು ಜನರಿಗೆ ಆಗಲೇ ಗೊತ್ತಾಗಿತ್ತು.

ಪೊಲೀಸ್ ಪಡೆ ಪೇಟೆಯಲ್ಲಿ ಇನ್ನೂ ಅರೆವಾಸಿ ದೂರ ಹೋಗಿರಲಿಲ್ಲ. ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಜನರ ಗುಂಪು ರೊಚ್ಚಿಗೆದ್ದಿತು. ರೊಚ್ಚಿಗೆದ್ದ ಜನರು ಪೇಟೆಯಿಂದ ಪೊಲೀಸ್ ಠಾಣೆಯ ಕಡೆಗೆ ಧಾವಿಸಿದರು. ಉನ್ಮತ್ತರಾದ ಪೊಲೀಸ್ ಇನ್‌ಸ್ಪೆಕ್ಟರಾಗಲಿ ಅವರ ಕಡೆಯವರಾಗಲಿ ಜನರು ಮುಂದೆ ಸಾಗಿದ್ದನ್ನು ಗಮನಿಸಲಿಲ್ಲ. ಪೊಲೀಸಿನವರು ಮೋಹನನನ್ನು ತಮ್ಮ ಠಾಣೆಗೆ ಕರೆದುಕೊಂಡು ಹೋಗುವುದರೊಳಗಾಗಿ ಠಾಣೆಯ ಮುಂದುಗಡೆ ಮೈದಾನದಲ್ಲಿ ಐದು ಸಾವಿರ ಜನರು ಸೇರಿದ್ದರು. ಸುಮಾರು ಐದುನೂರು ಜನರು ಠಾಣೆಯನ್ನು ಪ್ರವೇಶಿಸಿ ಅದನ್ನು ಆಕ್ರಮಿಸಿಕೊಂಡಿದ್ದರು. ಇನ್‌ಸ್ಪೆಕ್ಟರು ಜನ ಸಮೂಹವನ್ನು ನೋಡಿ ಗಾಬರಿಗೊಂಡರು. ಉನ್ಮತ್ತರಾಗಿದ್ದ ಅವರಿಗೆ ಸ್ವಲ್ಪ ವಿವೇಚನೆ ಬರಲಾರಂಭಿಸಿತು. ಮೋಹನನಿಗೆ ಬೆಂಬಲಿಗರಾಗಿ ಸಾವಿರಾರು ಜನರಿದ್ದಾರೆಂದು ಅಂದು ಅವರಿಗೆ ಅರಿವಾಯಿತು. ಅವರು ಇಕ್ಕಟಿನ ಪರಿಸ್ಥಿತಿಯಲ್ಲಿದ್ದರು. ಠಾಣೆಯ ಒಳಗಡೆ ಪ್ರವೇಶಿಸುವಂತಿರಲಿಲ್ಲ: ಠಾಣೆಯ ಹೊರಗಡೆ ನಿಲ್ಲುವಂತಿರಲಿಲ್ಲ. ಗುಂಪಿನಲ್ಲಿದ್ದ ಜನರು ಇನ್‌ಸ್ಪೆಕ್ಟರನ್ನು ಬಾಯಿಗೆ ಬಂದಂತೆ ಬೈಯುತ್ತಿದ್ದರು.

ಸನ್ನಿವೇಶವನ್ನು ಬುದ್ಧಿವಂತಿಕೆಯಿಂದ ಎದುರಿಸಬೇಕೇ ಹೊರತು ಬಲಾತ್ಕಾರದಿಂದ ಎದುರಿಸುವುದು ಸಾಧ್ಯವಿಲ್ಲವೆಂಬುದನ್ನು ಇನ್‌ಸ್ಪೆಕ್ಟರ್ ಸಾಹೇಬರು ಮನಗಂಡರು. ಪಕ್ಕದಲ್ಲಿದ್ದ ಕಾನ್‌ಸ್ಟೇಬಲ್ ಒಬ್ಬನನ್ನು ಕರೆದು ಬಹು ಜಾಗ್ರತೆಯಾಗಿ ಮೂರ್ತಿಯನ್ನು ಪತ್ತೆ ಹಚ್ಚಿ ಕರೆತರಬೇಕೆಂದು ಆಜ್ಞಾಪಿಸಿದರು. ಸ್ವಲ್ಪ ಹೊತ್ತಾದನಂತರ ಆ ಕಾನ್‌ಸ್ಟೇಬಲ್ ಮೂರ್ತಿಯನ್ನು ಕರೆತಂದನು. ಮೂರ್ತಿಯನ್ನು ಬಹಳ ಗೌರವದಿಂದ ಇನ್‌ಸ್ಪೆಕ್ಟರು ಬರಮಾಡಿಕೊಂಡು ಊರ ಬಾಗಿಲಲ್ಲಿ ತಾವಾಡಿದ ಮಾತಿಗಾಗಿ ಪಶ್ಚಾತ್ತಾಪ ವ್ಯಕ್ತಪಡಿಸಿ, ಯಾರಾದರೂ ಜಾಮೀನು ಆಗುವವರು ಸಿಕ್ಕರೆ ಮೋಹನನನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲು ಅಭ್ಯಂತರವಿಲ್ಲವೆಂದು ನುಡಿದರು. ಇನ್‌ಸ್ಪೆಕ್ಟರ ಅಹಂಕಾರ ಇನ್ನೂ ಸ್ವಲ್ಪ ಇಳಿಯಬೇಕೆಂದು ಮೂರ್ತಿಯು ಆಶಿಸಿದ್ದನು. ಆದ್ದರಿಂದ ಮೋಹನನಿಗೆ ಜಾಮೀನಾಗುವವರು ಯಾರೂ ಸಿಕ್ಕಲಾರರೆಂದು ಮೂರ್ತಿಯು ಸ್ಪಷ್ಟವಾದ ವಾಣಿಯಲ್ಲಿ ಸ್ವಲ್ಪ ಕಟುವಾಗಿ ಆದರೆ ಗಾಂಭೀರ್ಯದಿಂದ ಹೇಳಿದನು. ಮೈದಾನದಲ್ಲಿ ಸೇರಿದ್ದ ಗುಂಪು ಅಂಕೆಮೀರುವ ರೀತಿಯಲ್ಲಿತ್ತು. ಯಾವ ಗಳಿಗೆಯಲ್ಲಿ ಏನಾಗುತ್ತದೆಂಬುದನ್ನು ಹೇಳಲಾಗುತ್ತಿರಲಿಲ್ಲ. ಇನ್‌ಸ್ಪೆಕ್ಟರಿಗೆ ಕಳವಳವುಂಟಾಯಿತು. ಆದ್ದರಿಂದ ಹೇಗಾದರೂ ಮಾಡಿ ಜನಸಮೂಹದಿಂದ ಪಾರಾಗಬೇಕೆಂದು ನಿರ್ಧಾರ ಮಾಡಿದರು. ಮೋಹನನು ಮುಚ್ಚಳಿಕೆಯನ್ನು ಬರೆದುಕೊಡುವುದಾದರೆ ಅವನ ಸ್ವಂತ ಮುಚ್ಚಳಿಕೆಯ ಆಧಾರದ ಮೇಲೆ ಅವನನ್ನು ಬಿಡುಗಡೆ ಮಾಡಬಹುದೆಂದು ಇನ್‌ಸ್ಪೆಕ್ಟರು ಮೂರ್ತಿಗೆ ಹೇಳಿದರು. ಮೂರ್ತಿ ಸ್ವಲ್ಪಕಾಲ ಯೋಚಿಸಿದನು. ಜನರು ಹದ್ದುಮೀರಿ ವರ್ತಿಸಿದರೆ ದೊಂಬಿಯಾಗುವುದು ಖಂಡಿತವೆಂದು ಮೂರ್ತಿಗೂ ಅರಿವಾಗಿತ್ತು. ಆದ್ದರಿಂದ ಮುಚ್ಚಳಿಕೆಯನ್ನು ಬರೆದು ಕೊಡಲು ಅವನು ಮೋಹನನನ್ನು ಒಪ್ಪಿಸಿದನು. ಮೋಹನನು ಮುಚ್ಚಳಿಕೆಯನ್ನು ಬರೆದುಕೊಡಲು ಒಪ್ಪಿದ್ದು ಇನ್‌ಸ್ಪೆಕ್ಟರಿಗೆ ಒಂದು ಗಂಡಾಂತರವೇ ತಪ್ಪಿದಂತಾಗಿತ್ತು. ಅವಸರ ಅವಸರವಾಗಿ ಇನ್‌ಸ್ಪೆಕ್ಟರು ಮುಚ್ಚಳಿಕೆಗೆ ಮೋಹನನ ರುಜುವನ್ನು ಪಡೆದು ಅವನನ್ನು ಬಿಡುಗಡೆ ಮಾಡಿದರು.

ಮೋಹನನ ಮನೆ ಮೇಲೆ ಪವಿತ್ರಪುರದ ಪೊಲೀಸಿನವರು ಧಾಳಿಯನ್ನು ಮಾಡಿದ್ದೂ, ಅವರು ಮೋಹನನನ್ನು ಬಂಧಿಸಿದ್ದೂ, ಉದ್ರಿಕ್ತರಾದ ಮೋಹನನ ಹಿತೈಷಿಗಳು ಪೊಲೀಸ್ ಠಾಣೆಯ ಎದುರು ಗುಂಪು ಸೇರಿದ್ದೂ, ಎಲ್ಲಾ ದಿನ ಪತ್ರಿಕೆಗಳಲ್ಲಿಯೂ ಮರುದಿನ ಪ್ರಕಟವಾಗಿತ್ತು. ಮಂಗಳದಾಸನು ತನ್ನ ಪತ್ರಿಕೆಯಲ್ಲಿ ಮೋಹನನನ್ನು ಅವಹೇಳನ ಮಾಡಿದ್ದಲ್ಲದೆ, ಹಿಂದೆ ತಾನು ಪತ್ರಿಕೆಯಲ್ಲಿ ಮೋಹನನ ವಿಚಾರದಲ್ಲಿ ಬರೆದಿದ್ದು ನಿಜವಾಯಿತೆಂದು ಬರೆದಿದ್ದನು. ಪತ್ರಿಕೆಗಳಲ್ಲಿ ಪ್ರಕಟವಾದ ಸುದ್ದಿಯನ್ನು ನೋಡಿ ನಿಜಾಂಶವನ್ನರಿತುಕೊಳ್ಳಲು ಸರ್ಕಾರದವರು ಸಹ ಕಾತುರರಾಗಿದ್ದರು. ಸತ್ಯಾಂಶವನ್ನು ತಿಳಿಸಬೇಕೆಂದು ಇಲಾಖೆಯ ಮುಖ್ಯಾಧಿಕಾರಿಗಳು ಪೊಲೀಸ್ ಇನ್‌ಸ್ಪೆಕ್ಟರಿಗೆ ತಂತಿಯನ್ನು ಕಳುಹಿಸಿದರು. ಉದ್ರಿಕ್ತರಾದ ಜನಸ್ತೋಮವನ್ನು ನೋಡಿದ ಇನ್‌ಸ್ಪೆಕ್ಟರಿಗೆ ಮೋಹನನ

ಮನೆಯನ್ನು ಶೋಧಿಸಿ ಅವನನ್ನು ದಸ್ತಗಿರಿ ಮಾಡಿದ ವಿಚಾರ ಪತ್ರಿಕೆಗಳಲ್ಲಿ ಪ್ರಕಟವಾಗಿ ಸರ್ಕಾರದ ಗಮನಕ್ಕೆ ಹೋದನಂತರ ಮೊಕದ್ದಮೆಯನ್ನು ಹೂಡದೆ ವಿಧಿಯಿರಲಿಲ್ಲ.

ಸರ್ಕಾರಕ್ಕೆ ಸುಳ್ಳು ವರದಿಯನ್ನು ಕಳುಹಿಸಿದನಂತರ ಇನ್‌ಸ್ಪೆಕ್ಟರು ಪವಿತ್ರಪುರದ ಮ್ಯಾಜಿಸ್ಟ್ರೇಟರ ಸಮ್ಮುಖದಲ್ಲಿ ಪಾನನಿರೋಧದ ಕಾಯಿದೆಯ ಮೇರೆಗೆ ಮೋಹನನ ಮೇಲೆ ಮೊಕದ್ದಮೆಯನ್ನು ಹೂಡಿದರು. ಮೊಕದ್ದಮೆಯಲ್ಲಿ ಪೋಲಿಸಿನವರು ವಿಶೇಷ ಮೆಹನತ್ತನ್ನು ಮಾಡಿ ಸುಳ್ಳು ರುಜುವಾತನ್ನು ಒದಗಿಸಿದ್ದರು. ಪೋಲಿಸಿನವರ ಪರವಾಗಿ ಮಹಜರ್ ಸಾಕ್ಷಿಗಳಾಗಿದ್ದ ನಾಗೇಂದ್ರ, ನೀಲೇಗೌಡ, ಸಣ್ಣೇಗೌಡ, ಇವರುಗಳ ವಿಚಾರಣೆಯೂ ಮತ್ತು ಇನ್‌ಸ್ಪೆಕ್ಟರ ವಿಚಾರಣೆಯೂ ನಡೆಯಿತು. ಮೋಹನನ ಪರವಾಗಿ ಸುಪ್ರಸಿದ್ಧ ನ್ಯಾಯವಾದಿ ಸೂರ್ಯನಾರಾಯಣರಾಯರು ವಕಾಲತ್ತನ್ನು ವಹಿಸಿದ್ದರು. ನೀಲೇಗೌಡನು ಅವನ ಊರಿನಲ್ಲಿ ಕಿತಾಪತಿ ಮಾಡುವುದರಲ್ಲಿ ನಿಸ್ಸೀಮನಾಗಿದ್ದರೂ ಕೋರ್ಟ್ ವ್ಯವಹಾರಗಳಲ್ಲಿ ಅಷ್ಟೇನೂ ಬುದ್ಧಿವಂತನಾಗಿರಲಿಲ್ಲ. ಸೂರ್ಯನಾರಾಯಣ ರಾಯರು ವಿಚಾರಣೆಯ ಕಾಲದಲ್ಲಿ ತಮಗೆಬೇಕಾದ ಅನೇಕ ವಿಚಾರಗಳನ್ನು ನೀಲೇಗೌಡನ ಬಾಯಿಂದಲೇ ಹೊರಡಿಸಿದರು. ನೀಲೇಗೌಡನು ಬೆಪ್ಪನಂತೆ, ಪೋಲೀಸಿ ನವರು ಮೋಹನನ ಮನೆಯನ್ನು ಶೋಧಿಸಿದ ಹಿಂದಿನ ದಿನ ಸಂಕಪೂಜಾರಿಯು ಪಂಜರವಳ್ಳಿಗೆ ಬಂದಿದ್ದನೆಂದು ಒಪ್ಪಿಕೊಂಡನು. ಆ ದಿನ ಸಂಕಪೂಜಾರಿಯು ಮೋಹನನ ಮನೆಗೆ ಹೋಗಿದ್ದನೆಂದೂ ಸಹ ಒಪ್ಪಿಕೊಂಡನು. ಜೊತೆಗೆ ತಾನೂ, ಸಂಕಪೂಜಾರಿಯೂ, ನಾಗೇಂದ್ರನೂ, ಕಲ್ಲಪ್ಪನೂ, ರಂಗನಾಥನೂ ಒಂದು ಗುಂಪಿಗೆ ಸೇರಿದವರೆಂದೂ, ಮೋಹನನೂ, ಮೂರ್ತಿ ಮುಂತಾದವರೂ ಇನ್ನೊಂದು ಗುಂಪಿಗೆ ಸೇರಿದವರೆಂದೂ, ಉಭಯ ಗುಂಪುಗಳಿಗೂ ಪೈಪೋಟಿಯಿದೆಯೆಂದೂ ಒಪ್ಪಿಕೊಂಡನು. ಅನಂತರ ಹೇಳಿಕೆಯನ್ನಿತ್ತ ನಾಗೇಂದ್ರನೂ, ಸಣ್ಣೇಗೌಡನೂ, ಪವಿತ್ರಪುರ ತಾಲ್ಲೂಕಿನ ರಾಜಕಾರಣದಲ್ಲಿ ಎರಡು ಗುಂಪುಗಳಿರುವುದನ್ನು ಒಪ್ಪಿಕೊಂಡರು. ಸೂರ್ಯನಾರಾಯಣರಾಯರು ನಾಗೇಂದ್ರನನ್ನು ಪುಸಲಾಯಿಸಿ ಕೇಳಿದ ಪ್ರಶ್ನೆಯೊಂದಕ್ಕೆ ನಾಗೇಂದ್ರನು ಮೋಹನನ ಜೀವನ ನಿರ್ಮಲವಾದುದೆಂಬುದನ್ನೂ, ಆತನು ಆದರ್ಶವಾದಿಯೆಂಬುದನ್ನೂ ಒಪ್ಪಿಕೊಂಡನು. ಪೊಲೀಸ್ ಇನ್‌ಸ್ಪೆಕ್ಟರು ತಮ್ಮ ಹೇಳಿಕೆಯಲ್ಲಿ, ಮೋಹನನು ತಮ್ಮ ವಿರುದ್ಧ ಇಲಾಖೆಯ ಮುಖ್ಯಾಧಿಕಾರಿಗಳಿಗೆ ದೂರು ಬರೆದಿರುವುದು ನಿಜವೆಂದು ಒಪ್ಪಿಕೊಂಡರು. ಮೋಹನನ ಪರವಾಗಿ ಅವನ ತಾಯಿ ಚೆನ್ನಮ್ಮನ ವಿಚಾರಣೆ ನಡೆಯಿತು. ಆಕೆಯು ತನ್ನ ಹೇಳಿಕೆಯಲ್ಲಿ, ತಾನು ದನಗಳ ಕೊಟ್ಟಿಗೆಗೆ ಹಾಲು ಕರೆಯಲು ಹೋಗಿದ್ದಾಗ ಸಂಕಪೂಜಾರಿಯು ತನ್ನ ಮನೆಗೆ ಬಂದಿದ್ದನೆಂದೂ, ಆಗ ಮನೆಗೆ ಬಾಗಿಲನ್ನು ಹಾಕಿರಲಿಲ್ಲವೆಂದು ತಿಳಿಸಿದಳು. ವಿಚಾರಣೆ ಮುಗಿದ ನಂತರ ವಾದ ವಿವಾದಗಳು ನಡೆದವು. ಅನಂತರ ನ್ಯಾಯಾಧೀಶರು ತೀರ್ಪನ್ನು ಹೇಳಿದರು. ತೀರ್ಪಿನಲ್ಲಿ ಮೋಹನ ಒಬ್ಬ ಆದರ್ಶವಾದಿಯೆಂದೂ. ಗುಂಪು ರಾಜಕಾರಣದ ದೆಶೆಯಿಂದ ಕೆಲವು ರಾಜಕಾರಣಿಗಳು ಪೊಲೀಸಿನವರೊಡನೆ ಷರೀಕಾಗಿ ಅವನ ಮೇಲೆ ಸುಳ್ಳು

ಆಪಾದನೆಗಳನ್ನು ಹೊರಸಿದ್ದಾರೆಂದೂ, ಪ್ರಸ್ತಾಪಿಸಿ ಮೋಹನನು ನಿರ್ದೋಷಿಯೆಂದು ಬಿಡುಗಡೆಮಾಡಿದರು. ತೀರ್ಪನ್ನು ಕೇಳಲು ಬಂದಿದ್ದ ಮೋಹನನ ಹಿತೈಷಿಗಳು ಅವನನ್ನು ಪವಿತ್ರಪುರದ ದೊಡ್ಡಪೇಟೆಯಲ್ಲಿ ಮೆರವಣಿಗೆಯಿಂದ ಕೊಂಡೊಯ್ದರು. ಹಿಂದೆ ಎಂದೂ ದೊರಕದ ಅದ್ಭುತ ಸ್ವಾಗತ ಅಂದು ದೊಡ್ಡಪೇಟೆಯಲ್ಲಿ ಅವನಿಗೆ ಲಭಿಸಿತು.

ಮೋಹನನ ಮೇಲೆ ಪೊಲೀಸಿನವರು ಹೂಡಿದ್ದ ಮೊಕದ್ದಮೆಯಲ್ಲಿ ಅವನು ನಿರ್ದೋಷಿಯೆಂದು ತೀರ್ಮಾನವಾಗಿದ್ದು ಇನ್‌ಸ್ಪೆಕ್ಟರರ ಮುಖಕ್ಕೆ ಮಸಿಯನ್ನು ಬಳಿದಂತೆ ಆಗಿತ್ತು. ಪವಿತ್ರಪುರದ ಜನರು ಇನ್‌ಸ್ಪೆಕ್ಟರ ಮೇಲೂ ರಂಗನಾಥ ಮುಂತಾದವರ ಮೇಲೂ, ಬಹಳ ಕೋಪಗೊಂಡಿದ್ದರು. ಜನ ಬಹಿರಂಗವಾಗಿ ರಂಗನಾಥನನ್ನೂ, ಕಲ್ಲಪ್ಪನನ್ನೂ, ಬಾಯಿಗೆ ಬಂದಂತೆ ಬಯ್ಯುತ್ತಿದ್ದರು. ಮಾನಮರ್ಯಾದೆಗಳಿಗೆ ಅಂಜುವವರಾಗಿದ್ದರೆ ಅಂದಿದ್ದ ವಾತಾವರಣದಲ್ಲಿ ರಂಗನಾಥನೂ, ಕಲ್ಲಪ್ಪನೂ ತಾವಾಗಿಯೇ ರಾಜಕಾರಣವನ್ನು ಬಿಡುತ್ತಿದ್ದರು. ಆದರೆ ಅವರು ಜನ ಬೆಂಬಲವಿಲ್ಲದ ಭಂಡ ರಾಜಕಾರಣದಲ್ಲಿ ತೊಡಗಿದ್ದರಿಂದ ಜನರ ಬಹಿರಂಗ ಟೀಕೆಗಳು ಅವರ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಿರಲಿಲ್ಲ. ಅವರಿಗೆ ಜನತೆಯ ಮೇಲೆ ವಿಶ್ವಾಸವಿರಲಿಲ್ಲ; ಜನತೆಗೆ ಅವರ ಮೇಲೆ ವಿಶ್ವಾಸವಿರಲಿಲ್ಲ. ಆದರೂ ರಾಜಕಾರಣವನ್ನು ಬಿಡಲು ಅವರು ಸಿದ್ಧರಾಗಿರಲಿಲ್ಲ.ಮೋಹನನನ್ನು ತುಳಿಯಲು ಮಾಡಿದ್ದ ಎರಡನೆಯ ಮಹಾಪ್ರಯತ್ನದಲ್ಲಿ ಅವರಿಗೆ ಎರಡನೆಯ ಬಾರಿ ಸೋಲಾಗಿತ್ತು.

# ೧೨. ಹೂವಿ

ಪಂಜರವಳ್ಳಿಯಲ್ಲಿ ಮಾದಾರ ಕರಡಿಯೆಂಬುವವನು ಹರಿಜನರ ಮುಖಂಡನಾಗಿದ್ದನು. ಅವನಿಗೆ ಹೂವಿಯೆಂಬ ಮಗಳೊಬ್ಬಳಿದ್ದಳು. ಹೂವಿಯು ಜಾತಿಯಲ್ಲಿ ಹಿಂದುಳಿದ ನಿಮ್ನ ತರಗತಿಗೆ ಸೇರಿದವಳಾಗಿದ್ದರೂ. ಸೌಂದರ್ಯದಲ್ಲಾಗಲಿ, ಸದ್ಗುಣದಲ್ಲಾಗಲಿ ಹಿಂದುಳಿದವಳಾಗಿರಲಿಲ್ಲ. ಶ್ಯಾಮಲ ವರ್ಣದ, ಎಸಳು ಮೂಗಿನ ಹೊಳೆವ ಕಂಗಳ, ಮುಂಗುರುಳು, ಚೆಂದುಟಿಗಳ ಆ ಚೆಲುವೆ ವನಸುಮದಂತಿದ್ದಳು. ಆಧುನಿಕ ಸಿನಿಮಾ ತಾರೆಯರ ಮಾದರಿಯಲ್ಲಿ ಅವಳನ್ನು ಸಿಂಗರಿಸಿದ್ದರೆ ಅವಳು ತಾರೆಯರ ರಾಣಿಯಾಗುತ್ತಿದ್ದಳು. ಅವಳದ್ದು ಹುಟ್ಟು ಸೌಂದರ್ಯ; ಬಟ್ಟೆಬರೆಗಳಿಂದ ಬರುವ ಕಟ್ಟು ಸೌಂದರ್ಯವಾಗಿರಲಿಲ್ಲ. ಅವಳ ರೂಪಿಗಾಗಿ ಹರಿಜನ ಯುವಕರನೇಕರು ಮನಸೋತಿದ್ದರು. ಅವಳ ತಂದೆ ಕರಡಿ ಸಣ್ಣೇಗೌಡನ ಊಳಿಗದ ಆಳಾಗಿದ್ದನು. ಸಂಪ್ರದಾಯದ ಮೇರೆಗೆ ಊಳಿಗನ ಆಳಿನ ಮಗಳೂ ಸಹಾ ಊಳಿಗದ ಆಳಾಗಿದ್ದಳು. ಹೂವಿಗೆ ಆಗಲೆ ಇಪ್ಪತ್ತು ವರ್ಷ ವಯಸ್ಸಾಗಿತ್ತು. ಅನುರೂಪನಾದ ವರನೊಬ್ಬನಿಗೆ ಮಗಳನ್ನು ಕೊಟ್ಟು ಮದುವೆ ಮಾಡಬೇಕೆಂದು ತಂದೆ ತಾಯಿಗಳು ಯೋಚಿಸುತ್ತಿದ್ದರು.

ಇಡಿಯ ತಾಲ್ಲೂಕಿನಲ್ಲೇ ಹರಿಜನರಲ್ಲಿ ವಿದ್ಯಾವಂತನೆಂದೆಸಿಕೊಂಡಿದ್ದ ಕರಿಯಪ್ಪನಿಗೆ ಮಗಳನ್ನು ಕೊಡಬೇಕೆಂದು ಹೂವಿಯ ತಂದೆ ತಾಯಿ ಭರಮಿ ಮನಸ್ಸು ಮಾಡಿದ್ದಳು. ಹೂವಿಯೂ ಕರಿಯಪ್ಪನನ್ನು ಮೆಚ್ಚಿದ್ದಳು. ತಾನು ಮದುವೆಯಾಗುವುದಾದರೆ ಹೂವಿಯನ್ನೇ ಮದುವೆಯಾಗಬೇಕೆಂದೂ, ಇಲ್ಲವಾದರೆ ಮೋಹನನಂತೆ ಬ್ರಹ್ಮಚಾರಿಯಾಗಿ ಬಾಳಬೇಕೆಂದೂ, ಕರಿಯಪ್ಪನು ಯೋಚಿಸುತ್ತಿದ್ದನು. ಕರಿಯಪ್ಪನು ಮೋಹನನಂತೆ ಬ್ರಹ್ಮಚಾರಿಯಾಗಿದ್ದರೂ ಹೂವಿಯನ್ನು ನೋಡಿದಾಗಲೆಲ್ಲಾ ಅವನ ಮನಸ್ಸು ಚಂಚಲವಾಗುತ್ತಿತ್ತು. ದೂರದಲ್ಲಿ ಹೂವಿಯು ಬರುತ್ತಿರುವುದನ್ನು ನೋಡಿದಾಗ ರಂಭೆಯೋ, ಊರ್ವಶಿಯೋ ಗಾಳಿಯಲ್ಲಿ ತೇಲಿಕೊಂಡು ಬರುತ್ತಿರುವಂತೆ ಕರಿಯಪ್ಪನ ಮನಸ್ಸಿಗನ್ನಿಸುತ್ತಿತ್ತು. ಚೆನ್ನಮ್ಮನು ಒಂದು ದಿನ ಭರಮಿಯೊಡನೆ ಮಾತನಾಡುತ್ತಿದ್ದಾಗ ಹೂವಿಯನ್ನು ಕರಿಯಪ್ಪನಿಗೇಕೆ ಕೊಡಬಾರದೆಂದು ಕೇಳಿದಳು. ಅದಕ್ಕೆ ಭರಮಿ "ನಮ್ಮಯ್ಯೋರು ಒಪ್ಪದ್ರೆ ಆಗ್ಬೇದು" ಎಂದು ಉತ್ತರ ಹೇಳಿದ್ದಳು. ಆಗ ಚೆನ್ನಮ್ಮನು "ನಿಮ್ಮಯ್ಯೋರ್ನ ನೀ, ಒಪ್ಸು. ಕರಿಯನ್ನ ಅವನ ತಾಯಿನಾ ನಾ ಒಪ್ಸ್ತೀನಿ" ಎಂದು ಹೇಳಿದಳು.

ಹೂವಿಯ ರೂಪರಾಶಿಗೆ ಸಣ್ಣೇಗೌಡನೂ, ನಾಗೇಂದ್ರನೂ ಮಾರು ಹೋಗಿದ್ದರು. ಅವರಿಬ್ಬರೂ ತಮ್ಮ ವಕ್ರ ದೃಷ್ಟಿಯನ್ನು ಅವಳ ಕಡೆಗೆ ಆಗಾಗ ಬೀರುತ್ತಿದ್ದರು. ಹೂವಿಯ ದೃಷ್ಟಿ ಕರಿಯಪ್ಪನ ಮೇಲಿದ್ದುದರಿಂದ ಅವಳು ಸಣ್ಣೇಗೌಡನ ಮತ್ತು ನಾಗೇಂದ್ರನ

ದೃಷ್ಟಿಗೆ ಯಾವ ಪ್ರೋತ್ಸಾಹವನ್ನೂ ನೀಡಿರಲಿಲ್ಲ. ಒಂದು ದಿನ ಕರಡಿಯು ಗದ್ದೆಯಲ್ಲಿ ಸಣ್ಣೇಗೌಡನೊಡನೆ ಪ್ರಾಸಂಗಿಕವಾಗಿ ಮಾತನಾಡುತ್ತಿದ್ದಾಗ "ಹೂವಿಗೆ ಈ ಬ್ಯಾರೆ ಕುಲ್ಯಾರೆ ಮಾಡಾನ ಅಂತ ಮಾಡೀನಿ" ಎಂದು ಹೇಳಿದನು. ಆಗ ಸಣ್ಣೇಗೌಡನು "ನಿಂಗೇ ವಯ್ಸಾತು. ನಿನ್ ಗಂಡ್ ಕುರ್ಗೋಳೆಲ್ಲ ಇನ್ನೂ ಸಣ್ಣವು. ಸೋತ್ಕಾಲ್ದಾಗೆ ಹೂವಿ ನಿನ್ ಜೊತೀಗೆ ಗುಡೀಲೆ ಇದ್ರೆ ನಿಂಗೂ ಎಷ್ಟೋ ಆಸ್ಗಾರ. ಮಣೀ ಕಟ್ಸಿ ಗುಡೀಲಿ ಇಟ್ಗುಳೂದು ಬಿಟ್ಟು ಮದ್ವೇ ಮಾಡ್ತಾನಂತೆ. ಮದ್ವೇ ಮಾಡದ್ರೆ ನಿಂಗೆ ಬರೂ ಭಾಗ್ಯ ಏನು?" ಎಂದು ಹೇಳಿದನು. ಕರಡಿಯು ಸಣ್ಣೇಗೌಡನ ಮಾತಿಗೆ ಮರುಮಾತನ್ನೇನೂ ಹೇಳಲಿಲ್ಲ. ಅವನ ಮನಸ್ಸಿಗೆ ಅಯ್ನೋರು ಹೇಳಿದ್ದು ಒಂದು ದೃಷ್ಟಿಯಿಂದ ಸರಿಯೆಂದು ತೋರಿತು. ರಾತ್ರಿ ಗುಡಿಗೆ ಹೋದಾಗ, ಅವನು ಭರಮಿಯೊಡನೆ ಸಣ್ಣೇಗೌಡನು ಹೇಳಿದ್ದನ್ನು ಹೇಳಿದನು. ಹೂವಿಗೆ ಮಣಿಯನ್ನು ಕಟ್ಟಿ ಗೊರಬಿಯನ್ನಾಗಿ ಮಾಡುವುದು ಭರಮಿಗೆ ಇಷ್ಟವಿರಲಿಲ್ಲ. ಆದರೆ ತನ್ನ ಗಂಡನಿಗೂ ತನ್ನ ಒಡೆಯರಿಗೂ, ಪ್ರತಿಯಾಗಿ ಹೇಳುವ ಧೈರ್ಯ ಅವಳಿಗಿರಲಿಲ್ಲ. ಆದ್ದರಿಂದ ಅವಳು ಸುಮ್ಮನಾದಳು. ತಂದೆಯು ತಾಯಿಯೊಡನೆ ಹೇಳುತ್ತಿದ್ದುದನ್ನು ಹೂವಿ ಆಲಿಸಿದ್ದಳು. ಪಾಪ! ಆಕೆಗೆ ತನ್ನ ಮನಸ್ಸಿನಲ್ಲಿದ್ದುದನ್ನು ತಾಯಿಯ ಹತ್ತಿರ ಹೇಳಲು ಸಹ ಲಜ್ಜೆ ಬಿಡಲಿಲ್ಲ. ಬಹಳ ಯೋಚನೆ ಮಾಡಿ, ಧೈರ್ಯವನ್ನು ತಾಳಿ, ಒಂದು ವಾರ ಕಳೆದನಂತರ ತಾಯಿಯೊಡನೆ ಗೊರಬಿಯಾಗುವುದು ಆಧುನಿಕ ಕಾಲಕ್ಕೆ ಯೋಗ್ಯವಲ್ಲವೆಂದು ಮೆತ್ತಗೆ ಹೇಳಿದಳು. ತಾಯಿಯು ಮಗಳ ಇಂಗಿತವನ್ನು ಅರಿತುಕೊಂಡಳು. ಒಂದೆರಡು ತಿಂಗಳು ಕಳೆದನಂತರ ಕರಡಿಯು ಮಣಿ ಕಟ್ಟುವ ಸಮಾರಂಭವನ್ನು ಯಾವಾಗ ಇಟ್ಟುಕೊಳ್ಳಬೇಕೆಂಬ ವಿಚಾರದಲ್ಲಿ ಭರಮಿಯೊಡನೆ ಪ್ರಸ್ತಾಪಿಸಿದನು. ಆಗ ಭರಮಿ ಸ್ವಲ್ಪ ಧೈರ್ಯವನ್ನು ತಾಳಿ ಮಣಿಕಟ್ಟುವ ಪದ್ಧತಿ ಅಳಿಸಿಹೋಗುವ ಕಾಲದಲ್ಲಿ ಮಗಳಿಗೆ ಮಣಿ ಕಟ್ಟುವುದು ತರವಲ್ಲವೆಂದು ವಾದಿಸಿದಳು. ಕರಡಿಯು ಕೋಪಗೊಂಡು "ನೀ ಹೇಳ್ದಾಗೆ ಕೇಳೋದೋ ಅಯ್ನೋರು ಹೇಳ್ದಾಗೆ ಕೇಳೋದೋ? ನೀ ಅಯ್ನೋರಿಗಿಂತ ಹೆಚ್ಚು ಅಂತ ಮಾಡಿಯೇನು? ಅಯ್ನೋರ ಹಂಗಿಲ್ದೆ ದೆಯ್ವದ ಕಾಟಿಲ್ದೆ ನಾವು ಹ್ವಲೆ ಮಕ್ಕು ಹ್ಯಾಂಗಿರೂದು? ನೀ ಬೇಕಾರೆ ಅಯ್ನೋರ್ ಹ್ವತ್ರ ಹೇಳು" ಎಂದು ಉತ್ತರ ಕೊಟ್ಟನು.

ಮರುದಿನ ಗದ್ದೆಯ ಕೆಲಸಕ್ಕೆ ಹೋಗಿದ್ದಾಗ ಭರಮಿ ಹೆದರಿ ಹೆದರಿ ಸಣ್ಣೇಗೌಡನನ್ನು ಕುರಿತು "ಅಯ್ನೋರು ನಮ್ಮಗೀಗೆ ಮಣೀ ಕಟ್ಟಬೇಕು ಅಂತ ಹೇಳ್ತಾ ಇದ್ರು ಅಂತ ನಮ್ ಗುಡೀಲಿ ಅವರು ಹೇಳದ್ರು. ಮಣಿ ಕಟ್ಟು ವಾಡ್ಕಿ ಹೋಗ್ಯದೆ. ಮಣಿ ಕಟ್ಟೋದು ವಯ್ನಲ್ಲಾ ಅಂತ ಯಲ್ಲಾ ಹೇಳ್ತಾರೆ. ಅಯ್ನೋರು ಒಪ್ಪದ್ರೆ ಮಗೀನ ಸಿದ್ದಿ ಕುರ್ದೆ ಕರಿಯಗೆ ಕೊಡಾನ ಅಂತ ಮಾಡೀವಿ" ಎಂದು ಹೇಳಿದಳು

ಕರಿಯಪ್ಪನ ಹೆಸರು ಹೇಳಿದಕೂಡಲೆ ಸಣ್ಣೇಗೌಡನಿಗೆ ಸಣ್ಣ ಸಿಟ್ಟೇನೂ ಬರಲಿಲ್ಲ. ಕರಿಯಪ್ಪನು ಪವಿತ್ರಪುರದ ಪ್ರೌಢಶಾಲೆಯಲ್ಲಿ ಓದು ಮುಗಿಸಿಕೊಂಡು ಬಂದನಂತರ ಬೆಳ್ಳೇಗೌಡರು ಇವನ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸಲು ಪ್ರಯತ್ನಪಟ್ಟರು. ಅವನು

ತಮ್ಮ ಆಳಿನ ಮಗನಾಗಿದ್ದರಿಂದ ತಮ್ಮ ಮನೆಯಲ್ಲಿ ಕೆಲಸಮಾಡಬೇಕೆಂದು ಕೆಲವು ಸಾರಿ ಆರ್ಭಟ ಮಾಡಿದರು. ಆದರೆ ಆ ಆರ್ಭಟಗಳಿಗೆ ಕರಿಯಪ್ಪನು ಮಣಿಯಲಿಲ್ಲ. ಸಣ್ಣೇಗೌಡನು ಒಂದೆರಡು ಬಾರಿ ಕರಿಯಪ್ಪನನ್ನು ಕರೆಯಿಸಿ ಕೆಲಸಕ್ಕೆ ಬರಬೇಕೆಂದು ಒತ್ತಾಯ ಮಾಡಿದ್ದನು. ಕರಿಯಪ್ಪನು ಬೆಳ್ಳೇಗೌಡರ ಕೆಲಸ ಮಾಡುವ ಬದಲು ದೇಶದ ಕೆಲಸದಲ್ಲಿ ತೊಡಗಿದನು. ಆದ್ದರಿಂದ ಕರಿಯಪ್ಪನ ಹೆಸರನ್ನು ಕೇಳಿದ ಕೂಡಲೆ ಸಣ್ಣೇಗೌಡನು ರೇಗಿದನು. ಭರಮಿಯನ್ನು ಕುರಿತು "ಆ ಪೋಲಿ ಮುಂಡೆಕುರ್ದ್ದೀಗೆ ನಿನ್ ಮಗಳಕೊಟ್ರೆ, ಅದು ಕುಲಮಾರೆ ಮಾಡ್ಕುಂಡ ಎಂಟ್ ದಿನಕ್ಕೆ ಹೊಲ್ತಿ ಬಿಟ್ಟು ಹೊಡೀತದೆ. ನಾ ಹೇಳ್ದಾಂಗೆ ಸುಮ್ನೆ ಮಣಿ ಕಟ್ಸು" ಎಂದನು. ಒಡೆಯರಿಗೆ ವಿರುದ್ಧವಾಗಿ ಹೇಳುವ ಚೈತನ್ಯ ಭರಮಿಗಿರಲಿಲ್ಲ. ಅವಳಿಗೆ ದಿಕ್ಕು ತೋಚದಂತಾಯಿತು. ಒಡೆಯರ ಆಜ್ಞೆಯನ್ನು ಮೀರಿ ಏನನ್ನೂ ಮಾಡುವ ಹಾಗಿರಲಿಲ್ಲ. ಆದ್ದರಿಂದ ಅವಳೂ ಕೂಡ ಕರಡಿಯಂತೆ, ಒಡೆಯರ ಇಚ್ಛೆಯಂತೆ ನಡೆಯಬೇಕೆಂದು ನಿಶ್ಚಯಿಸಿದಳು.

ಗುಡಿಗೆ ಹೋದನಂತರ ಒಡೆಯರ ಇಚ್ಛೆಯನ್ನು ಸೂಕ್ಷ್ಮವಾಗಿ ಹೂವಿಗೆ ತಿಳಿಸಿದಳು. ಹೂವಿಗೆ ಪರಿಸ್ಥಿತಿ ಅರಿವಾಯಿತು. ಒಡೆಯರು ಹೇಳಿದಂತೆ ತನ್ನ ತಂದೆ ತಾಯಿಗಳು ಕೇಳುತ್ತಾರೆಂಬುದರಲ್ಲಿ ಅವಳಿಗೆ ಯಾವ ಸಂಶಯವೂ ಇರಲಿಲ್ಲ. ಸುತ್ತು ಮುತ್ತಲಿದ್ದ ಮೇಲು ಜಾತಿ ಹೆಣ್ಣು ಮಕ್ಕಳು ವಿವಾಹವಾಗಿ ಗರತಿಯರಾಗಿ ಬಾಳುತ್ತಿರುವಾಗ ತಾನು ಮಾತ್ರ ಸೂಳೆಯಾಗಿ ಬಾಳುವುದು ಅವಳಿಗೆ ಅಸಹ್ಯಕರವಾಗಿತ್ತು. ಸೂಳೆಯಾಗಿ ಬಾಳುವುದಕ್ಕಿಂತ ಸಾಯುವುದೇ ಲೇಸೆಂದು ಅವಳಿಗನಿಸಿತು. ಅಂದಿನಿಂದ ಅವಳಿಗೆ ಜೀವನ ಬೇಡವಾಗಿತ್ತು. ಹೊಟ್ಟೆನೋವೆಂಬ ನೆಪದಲ್ಲಿ ಮರುದಿನದಿಂದ ಸಣ್ಣೇಗೌಡನ ಮನೆಗೆ ಊಳಿಗಕ್ಕೆ ಹೋಗುವುದನ್ನು ಸಹ ನಿಲ್ಲಿಸಿದಳು. ಎಂಟು ದಿನಗಳಾದರೂ ಹೂವಿ ಕೆಲಸಕ್ಕೆ ಬಾರದಿರುವುದನ್ನು ನೋಡಿ ಸಣ್ಣೇಗೌಡನಿಗೆ ಸಿಟ್ಟು ಬಂತು. ಒಂದು ದಿನ ಬೆಳಿಗ್ಗೆ ಸಣ್ಣೇಗೌಡನು ಸ್ವತಃ ಕರಡಿಯ ಗುಡಿಯ ಬಳಿಗೆ ಹೋಗಿ ಹೂವಿಯನ್ನು ಕರೆದನು. ಹೂವಿ ಮಾತನಾಡಲಿಲ್ಲ. ಅವಳನ್ನು ಚಿಕಿತ್ಸೆಗೋಸ್ಕರ ಆಸ್ಪತ್ರೆಗೆ ಕರೆದುಕೊಂಡು ಹೋಗುವ ಉದ್ದೇಶದಿಂದ ತಾನು ಬಂದಿರುವುದಾಗಿಯೂ, ತನ್ನೊಡನೆ ಬರಬೇಕೆಂದೂ ಹೇಳಿದನು. ತಾನು ಮೇಲಕ್ಕೇಳುವಂತಿಲ್ಲವೆಂದೂ, ಬರಲಾಗುವುದಿಲ್ಲವೆಂದೂ, ಗುಡಿಯೊಳಗಿಂದಲೇ ಹೂವಿ ಸಣ್ಣೇಗೌಡನಿಗೆ ಉತ್ತರವಿತ್ತಳು. ಧಣಿಯಾಗಿದ್ದವನು ಅದರಲ್ಲೂ ಸಾಹುಕಾರನೆಂದೆನಿಸಿಕೊಂಡಿದ್ದವನು ಗುಡಿಯ ಹತ್ತಿರ ಬಂದು ಕರೆದಾಗ ಜೀತದ ಹೆಣ್ಣು ತಾತ್ಸಾರವಾಗಿ ಉತ್ತರಕೊಟ್ಟದ್ದು ಅವಮಾನವಾದಂತಾಯಿತು. ಅವನು ಸಿಟ್ಟಿನಿಂದ ಮರುದಿನದಿಂದ ಹೂವಿ ಕೆಲಸಕ್ಕೆ ಬಾರದಿದ್ದರೆ ಅವಳನ್ನು ಗಟ್ಟದ ಆಳುಗಳಿಂದ ಎಳೆಯಿಸಿಕೊಂಡು ಹೋಗುವುದಾಗಿ ಬೆದರಿಸಿ ತನ್ನ ಮನೆಗೆ ಹೋದನು. ಆ ದಿನ ಮಧ್ಯಾಹ್ನ ಸಣ್ಣೇಗೌಡನು ಕರಡಿಯನ್ನು ಕರೆದು ಹೂವಿಗೆ ಜಾಗ್ರತೆಯಾಗಿ ಮಣಿಯನ್ನು ಕಟ್ಟಬೇಕೆಂದು ಕಟ್ಟಾಜ್ಞೆ ಮಾಡಿದನು. ಮಣಿಯನ್ನು ಕಟ್ಟುವುದು ತಡವಾದರೆ ಕರಿಯಪ್ಪನು ಹೂವಿಯನ್ನು ಹಾರಿಸಿಕೊಂಡು ಹೋಗಬಹುದೆಂದು ಸಣ್ಣೇಗೌಡನಿಗೆ

ಅನುಮಾನವಾಗಿತ್ತು. ಕರಿಯಪ್ಪನು ಹೂವಿಯ ತಂಟೆಗೆ ಹೋಗದಂತೆ ಮಾಡಬೇಕೆಂದು ಯೋಚಿಸಿ, ಮರುದಿನ ಕರಿಯಪ್ಪನನ್ನು ಬರಮಾಡಿಕೊಂಡು "ಏ ಕರಿಯಾ, ನಮ್ಮಾಳು ಹೂವಿಯ ನೀ ಹಾರಿಸ್ಗುಂಡ್ ಹೋಗಾನ ಅಂತ ಮಾಡೀಯ ಅಂತ ಗಾಳಿ ವರ್ತಮಾನ ಬಂತು. ಹಂಗೇನಾರೂ ಮಾಡದ್ರೆ ಕೈ ಕಾಲ್ ಹುಯ್ದು ಮುರ್ಸಿ ಹಾಕ್ತೀನಿ. ಗೊತ್ತಾತೇನು?" ಎಂದು ಬೆದರಿಸಿದನು. ಕರಿಯಪ್ಪನು ಆರ್ಥಿಕ ದೃಷ್ಟಿಯಿಂದ ಬಡವನಾಗಿದ್ದರೂ ಆತ್ಮಗೌರವದ ದೃಷ್ಟಿಯಿಂದ ಬಡವನಾಗಿರಲಿಲ್ಲ. ಅವನು ಸಣ್ಣೇಗೌಡನನ್ನು ಕುರಿತು "ಗೌಡ್ರೇ, ಕೈಕಾಲು ಮುರ್ಸುವ ಕಾಲ ಮುಗಿದುಹೋಗಿದೆ. ದುಡ್ಡಿದ್ರೆ ನಿಮ್ಮನೇಲಿ ಇರ್ತದೆ. ನಿಮ್ ದುಡ್ಡಿನ ದಿಮಾಕು ನನ್ಹತ್ರ ತೋರಿಸಬೇಡಿ. ಹಾರಿಸುಕೊಂಡು ಹೋಗುವ ಕೆಲಸ ಮಾಡೋರು ನೀವು. ನಾನಲ್ಲ. ನಾ ಬೇಕಾದ್ರೆ ರಾಜಾರೋಷ್ ಮದಿವಾತೀನಿ" ಎಂದು ನಿರ್ಭಯವಾಗಿ ನುಡಿದನು. ಕರಿಯಪ್ಪನು ಈ ರೀತಿಯ ಜವಾಬನ್ನು ಕೊಡುತ್ತಾನೆಂದು ಸಣ್ಣೇಗೌಡನು ನಿರೀಕ್ಷಿಸಿರಲಿಲ್ಲ. ಈ ಜವಾಬಿನಿಂದ ಗೌಡನು ಸ್ವಲ್ಪ ಮಟ್ಟಿಗೆ ಚಕಿತನಾದನು. ಬಹಳ ಸಿಟ್ಟಿನಿಂದ ಕರಿಯಪ್ಪನನ್ನು ದುರುದುರು ನೋಡುತ್ತಾ "ಹೋಗು, ನಿನ್ ದಿಮಾಕು ಹಿರಸ್ತೀನಿ" ಎಂದು ಹೇಳಿ ತೆಪ್ಪಗಾದನು.

ಇತ್ತ ಕರಡಿಯು ಹೂವಿಗೆ ಮಣಿಯನ್ನು ಕಟ್ಟುವ ಸಮಾರಂಭಕ್ಕೋಸ್ಕರ ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದುದು ಕರಿಯಪ್ಪನಿಗೂ, ಮೋಹನನಿಗೂ ಗೊತ್ತಾಗಿತ್ತು. ಆದರೆ ಅದನ್ನು ತಪ್ಪಿಸುವುದು ಅವರಿಬ್ಬರ ಕೈಯ್ಯಲ್ಲೂ ಇರಲಿಲ್ಲ. ಒಂದು ವೇಳೆ ಕರಡಿಯೂ, ಭರಮಿಯೂ, ಅವರು ಹೇಳುವಂತೆ ಕೇಳುವ ಹಾಗಿದ್ದರೆ ಅವರು ಅದನ್ನು ತಪ್ಪಿಸಬಹುದಾಗಿತ್ತು. ಅಥವಾ ಹೂವಿ ತಾವು ಹೇಳುವಂತೆ ಕೇಳುವ ಹಾಗಿದ್ದರೆ ಆಗಲೂ ಕೂಡ ಮಣಿ ಕಟ್ಟಿಸುವುದನ್ನು ತಪ್ಪಿಸಬಹುದಾಗಿತ್ತು. ಹೂವಿಯೊಡನೆ ಗುಟ್ಟಾಗಿ ಮಾತನಾಡಬೇಕೆಂದು ಹಲವು ಬಾರಿ ಕರಿಯಪ್ಪನು ಯೋಚಿಸಿದನು. ಆದರೆ ಇಬ್ಬರೂ ಒಂದೇ ಕಡೆ ಸೇರಿ ಗುಟ್ಟಾಗಿ ಮಾತನಾಡುವ ಅವಕಾಶ ಅವನಿಗೊದಗಲಿಲ್ಲ. ಹೂವಿಗೆ ಕರಿಯಪ್ಪನ ಮನಸ್ಸು ಸರಿಯಾಗಿ ಗೊತ್ತಿರಲಿಲ್ಲ. ಆದ್ದರಿಂದ ಅವಳು ಅವನೊಡನೆ ಮಾತನಾಡಲು ಹಿಂಜರಿಯುತ್ತಿದ್ದಳು. ಸ್ವಾಭಾವಿಕ ಲಜ್ಜೆ, ಸಾಮಾಜಿಕ ಹೆದರಿಕೆ ಇವುಗಳ ದೆಶೆಯಿಂದ ಕರಿಯಪ್ಪನೂ, ಹೂವಿಯೂ ಒಂದುಕಡೆ ಸೇರಲಾಗಲಿಲ್ಲ. ಅವರಿಬ್ಬರೂ ಮನಸ್ಸಿನಲ್ಲೇ ಕೊರಗುತ್ತಿದ್ದರು. ಮಣಿ ಕಟ್ಟುವ ದಿನ ಸಮೀಪಿಸಿದಂತೆಲ್ಲಾ ಹೂವಿಗೆ ಜೀವನದ ಮೇಲೆ ಆಶೆ ಕಡಿಮೆಯಾಗುತ್ತಿತ್ತು. ಕೆಲವು ದಿನಗಳಿಂದ ಅವಳು ತಂದೆತಾಯಿಗಳ ಒತ್ತಾಯಕ್ಕಾಗಿ ಸಣ್ಣೇಗೌಡನ ಮನೆಗೆ ಕೆಲಸಕ್ಕೆ ಹೋಗುತ್ತಿದ್ದಳು. ಸಣ್ಣೇಗೌಡನು ತನ್ನೆಡೆಗೆ ಅವಳ ಮನಸ್ಸನ್ನು ಒಲಿಸಿಕೊಳ್ಳುವ ಸಲುವಾಗಿ ನಾನಾ ಪ್ರಯತ್ನಗಳನ್ನು ಮಾಡುತ್ತಿದ್ದನು. ಆದರೆ ಹೂವಿಯ ಮನಸ್ಸು ಆಗಲೇ ಪರಲೋಕದ ಕಡೆಗೆ ಒಲಿದಿತ್ತು. ದುಡ್ಡಿನ ದೃಷ್ಟಿಯಿಂದ ದೊಡ್ಡವನೆಂದೆನಿಸಿ ಕೊಂಡಿದ್ದ ಸಣ್ಣೇಗೌಡನು ಹೂವಿಯ ದೃಷ್ಟಿಯಲ್ಲಿ ನಿಜವಾಗಿಯೂ ಸಣ್ಣವನಾಗಿ ಕಂಡನು.

ಕರಡಿಯ ಗುಡಿಯಲ್ಲಿ ಹೂವಿಗೆ ಮಣಿಯನ್ನು ಕಟ್ಟುವ ಸಮಾರಂಭಕ್ಕೆಂದು ಸಿದ್ಧತೆಗಳು ನಡೆಯುತ್ತಿದ್ದವು. ಮಣಿಯನ್ನು ಕಟ್ಟುವ ಸಮಾರಂಭ ಮರುದಿನ

ನಡೆಯಬೇಕಾಗಿತ್ತು. ದೂರದಿಂದ ಬಂಧುಗಳು ಸಮಾರಂಭಕ್ಕೆಂದು ಬಂದಿದ್ದರು. ಕರಡಿಯ ಗುಡಿಯಲ್ಲಿ ಸಡಗರದ ವಾತಾವರಣವಾಗಿತ್ತು. ಆದರೆ ಹೂವಿಯ ಮುಖದಲ್ಲಿ ಗೆಲುವಾಗಲಿ, ಸಡಗರವಾಗಲಿ ಇರಲಿಲ್ಲ. ಸಾಯಂಕಾಲ ಬಯಲು ಕಡೆಗೆ ಹೋಗುವ ನೆಪದಲ್ಲಿ ಹಳ್ಳಕ್ಕೆ ಹೋದ ಹೂವಿ ಮರಳಿ ಗುಡಿಗೆ ಬರಲಿಲ್ಲ. ಸಡಗರದಲ್ಲಿದ್ದ ಬಂಧುವರ್ಗದವರಿಗೆ ಗುಡಿಯಲ್ಲಿ ಹೂವಿ ಇಲ್ಲದಿದ್ದುದು ರಾತ್ರಿ ಗೊತ್ತಾಯಿತು. ಸುತ್ತು ಮುತ್ತು ಹುಡುಕಿದರು. ಹೂವಿಯ ಹೆಸರನ್ನು ಹಿಡಿದು ಕೂಗಿದರು. ಪ್ರತ್ಯುತ್ತರ ಬರಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಸಡಗರದ ವಾತಾವರಣದ ಬದಲು ಶೋಕದ ವಾತಾವರಣ ಗುಡಿಯಲ್ಲಿ ಕಾಣಿಸಿತು. ಕರಡಿಯೂ, ಗುಡಿಗೆ ಬಂದಿದ್ದ ಬಂಧುಗಳೂ, ನಡುರಾತ್ರಿಯವರೆಗೂ ಹೂವಿಗಾಗಿ ಹುಡುಕಿದರು. ಎಲ್ಲಿಯೂ ಹೂವಿಯ ಸುಳಿವು ಗೊತ್ತಾಗಲಿಲ್ಲ. ಹೂವಿಯಿಲ್ಲದ ವರ್ತಮಾನ ಸಣ್ಣೇಗೌಡನಿಗೂ ತಲುಪಿತು. ಹೂವಿಯನ್ನು ಕರಿಯಪ್ಪನೇ ಹಾರಿಸಿಕೊಂಡು ಹೋಗಿ ಬಚ್ಚಿಟ್ಟಿದ್ದಾನೆಂದು ಅವನು ತರ್ಕಿಸಿದನು. ಕರಡಿಯನ್ನು ಕರೆಯಿಸಿ ಪವಿತ್ರಪುರದ ಪೊಲೀಸ್ ಇನ್‌ಸ್ಪೆಕ್ಟರಿಗೆ ಕರಿಯಪ್ಪನ ವಿರುದ್ಧ ಫಿರ್ಯಾದನ್ನು ಕೊಡಿಸಿದ್ದಲ್ಲದೆ ತನ್ನ ಸ್ನೇಹಿತನಾದ ರಂಗನಾಥನ ಮೂಲಕ ಇನ್‌ಸ್ಪೆಕ್ಟರಿಗೆ ಹೇಳಿ ಕರಿಯಪ್ಪನನ್ನು ದಸ್ತಗಿರಿ ಮಾಡಿಸಿದನು. ಅಂತೂ ಇಂತೂ ಸಣ್ಣೇಗೌಡನಿಗೆ ಕರಿಯಪ್ಪನ ಮೇಲೆ ಸೇಡನ್ನು ತೀರಿಸಿಕೊಳ್ಳುವ ಒಂದು ಅವಕಾಶ ದೊರಕಿತ್ತು. ಅವನ ಚಿತಾವಣೆಯ ಮೇರೆಗೆ ಪೊಲೀಸಿನವರು ಕರಿಯಪ್ಪನಿಗೆ ಎರಡು ದಿನಗಳಕಾಲ ಚಿತ್ರಹಿಂಸೆಯನ್ನು ಕೊಟ್ಟರು. ಕರಿಯಪ್ಪನು ತಾನು ನಿರಪರಾಧಿಯೆಂದು ಎಷ್ಟೊ ವಿಧದಲ್ಲಿ ಹೇಳಿಕೊಂಡರೂ ಪೊಲೀಸಿನವರಿಗೆ ದಯೆ ಬರಲಿಲ್ಲ. ಮೂರನೆಯ ದಿನ ಊರಿನ ದೊಡ್ಡಕೆರೆಯಲ್ಲಿ ಹೂವಿಯ ಹೆಣ ತೇಲುತ್ತಿದ್ದುದನ್ನು ದನ ಕಾಯುವ ಹುಡುಗರು ನೋಡಿ ಸಣ್ಣೇಗೌಡನಿಗೆ ತಿಳಿಸಿದರು. ಸಣ್ಣೇಗೌಡನಿಗೆ ಆಗ ತಾನೆ ಜ್ಞಾನೋದಯವಾಯಿತು. ಪವಿತ್ರಪುರದ ಪೊಲೀಸಿನವರಿಗೆ ಹೂವಿಯ ದೇಹ ಕೆರೆಯಲ್ಲಿ ತೇಲುತ್ತಿದ್ದ ಸುದ್ದಿಯನ್ನು ಮುಟ್ಟಿಸಿದರು. ಪೊಲೀಸಿನವರು ಕರಿಯಪ್ಪನು ನಿರ್ದೋಷಿಯೆಂದು ಬಿಡುಗಡೆ ಮಾಡಿದರು. ಕಾನೂನಿನ ಪ್ರಕಾರ ನಡೆಯಬೇಕಾಗಿದ್ದ ಮಹಜರ್ ಇತ್ಯಾದಿಗಳು ನಡೆದನಂತರ ಹೂವಿಯ ಮೃತದೇಹವನ್ನು ಮಣ್ಣುಪಾಲು ಮಾಡಲಾಯಿತು. ಹೂವಿನ ಮರಣದಿಂದ ಮರುಗದಿದ್ದವರೇ ಪಂಜರವಳ್ಳಿಯಲ್ಲಿರಲಿಲ್ಲ. ತಾನು ಮೆಚ್ಚಿದ ಹೆಣ್ಣು ತನ್ನೊಡನಿರದೆ ಪರಲೋಕಕ್ಕೆ ಹೋದುದಕ್ಕಾಗಿ ಕರಿಯಪ್ಪನು ಶೋಕಿಸಿದನು. ಕರಡಿಯೂ, ಭರಮಿಯೂ ಮಗಳನ್ನು ಕಳೆದುಕೊಂಡು ಶಾಶ್ವತ ದುಃಖಕ್ಕೊಳಗಾದರು. ಸಣ್ಣೇಗೌಡನೂ, ನಾಗೇಂದ್ರನೂ ಪಶ್ಚಾತ್ತಾಪಪಟ್ಟರು. ಅವಳನ್ನು ಸ್ಮರಿಸಿ ಬಂಧುಬಳಗದವರೆಲ್ಲರೂ ಅತ್ತರು. ಅವಳ ದುರಂತ ಮರಣಕ್ಕಾಗಿ ಊರಿನ ಜನರು ವ್ಯಥೆಪಟ್ಟರು. ನಿಷ್ಕಲ್ಮಷ ಹೃದಯದ, ನಿರ್ಮಲ ಮನಸ್ಸಿನ ಹೂವಿ ವನಸುಮದಂತೆ ಪಂಜರವಳ್ಳಿಯ ಬನದಲ್ಲಿ ಎಲೆಯ ಮರೆಯಲ್ಲಿ ಮೊಳೆತು, ಅರಳಿ, ಬೆಳಗಿ, ನಿಜ ಸೌರಭವ ಬೀರಿ ನಿರ್ಗಮಿಸಿದಳು.

# ೧೩. ನಿಸರ್ಗದ ಮನಮೋಹಕ ಸೌಂದರ್ಯದ ಸಿರಿಯ ಹಿನ್ನೆಲೆಯಲ್ಲಿ ಬಡತನ ಶೋಷಣೆಗಳು

ಬೆಳಗಿನ ಹೊತ್ತು. ಮೋಹನನು ಪಂಜರವಳ್ಳಿಯಲ್ಲಿ ತನ್ನ ಹುಲ್ಲು ಮನೆಯ ಜಗಲಿಯ ಮೇಲೆ ವರ್ತಮಾನ ಪತ್ರಿಕೆಯನ್ನು ಓದುತ್ತಿದ್ದನು. ಆ ದಿನ ಅವನು ಬಾಲ್ಯಸ್ನೇಹಿತನಾದ ಶಾಸ್ತ್ರಿಯು ಪಂಜರವಳ್ಳಿಗೆ ಬರಬೇಕಾಗಿತ್ತು. ಶಾಸ್ತ್ರಿಯು ಮೈಸೂರಿನಲ್ಲಿ ಒಬ್ಬ ಇನಾಂದಾರನಾಗಿದ್ದನು. ಶಾಸ್ತ್ರಿ, ಮೋಹನ ಮತ್ತು ಮೂರ್ತಿ ಒಂದೇ ಕಾಲೇಜಿನಲ್ಲಿ ಓದಿದ್ದವರು. ಶಾಸ್ತ್ರಿ ಬಹಳ ಮೇಧಾವಿ. ಅವನಿಗೆ ಮೋಹನನ ಮೇಲೆ ಅಪರಿಮಿತ ಗೌರವ. ಮೋಹನನ ಜೊತೆಯಲ್ಲಿ ಓದುತ್ತಿದ್ದಾಗ ಶಾಸ್ತ್ರಿಯು ಎರಡು ಬಾರಿ ಪಂಜರವಳ್ಳಿಗೆ ಬಂದು ಮೋಹನನ ಅತಿಥಿಯಾಗಿದ್ದನು. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಶಾಸ್ತ್ರಿಯೂ ಸಹ ಕಾಂಗ್ರೆಸ್ಸಿಗೆ ಸೇರಿ ಸೆರೆಮನೆಯ ಸವಿಯನ್ನನುಭವಿಸಿದ್ದನು. ಸ್ವಾತಂತ್ರ್ಯ ಲಭಿಸಿದನಂತರ ಅವನು ರಾಜಕಾರಣವನ್ನು ಪೂರ್ತಿಯಾಗಿ ಬಿಟ್ಟ. ಆದರ್ಶ ವ್ಯವಸಾಯಗಾರನಾಗಿ ಮಾದರಿ ಜೀವನವನ್ನು ನಡೆಸುತ್ತಿದ್ದನು. ಇನಾಂ ರದ್ದಿಯಾತಿ ಕಾನೂನಿನ ದೆಶೆಯಿಂದ ಆತನ ಬಹು ಭಾಗದ ಭೂಮಿ ರೈತರಿಗೆ ಹೋಗಬೇಕಾಗಿತ್ತು. ಆತನ ಸ್ವಂತ ಸಾಗುವಳಿಯಲ್ಲಿದ್ದ ಸುಮಾರು ಇಪ್ಪತ್ತೈದು ಎಕರೆ ಭೂಮಿ ಆತನಿಗೆ ಉಳಿಯುತ್ತಿತ್ತು. ತನ್ನ ಭೂಮಿ ರೈತರಿಗೆ ಸೇರುವುದೆಂಬ ದುಃಖ ಶಾಸ್ತ್ರಿಗಿರಲಿಲ್ಲ. ಹಲವು ವರ್ಷಗಳಿಂದ ಸಾಗುವಳಿಮಾಡುತ್ತಿದ್ದ ರೈತರು ಭೂಮಿಯ ಮಾಲೀಕರಾಗುವುದು ನ್ಯಾಯವೆಂದು ಅವನು ಪ್ರತಿಪಾದಿಸುತ್ತಿದ್ದನು. ಶಾಸ್ತ್ರಿ ಸ್ವಲ್ಪ ಹಳೆಯ ಸಂಪ್ರದಾಯದವನಾಗಿದ್ದರೂ ವೈಜ್ಞಾನಿಕ ಯುಗಕ್ಕೆ ಹೊಂದಿಕೊಂಡಿದ್ದನು. ಮೋಹನನ ಅತ್ಯಂತ ಪ್ರಿಯ ಸ್ನೇಹಿತನಾದರೂ ಅವನಿಗೆ ಮೋಹನನ ಸಮಾಜವಾದ ಹಿಡಿಸುತ್ತಿರಲಿಲ್ಲ. ಶಾಸ್ತ್ರಿಯ ಬರುವಿಕೆಗಾಗಿ ಮೋಹನನು ಎದುರುನೋಡುತ್ತಿದ್ದನು. ಮೋಹನನಿಗೆ ಆಗಲೇ ಮೂವತ್ತೈದು ವರ್ಷಗಳಾಗಿತ್ತು. ಕಠಿಣ ಬ್ರಹ್ಮಚರ್ಯವನ್ನು ಪರಿಪಾಲನೆ ಮಾಡಿದ್ದರಿಂದ ಇಪ್ಪತ್ತೈದು ವರ್ಷದ ಯುವಕನಂತೆ ತೋರುತ್ತಿದ್ದನು. ಅವನ ತಾಯಿಯೂ ಸೋದರ ಮಾವನೂ ಮದುವೆ ಮಾಡಿಕೊಳ್ಳಬೇಕೆಂದು ಅವನಿಗೆ ಆಗ್ರಹಪೂರ್ವಕವಾದ ಒತ್ತಾಯ ಮಾಡುತ್ತಿದ್ದರು. ಆದರೆ ಅವನು ಒಪ್ಪಿರಲಿಲ್ಲ. ಅವನು ಮದುವೆಯಾಗದೆ ಇರುವುದು ಚೆನ್ನಮ್ಮನಿಗೆ ಒಂದು ದೊಡ್ಡ ಮನೋವ್ಯಥೆಯಾಗಿತ್ತು. ಶಾಸ್ತ್ರಿ ಬರುತ್ತಾನೆಂಬ ವಿಚಾರವನ್ನು ತಿಳಿದು ಚೆನ್ನಮ್ಮನು ಸಂತೋಷಪಟ್ಟಿದ್ದಳು. ಶಾಸ್ತ್ರಿಯಿಂದ ಮಗನಿಗೆ ಹೇಳಿಸಿ ಮದುವೆ ಕಡೆಗೆ ಮಗನ ಮನಸ್ಸು ಒಲಿಸಬೇಕೆಂದು ಅವಳು ಯೋಚಿಸುತ್ತಿದ್ದಳು.

ಬೆಳಿಗ್ಗೆ ಸುಮಾರು ಹತ್ತು ಗಂಟೆಯ ಸಮಯದಲ್ಲಿ ಶಾಸ್ತ್ರಿಯೂ, ಮೂರ್ತಿಯೂ ಪಂಜರವಳ್ಳಿಗೆ ಬಂದರು. ಅಪರೂಪವಾಗಿ ಬಂದ ಸ್ನೇಹಿತರನ್ನು ಕಂಡು ಮೋಹನನಿಗೆ ತುಂಬ ಸಂತೋಷವಾಯಿತು. ಚೆನ್ನಮ್ಮನಿಗೂ ಬಹಳ ಆನಂದವಾಗಿತ್ತು. ಕ್ಷೇಮಸಮಾಚಾರಧ ಮಾತುಗಳೂ, ಕಾಫಿಯೂ ಮುಗಿದನಂತರ ಶಾಸ್ತ್ರಿಯು ಮೋಹನನನ್ನು ಕುರಿತು "ಏನಯ್ಯಾ ಮೋಹನ ಈಚೆಗೆ ನಿನ್ನ ಕಥೆ ಬಹಳವಾಗಿ ಪತ್ರಿಕೆಗಳಲ್ಲಿ ಬರುತ್ತಾ ಇದೆ. ನಿನ್ನ ಮನೆಯನ್ನು ಪೊಲೀಸಿನವರು ಶೋಧನೆ ಮಾಡಿದರಂತೆ. ಅನಂತರ ನಿನ್ನ ಮೇಲೆ ಕೇಸ್ ಹಾಕಿದ್ದರಂತೆ. ಕೇಸಿನಲ್ಲಿ ನಿನಗೆ ಖುಲಾಸೆ ಆಯಿತಂತೆ. ಏನಪ್ಪಾ ಇದೆಲ್ಲಾ ರಣರಂಪ" ಎಂದು ನುಡಿದನು.

"ನೀ ಹೇಳಿದ್ದೆಲ್ಲಾ ಸರಿ ಶಾಸ್ತ್ರಿ. ಪೊಲೀಸಿನವರು ನನ್ನ ಮನೆಯನ್ನು ಶೋಧನೆ ಮಾಡಿದ್ದೂ ನಿಜ. ನನ್ನ ಮೇಲೆ ಕೇಸು ಹಾಕಿದ್ದೂ ನಿಜ. ಕೇಸಿನಲ್ಲಿ ಖುಲಾಸೆ ಆದದ್ದೂ ನಿಜ. ಆ ಕೇಸಿನ ಹಿನ್ನೆಲೆಯನ್ನು ನೀನು ಸ್ವಲ್ಪ ತಿಳಿದಿದ್ದರೆ ವಾಸಿ. ಈ ತಾಲ್ಲೂಕಿನಲ್ಲಿ ೧೯೫೬ನೆಯ ಮಾದರಿಯ ಕೆಲವು ಕಾಂಗ್ರೆಸ್ ಮುಖಂಡರು ತಾಲ್ಲೂಕ್ ಕಾಂಗ್ರೆಸ್ ಕಮಿಟಿಯನ್ನು ಅಕ್ರಮವಾಗಿ ವಶಪಡಿಸಿಕೊಂಡಿದ್ದಾರೆ. ಅವರಿಗೆ ಕಾಂಗ್ರೆಸ್ ಬೇಕು; ಆದರೆ ಕಾಂಗ್ರೆಸ್ಸಿನ ರೀತಿನೀತಿಗಳಾಗಲೀ ಧ್ಯೇಯಧೋರಣೆಗಳಾಗಲಿ ಅವರಿಗೆ ಬೇಕಾಗಿಲ್ಲ. ಅವರಲ್ಲಿ ದೇಶಾಭಿಮಾನ ಲವಲೇಶವೂ ಇಲ್ಲ. ಅವರು ದೇಶಸೇವೆಯ ದೃಷ್ಟಿಯಿಂದ ಕಾಂಗ್ರೆಸ್ಸನ್ನು ಸೇರಿದವರಲ್ಲ. ಅವರಿಗೆ ಬೇಕಾದ್ದು ದೇಶದ ಅಭ್ಯುದಯವಲ್ಲ; ತಮ್ಮ ಸ್ವಂತ ಅಭ್ಯುದಯ. ಅವರು ಅಧಿಕಾರ ದಾಹದಿಂದ ನಿಷ್ಠಾವಂತರಾದ ನೂರಾರು ಜನ ಒಳ್ಳೆಯ ಕಾಂಗ್ರೆಸ್ ಕೆಲಸಗಾರರನ್ನು ಮೂಲೆಗೆ ತಳ್ಳಬೇಕೆಂದು ಪ್ರಯತ್ನಪಟ್ಟರು ಆದರೆ ಅಪಾರವಾದ ಜನಬೆಂಬಲ ನನಗಿದ್ದುದರಿಂದ ಅವರ ಪ್ರಯತ್ನ ಸಫಲವಾಗಲಿಲ್ಲ. ನನ್ನನ್ನು ರಾಜಕೀಯ ರಂಗದಿಂದ ಹೊರಗಟ್ಟಬೇಕೆಂದು ಅವರು ಪಣತೊಟ್ಟಂತೆ ತೋರುತ್ತದೆ. ಕೆಲವು ಲಂಚಕೋರ ಅಧಿಕಾರಗಳೊಡನೆ ಷರೀಕಾಗಿ ನನಗೆ ಇಲ್ಲದ ಕಿರುಕುಳವನ್ನು ಕೊಡುತ್ತಿದ್ದಾರೆ. ಇಲ್ಲೊಬ್ಬ ಪೋಲಿಸ್ ಇನ್‌ಸ್ಪೆಕ್ಟರಿದ್ದಾನೆ. ಅವನು ಲಂಚದ ಅವತಾರವಾಗಿದ್ದಾನೆ. ಆ ಇನ್‌ಸ್ಪೆಕ್ಟರೂ, ನನಗಾಗದ ರಾಜಕಾರಣಿಗಳೂ, ನನ್ನ ಮೇಲೆ ಸುಳ್ಳು ಕೇಸೊಂದನ್ನು ಹಾಕಿದ್ದರು. ಆ ಕೇಸು ಸುಳ್ಳೆಂದು ತೀರ್ಮಾನವಾಯಿತು.

"ನನಗೂ ಈ ವಿಚಾರದಲ್ಲಿ ಸ್ವಲ್ಪ ಗೊತ್ತಾಯಿತಯ್ಯಾ ಮೋಹನಾ; ನಿನ್ನೆ ಪವಿತ್ರಪುರದ ಮಠದ ಸ್ವಾಮಿಗಳ ದರ್ಶನಕ್ಕಾಗಿ ಹೋಗಿದ್ದೆ. ಸ್ವಾಮಿಗಳು ನಿನ್ನ ಮೇಲೆ ರೇಗಿದನು. ನೀನು ಕುಡುಕನೆಂದೂ ಲಂಚಕೋರನೆಂದೂ, ರಂಗನಾಥನೂ ಮತ್ತು ಕಲ್ಲಪ್ಪನೂ ಅವರಿಗೆ ಹೇಳಿದ್ದಾರಂತೆ. ಸ್ಥಳೀಯ ಪತ್ರಿಕೆಯಲ್ಲಿ ನಿನ್ನ ನಡತೆಯ ವಿಚಾರದಲ್ಲಿ ಬರೆದಿರುವುದನ್ನು ಸ್ವಾಮಿಗಳು ನನಗೆ ತೋರಿಸಿದರು. ಪತ್ರಿಕೆಯಲ್ಲಿ ನಿನ್ನ ಹೆಸರಿಲ್ಲದಿದ್ದರೂ ಅದರಲ್ಲಿ ಬರೆದಿರುವುದು ನಿನಗೆ ಅನ್ವಯಿಸುವಂತಿತ್ತು. ಮಠದ ಒಕ್ಕಲುಗಳನ್ನು ಮಠದ ಮೇಲೆ ಎತ್ತು ಕಟ್ಟುವ ಕಾರ್ಯದಲ್ಲಿ ನೀನು ಮಗ್ನನಾಗಿರುವೆಯೆಂದು ಸ್ವಾಮಿಗಳು ನನಗೆ ಹೇಳಿದರು. ನಿನ್ನ ದೆಶೆಯಿಂದ ಕೆಲವು ಮಠದ ಒಕ್ಕಲುಗಳು ಗೇಣಿಯನ್ನು ಕೊಡದೆ

ನಿಲ್ಲಿಸಿದ್ದಾರೆಂದು ಅವರು ಹೇಳಿದರು. ನಿನ್ನಂತಹವರು ಕಾಂಗ್ರೆಸ್ ರಾಜಕಾರಣದಲ್ಲಿ ಇರಲೇಬಾರದೆಂದು ಅವರು ಮುಂದುವರಿದು ಹೇಳಿದರು. ನೀನು ನನ್ನ ಬಾಲ್ಯ ಸ್ನೇಹಿತನೆಂದೂ, ನೀನೊಬ್ಬ ಆದರ್ಶವಾದಿಯೆಂದೂ, ಅವರಿಗೆ ಬಹಳ ಹೇಳಿದೆ. ಆದರೆ ಅವರು ಒಪ್ಪಲಿಲ್ಲ, ಅವರ ಮನಸ್ಸನ್ನು ನಿನ್ನ ರಾಜಕೀಯ ವಿರೋಧಿಗಳು ಸಂಪೂರ್ಣವಾಗಿ ಕೆಡಿಸಿದ್ದಾರೆ. ನೀನು ಸ್ವಲ್ಪ ಬುದ್ಧಿವಂತಿಕೆಯಿಂದ ವರ್ತಿಸಬೇಕಯ್ಯಾ. ಎಲ್ಲರನ್ನೂ ಮೈಮೇಲೆ ಹಾಕಿಕೊಳ್ಳುವುದು ಜಾಣತನವಲ್ಲ. ಇನ್ನಾದರೂ ಸ್ವಲ್ಪ ಜಾಣ್ಮೆಯಿಂದ ಬಾಳುವುದನ್ನು ಕಲಿ"

"ಹಾಗಾದರೆ ರಾಜಕಾರಣವನ್ನು ನಾನು ಬಿಡಬೇಕೆಂದು ನಿನ್ನ ಉಪದೇಶವೇನು?"

"ನಿನ್ನ ರಾಜಕಾರಣ ಹಾಳಾಗಿ ಹೋಗಲಿ, ನನ್ನಂತೆ ನೀನೂ ಸುಖವಾಗಿ ಯಾಕಿರಬಾರದು ಎಂದು ನನಗನ್ನಿಸುತ್ತದೆ. ನನಗೆ ನಿನ್ನೆಯಿಂದ ಏನೋ ಒಂದು ವಿಧವಾದ ಅಪೂರ್ವ ಶಾಂತಿ ದೊರಕಿದೆ. ಈ ಪ್ರದೇಶದಲ್ಲಿ ಹದಿನೈದು ದಿನಗಳಿದ್ದರೆ ಅದರಿಂದ ದೊರತಕ್ಕ ಶಾಂತಿ ಹದಿನೈದು ತಿಂಗಳುಗಳಿರುತ್ತದೆ. ಏನು ರಮಣೀಯತೆ! ಅಪೂರ್ವವಾದ ಶಾಂತಿ! ತ್ರೇತಾಯುಗದಲ್ಲಿ ರಾಮಲಕ್ಷಣರು ಸೀತೆಯೊಡನೆ ದಂಡಕಾರಣ್ಯದ ಒಂದು ಭಾಗವಾಗಿದ್ದ ಈ ಪ್ರದೇಶದಲ್ಲಿ ಕೆಲವು ಕಾಲ ಇದ್ದರೆಂದೂ, ರಾಮನು ಮಾಯಾ ಮೃಗವನ್ನು ಈ ಪ್ರದೇಶದಲ್ಲೇ ಕೊಂದನೆಂದೂ ಪ್ರತೀತಿ ಇದೆ. ಈಗಲೂ ಮಲೆನಾಡಿನಲ್ಲಿ ಮೃಗವಧೆಯೆಂಬ ಊರೊಂದು ಎಲ್ಲಿಯೋ ಇದೆಯೆಂದು ಕೇಳಿದ್ದೇನೆ. ದ್ವಾಪರ ಯುಗದಲ್ಲಿ ಪಾಂಡವರೂ ಕೂಡ ಮಲೆನಾಡನಲ್ಲಿದ್ದರಂತೆ. ಭೀಮನ ಕಟ್ಟೆಯೆಂಬ ಊರೊಂದು ಈ ಕಡೆ ಇದೆಯೆಂದು ಕೇಳಿದ್ದೇನೆ. ತುಂಗಾ ನದಿಯಲ್ಲಿ ಹರಿಯುತ್ತಿದ್ದ ನೀರು ಭೀಮಸೇನನ ಸ್ನಾನಕ್ಕೆ ಸಾಲದೆ ಹೋದದ್ದರಿಂದ ಅವನು ನದಿಗೆ ಒಂದು ಅಡ್ಡ ಕಟ್ಟನ್ನು ಕಟ್ಟಿ ಮಡುವೊಂದನ್ನು ನಿರ್ಮಿಸಿದವನಂತೆ ಅನಂತರ ನದಿಯ ಪಕ್ಕದ ಊರಿಗೆ ಭೀಮನಕಟ್ಟೆಯೆಂಬ ಹೆಸರು ಬಂತಂತೆ. ಈ ಸುಂದರ ಸನ್ನಿವೇಶ ತಪಸ್ಸಿಗೆ ಯೋಗ್ಯವಾಗಿರಬೇಕು. ಆದ್ದರಿಂದಲೇ ಋಷಿಗಳನೇಕರು ಈ ಪ್ರದೇಶದಲ್ಲಿ ಅಲ್ಲಲ್ಲಿ ತಪ್ಪಸ್ಸು ಮಾಡುತ್ತಿದ್ದರೆಂದು ಹೇಳುತ್ತಾರೆ. ಭಯ, ಕಳವಳ, ಸಂಶಯ, ಅಶಾಂತಿ ಇವುಗಳಿಂದ ತುಂಬಿದ ಮಾನವರ ಮನಸ್ಸಿಗೆ ಕಿಂಚಿತ್ತಾದರೂ ಶಾಂತಿಯನ್ನು ಕೊಡತಕ್ಕ ಸಿದ್ಧಾಂತವೆಂದರೆ ಅದ್ವೈತ ಸಿದ್ಧಾಂತ. ಈ ಶ್ರೇಷ್ಠ ಸಿದ್ಧಾಂತವನ್ನು ಜಗತ್ತಿಗೆ ಸಾರಿದ ಶ್ರೀ ಶಂಕರಾಚಾರ್ಯರು ಪ್ರಕೃತಿಯ ಮಡಿಲಿನೋಪಾದಿಯಲ್ಲಿರುವ ಶೃಂಗೇರಿಯಲ್ಲಿ ತಪಸ್ಸುಮಾಡಿ ನಿಸರ್ಗದ ಸೌಂದರ್ಯದಲ್ಲಿ ಸತ್ಯವನ್ನು ಕಂಡರು. ಈಗಲೂ ಸಹ ಶೃಂಗೇರಿ ಪವಿತ್ರವಾದ ಯಾತ್ರಾಸ್ಥಳವಾಗಿ ಉಳಿದಿದೆ. ನೀನು ಆ ಸ್ಥಳವನ್ನು ನೋಡಿರಬೇಕೆಂದು ತೋರುತ್ತದೆ. ಇಂತಹ ಪ್ರದೇಶದಲ್ಲಿರುವ ನೀನು ಶಾಂತಿಯಿಂದ ಸುಖವಾಗಿರುವ ಬದಲು ಅಶಾಂತಿಯ ರಾಜಕಾರಣದಲ್ಲಿ ತೊಳಲುತ್ತಿರುವುದು ನನಗರ್ಥವಾಗುವುದಿಲ್ಲ."

"ನೀನು ಹೇಳುವುದೆಲ್ಲಾ ನಿಜ ಶಾಸ್ತ್ರಿ. ಮಲೆನಾಡು ನಿಜವಾಗಿಯೂ ರಮಣೀಯವಾಗಿದೆ. ಆದರೆ ನಿಸರ್ಗದ ಮನಮೋಹಕ ಸೌಂದರ್ಯದ ಸಿರಿಯ ಹಿನ್ನೆಲೆಯಲ್ಲಿ

ಬಡತನ, ಶೋಷಣೆ ಅಡಗಿವೆಯೆಂಬುದನ್ನು ನೀನು ಮರೆಯಬಾರದು. ಅಂತರಾಳದಲ್ಲಿ ಅಡಗಿರುವ ಜನರ ಬಾಳಿನ ಗೋಳು ಹೊರಗಡೆಯಿಂದ ಬರುವ ನಿಮ್ಮಂತಹವರಿಗೆ ತಕ್ಷಣ ಗೊತ್ತಾಗುವುದಿಲ್ಲ. ಈ ಪ್ರದೇಶದಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯೆಲ್ಲವೂ ಕೆಲವೇ ಜನರ ಕೈಯಲ್ಲಿ ಸೇರಿಹೋಗಿದೆ. ನಿಸರ್ಗದ ಶಾಶ್ವತ ಸಂಪರ್ಕದಲ್ಲಿ ಹುಟ್ಟಿಬೆಳೆದವರಿಗೆ ನ್ಯಾಯ, ನೀತಿ, ದಯೆ ಮಾನವೀಯತೆ ಮೊದಲಾದ ಗುಣಗಳು ಯಥೇಚ್ಚವಾಗಿರಬೇಕು. ಆದರೆ ಈ ಗುಣಗಳು ಕೆಲವರಲ್ಲಿ ಇಲ್ಲದೆ ಹೋಗಿರುವುದರಿಂದ ಹಲವರ ಬಾಳು ಗೋಳಿನ ಕಥೆಯಾಗಿದೆ. ದಾರಿಯಲ್ಲಿ ಬರುವಾಗ ನೀನು ಗೇಣಿ ಒಕ್ಕಲುಗಳ ಗುಡಿಸಲುಗಳನ್ನು ನೋಡಿರಬಹುದು. ಮುರುಕುಲು ಹುಲ್ಲು ಜೋಪಡಿಗಳೂ, ಬಡಕಲು ಎತ್ತುಗಳೂ ಈ ಜನರ ವಿಶಿಷ್ಟ ಆಸ್ತಿ, ಅವರ ಪರಿಸ್ಥಿತಿಯನ್ನು ಸುಧಾರಿಸುವ ಸಲುವಾಗಿ ನಾನು ರಾಜಕಾರಣಕ್ಕೆ ಅಂಟಿಕೊಂಡಿದ್ದೇನೆ. ನನಗಾಗಿ ರಾಜಕಾರಣ ಬೇಕಾಗಿಲ್ಲ ಒಕ್ಕಲುಗಳಿಗೂ ಇತರ ಬಡಬಗ್ಗರಿಗೂ ಸಹಾಯಕನಾಗಿದ್ದೇನೆಂಬ ಕಾರಣದಿಂದ ಕೆಲವರು ಶ್ರೀಮಂತರಿಗೆ ನನ್ನ ಮೇಲೆ ವಿಪರೀತವಾದ ಸಿಟ್ಟು. ಒಕ್ಕಲುಗಳ ಬಡತನಕ್ಕೆ ಅವರು ಸೋಮಾರಿಗಳಾಗಿರುವುದೇ ಕಾರಣವೆಂದು ಈ ಶ್ರೀಮಂತರ ವಾದ. ಒಕ್ಕಲುಗಳು ಕೊಡತಕ್ಕ ಗೇಣಿಯಿಂದ ಬೊಜ್ಜು ಬೆಳೆಸಿರುವವರು ಕಷ್ಟಪಟ್ಟು ದುಡಿಮೆಮಾಡುವವರಂತೆ! ಹಗಲಿರುಳೂ ಗೆಯ್ಯುವ ಒಕ್ಕಲುಗಳು ಸೋಮಾರಿಗಳಂತೆ! ಎಂತಹ ವಿಚಿತ್ರ ವಾದವಯ್ಯಾ? ಆಸಕ್ತಹಿತಶಕ್ತಿಗಳೆಲ್ಲಾ ಸೇರಿ ನನ್ನ ಮೇಲೆ ಒಂದು ಕೂಟವನ್ನು ನಿರ್ಮಿಸಿದ್ದಾರೆ. ನಾನು ಲಂಚಕೋರನೆಂದೂ, ನನ್ನ ಬಂಧುಗಳ ಹೆಸರಿನಲ್ಲಿ ಆಸ್ತಿಯನ್ನು ಮಾಡಿರುವೆನೆಂದೂ, ನನ್ನ ಮೇಲೆ ಅಪಪ್ರಚಾರಮಾಡುತ್ತಿದ್ದಾರೆ. ನನ್ನ ವಿಚಾರ ನಿನಗೆ ಸಂಪೂರ್ಣವಾಗಿ ಗೊತ್ತಿದೆ. ನಾನು ನನ್ನ ತಂದೆ ಬಿಟ್ಟು ಹೋದ ಗೇಣಿಯ ಭೂಮಿಯಿಂದಲೇ ಬಹಳ ಕಷ್ಟಪಟ್ಟು ಜೀವನ ಸಾಗಿಸುತ್ತಿದ್ದೇನೆ. ನನ್ನ ಮನೆ ಇನ್ನೂ ಹುಲ್ಲು ಜೋಪಡಿಯಾಗಿಯೇ ಉಳಿದಿದೆ. ನಿನಗೆ ಕಾಣುವುದಿಲ್ಲವೆ? ಶೀತೂರು ಕಲ್ಲಪ್ಪ ಯಾವ ಉದ್ಯೋಗವೂ ಇಲ್ಲದೆ, ಯಾವ ಬಂಡವಾಳವೂ ಇಲ್ಲದೆ ರಾಜಕಾರಣದ ಹೆಸರಿನಲ್ಲಿ ಸುಮಾರು ಎರಡು ಲಕ್ಷ ರೂಪಾಯಿಗಳನ್ನು ಸಂಪಾದಿಸಿದ್ದಾನೆ. ರಂಗನಾಥ ಸ್ವರಾಜ್ಯಕ್ಕೆ ಪೂರ್ವ ಆಂಗ್ಲೇಯರ ಬಲಗೈಯಂತೆ ಇದ್ದವನು. ಈಚೆಗೆ ಕಾಂಗ್ರೆಸ್ಸನ್ನು ಸೇರಿದವನು; ಸೆರೆಮನೆಯ ಮುಖವನ್ನೇ ನೋಡಿದವನಲ್ಲ. ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ಆಕ್ರಮಿಸಿಕೊಂಡು, ವ್ಯಾಪಾರ ಮತ್ತು ಕಂಟ್ರಾಕ್ಟಿನ ನೆಪದಲ್ಲಿ ಲಕ್ಷಾಂತರ ರೂಪಾಯಿಗಳನ್ನು ಸಂಪಾದನೆ ಮಾಡಿದ್ದಾನೆ. ರಾಜಕಾರಣಿಯಾದವನು ಅಕ್ರಮ ಸಂಪಾದನೆ ಮಾಡಿದರೆ ಅದು ರಾಜಕಾರಣವೆನಿಸುತ್ತದೆ. ವ್ಯಾಪಾರಿಯಾದವನು ಅಕ್ರಮ ಸಂಪಾದನೆ ಮಾಡಿದರೆ ಅದು ವ್ಯಾಪಾರವೆನಿಸುತ್ತದೆ. ಸರ್ಕಾರಿ ನೌಕರನೊಬ್ಬನು ಅಕ್ರಮ ಸಂಪಾದನೆ ಮಾಡಿದರೆ ಅದು ಲಂಚವೆನಿಸುತ್ತದೆ. ಹೊಟ್ಟೆಗಿಲ್ಲದವನೊಬ್ಬನು ಪರರ ವಸ್ತುವನ್ನಪಹರಿಸಿದರೆ ಅದು ಕಳ್ಳತನವಾಗುತ್ತದೆ. ನಾನು ಗಾಂಧೀ ತತ್ವಗಳಿಗೆ ಅಂಟಿಕೊಂಡು ಬಡಬಗ್ಗರಿಗೆ ಸಹಾಯಕನಾಗಿ ಬಾಳುವುದು ತಪ್ಪೇ? ನೀನೇ ಹೇಳು. ಯಾವ ಧರ್ಮದಲ್ಲಿ ಬಡವರನ್ನು

ಶೋಷಣೆ ಮಾಡಿ ಬೊಜ್ಜು ಬೆಳೆಸಬೇಕೆಂಬ ವಿಧಾಯಕವಾಗಿದೆ? ಎಲ್ಲರ ಹೃದಯದಲ್ಲೂ ಭಗವಂತನಿದ್ದಾನೆಂಬುದನ್ನು ಹಿಂದೂ ಧರ್ಮ ಸಾರಿಲ್ಲವೇ? ಆದ್ದರಿಂದ ಎಲ್ಲರೂ ಸುಖವಾಗಿರಬೇಕೆಂದು ನಾನು ವಾದಿಸಿದರೆ ಅದರಲ್ಲಿ ತಪ್ಪೇನಿದೆ?

"ಅದೆಲ್ಲಾ ಸರಿಯಪ್ಪಾ, ಆದರೆ ಸ್ವಾಮಿಗಳ ಹತ್ತಿರ ನಿನಗ್ಯಾಕಯ್ಯಾ ಜಗಳ?"

"ಪವಿತ್ರಪುರದ ಸ್ವಾಮಿಗಳು ನಿಜವಾದ ಸ್ವಾಮಿಗಳೆಂದು ನಾನು ತಿಳಿದುಕೊಂಡಿಲ್ಲ ಶಾಸ್ತ್ರೀ. ನಿನಗೆ ಗೊತ್ತಿರುವಷ್ಟು ವೇದಾಂತವೂ ಕೂಡ ಅವರಿಗೆ ಗೊತ್ತಿಲ್ಲ. ದ್ವೇಷ, ಅಸೂಯೆ, ಅಹಂಭಾವಗಳನ್ನು ತೊರೆದು, ಕುಲಗೋತ್ರಗಳನ್ನು ಮರೆತು, ಪ್ರಾಪಂಚಿಕ ವ್ಯವಹಾರಗಳನ್ನು ತ್ಯಜಿಸಿ, ತಪಸ್ಸು ಮಾಡುವ ಸಾಧಕರು ನಿಜವಾದ ಸ್ವಾಮಿಗಳು. ಅಂತಹ ಸ್ವಾಮಿಗಳು ಈಗಲೂ ಅಲ್ಲಲ್ಲಿ ಕೆಲವರಿದ್ದಾರೆ. ಉಳಿದವರು ಬರೀ ಮಠದ ಸ್ವಾಮಿಗಳಯ್ಯಾ. ಸ್ವಾಮಿಗಳೆಂದು ಕರೆಯಿಸಿಕೊಳ್ಳುವವರು ಧರ್ಮಶಾಸ್ತ್ರಗಳಲ್ಲಿ ಪಾಂಡಿತ್ಯವನು ಪಡೆದಿದ್ದರೆ ಅವರನ್ನು ಒಳ್ಳೆಯ ಪಂಡಿತರೆನ್ನಬಹುದು; ವಿದ್ಯಾರ್ಥಿ ಮಂದಿರಗಳನ್ನು ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಿದ್ದರೆ ಅವರನ್ನು ಶ್ರೇಷ್ಠ ಸಮಾಜ ಸೇವಕರೆನ್ನಬಹುದು. ನಿಜವಾದ ಸ್ವಾಮಿಗಳೆಂಬ ಬಿರುದನ್ನು ಪಡೆಯಬೇಕಾದರೆ ಆಧ್ಯಾತ್ಮಿಕ ಅರ್ಹತೆ ಬೇಕು. ಇಂದು ಆಧ್ಯಾತ್ಮದ ಗಂಧವೇ ಇಲ್ಲದ ಕೆಲವರು ಸ್ವಾಮಿಗಳೆಂದೆನಿಸಿಕೊಂಡು, ಬರಿಯ ರಾಜಕಾರಣದಲ್ಲಿ ತೊಡಗಿದ್ದಾರೆ. ಜಾತೀಯತೆಯೇ ಅವರ ಧರ್ಮ, ಅವರ ಜಾತಿಯವರನ್ನು ಒಂದುಗೂಡಿಸುವುದೇ ಅವರ ತಪಸ್ಸು. ಇಂತಹ ಜನರನ್ನು ಸ್ವಾಮಿಗಳೆನ್ನುವುದು ಮೂರ್ಖತನ. ಪವಿತ್ರಪುರದ ಮಠದ ಸ್ವಾಮಿಗಳೂ ಈ ಗುಂಪಿಗೆ ಸೇರಿದವರು. ಶಾಸ್ತ್ರೀ, ಸತ್ಯಕ್ಕೆ ಬೆಲೆ ಎಲ್ಲಿದೆ ಹೇಳು? ಕುರುಡರೂ, ಲಂಚಕೋರರೂ ನನ್ನನ್ನು ಕುಡುಕನೆಂದೂ, ಲಂಚಕೋರನೆಂದೂ ಕರೆಯುತ್ತಿದ್ದಾರೆ. ಸಾಮಾನ್ಯ ಪರಿಸ್ಥಿತಿಯಲ್ಲಿ ಪತಿವ್ರತೆಯಾದವಳು ದೇವದಾಸಿಗೆ ಉಪದೇಶ ಹೇಳಬೇಕು. ಇಂದಿನ ಪರಿಸ್ಥಿತಿಯನ್ನು ನೋಡಿದರೆ ದೇವದಾಸಿಯಾದವಳು ಪತಿವ್ರತೆಗೆ ಉಪದೇಶ ಹೇಳುವಂತೆ ತೋರುತ್ತದೆ. ಪ್ರಜಾಪ್ರಭುತ್ವದಲ್ಲಿ ಅನೀತಿವಂತರಾದ ಅಲ್ಪರು ಮುಖಂಡರಾದರೆ ಪ್ರಜಾಪ್ರಭುತ್ವ ಕುಸಿದು ಬೀಳುತ್ತದೆ. ಇದು ನನ್ನ ಮಾತಲ್ಲ. ಜಗತ್ತಿನ ಇತಿಹಾಸ ಹೇಳಿರುವ ಮಾತು. ಇಂದು ಪವಿತ್ರಪುರದ ರಾಜಕಾರಣ ಅನೀತಿವಂತರಾದ ಅಲ್ಪ ಜನರ ಕೈಸೇರಿ ಹೋಗಿದೆ. ಶಾಸ್ತ್ರೀ, ನಿನ್ನಂತಹವರು ಕಾಂಗ್ರೆಸ್ಸಿಗೆ ಹೆಚ್ಚು ಸಂಖ್ಯೆಯಲ್ಲಿ ಸೇರಿದರೆ ದುಷ್ಟ ಶಕ್ತಿಗಳನ್ನು ಹೊರದೂಡಬಹುದು. ಮನಸ್ಸು ಮಾಡಿ ಮತ್ತೊಮ್ಮೆ ಕಾಂಗ್ರೆಸ್ಸಿಗೆ ಸೇರು."

"ಒಳ್ಳೆಯ ಮಾತನ್ನು ಹೇಳಿದೆ ಮೋಹನ್. ನಿನ್ನ ಗೋಳನ್ನು ನೋಡುತ್ತಾ ನೋಡುತ್ತಾ ನಾನು ಪುನಃ ರಾಜಕೀಯ ರಂಗಕ್ಕೆ ದುಮುಕಬೇಕೆಂದು ಹೇಳಿದರೆ ನಾನು ಕೇಳಲು ಸಾಧ್ಯವೇ? ಮೊದಲನೆಯದಾಗಿ ನಿನ್ನ ಸಮಾಜವಾದ ನನಗೆ ಅಂಟುವುದಿಲ್ಲ. ಅಲ್ಲದೆ ಈಗಿನ ಕಾಲದಲ್ಲಿ ರಾಜಕಾರಣ ಮಾಡುವುದು ಸುಲಭವೇನಯ್ಯಾ? ಒಂದು ಚುನಾವಣೆ ಎಂದರೆ ಐದು ಸಾವಿರ, ಐದು ಲಕ್ಷರೂಪಾಯಿಗಳವರೆಗೆ ಖರ್ಚುಮಾಡಬೇಕು. ಕೆಲವು ಕಡೆಗಳಲ್ಲಿ ದುಡ್ಡಿದ್ದವರು ಕೆಲವರು, ಬಡವರ ಓಟುಗಳನ್ನು

ಕೊಂಡುಕೊಳ್ಳುತ್ತಾ ಇದ್ದಾರೆ. ಈ ಪರಿಸ್ಥಿತಿಯನ್ನು ತಡೆಗಟ್ಟದಿದ್ದಲ್ಲಿ ಇನ್ನು ಕೆಲವೇ ವರ್ಷಗಳಲ್ಲಿ ಲಕ್ಷಾಧಿಪತಿಗಳು ಮಾತ್ರ ಚುನಾವಣೆಗೆ ನಿಲ್ಲಲು ಸಾಧ್ಯ. ಹಾಗೆ ಆದಲ್ಲಿ ಪ್ರಜಾಪ್ರಭುತ್ವದ ಬದಲು ದುಡ್ಡಿನ ಪ್ರಭುತ್ವ ಜಾರಿಗೆ ಬರುತ್ತದೆ. ರಾಜಕಾರಣ ಮಾಡುವವರಿಗೆ ಎಷ್ಟು ಖರ್ಚು ಮಾಡಿದರೂ ಕರಗದೆ ಇರುವಷ್ಟು ಹಿರಿಯರು ಬಿಟ್ಟು ಹೋಗಿರುವ ಆಸ್ತಿಯಿರಬೇಕು. ಇಲ್ಲವಾದರೆ ರಾಜಕಾರಣದ ಹೆಸರಿನಲ್ಲಿ ಇನ್ನಾವುದಾದರೂ ಕಾರಣಮಾಡಿ ಅಕ್ರಮ ಸಂಪಾದನೆ ಮಾಡಬೇಕು. ಇತ್ತೀಚೆಗೆ ರಾಜಕಾರಣ ಮಾಡುವ ಕೆಲವರು ರಾಜಕಾರಣಕ್ಕೆ ಇಳಿಯುವ ಮುನ್ನ ಕೆಲವು ಬಂಡವಾಳಗಾರರ ಕೃಪಾಶ್ರಯವನ್ನು ಪಡೆಯುತ್ತಿರುವುದು ನಿನಗೆ ಗೊತ್ತಿಲ್ಲವೆ? ಹೊಗಳುವ ಒಂದೆರಡು ಪತ್ರಿಕೆಗಳೂ, ಹಣಕೊಡುವ ಒಬ್ಬಿಬ್ಬರು ಧನಿಕರೂ ಸಿಕ್ಕರೆ ರಾಜಕಾರಣ ಮಾಡುವುದು ಸುಲಭ. ಮೊನ್ನೆ ನಡೆದ ಚುನಾವಣೆಯಲ್ಲಿ ಒಬ್ಬಿಬ್ಬರು ರಾಜಕಾರಣಿಗಳು ಅವರ ಸಾಕು ತಂದೆಗಳಂತಿರುವ ಕೆಲವರು ಲಾಭಬಡುಕ ಕಂಟ್ರಾಕ್ಟರುಗಳಿಂದಲೂ, ದಲ್ಲಾಳಿಗಳಿಂದಲೂ, ಕೈಗಾರಿಕಾ ಮಾಲೀಕರಿಂದಲೂ ತಮ್ಮ ಸ್ವಂತ ಚುನಾವಣೆಯ ಖರ್ಚಿಗಾಗಿ ಹೇರಳವಾಗಿ ಹಣವನ್ನು ಸಂಗ್ರಹಿಸಿ, ಅದರಲ್ಲಿ ಅರ್ಧಭಾಗವನ್ನು ಚುನಾವಣೆಗಾಗಿ ಖರ್ಚುಮಾಡಿ, ಉಳಿದ ಅರ್ಧಭಾಗ ಹಾಗೆಯೇ ಅಪದ್ಧನವಾಗಿ ಜೋಪಾನವಾಗಿಟ್ಟರಂತೆ. ಕೆಲವರು ರಾಜಕಾರಣಿಗಳು ತಮಗೆ ಬೇಕಾದವರ ಹೆಸರಿನಲ್ಲಿ ಕಂಟ್ರಾಕ್ಟ್ ಗಿಂಟ್ರಾಕ್ಟ್, ಪರ್ಮಿಟ್ ಗಿರ್ಮಿಟ್ ಗಿಟ್ಟಿಸಿಕೊಂಡು ತಾವು ಮಾತ್ರ ನಿರ್ಮಲ ಮೂರ್ತಿಗಳಂತೆ ಸೋಗು ಹಾಕಿರುತ್ತಾರೆ. ನಾನೂ ನೀನೂ ಆ ರೀತಿ ರಾಜಕಾರಣ ಮಾಡುವುದು ಸಾಧ್ಯವೇ? ನೀನು ಭೂಮಾಲಿಕರ ವಿಚಾರ ಹೇಳುತ್ತಿದ್ದೆ. ಒಂದು ಮಾತನ್ನು ಹೇಳುತ್ತೇನೆ ಕೇಳು ಮೋಹನಾ, ಇನಾಂದಾರರೂ, ಅಲ್ಲಲ್ಲಿ ರೈತರನ್ನು ಶೋಷಣೆ ಮಾಡುತ್ತಿರಬಹುದು. ಆದರೆ ಅವರಿಂದ ದೇಶಕ್ಕೆ ಹೆಚ್ಚಿನ ಅಪಾಯವಿಲ್ಲ. ಕೆಲವು ರಾಜಕಾರಣಿಗಳ ಸಾಕುತಂದೆಗಳಂತಿರುವ ಕೆಲವು ಲಾಭಬಡುಕರಿಂದ ಆಗುವಷ್ಟು ಅನಾಹುತ ಇನಾಂದಾರರಿಂದಾಗಲಿ ಜಮೀನ್ದಾರರಿಂದಾಗಲಿ ಆಗುವುದಿಲ್ಲ. ಈ ಲಾಭಬಡುಕರು ದೇಶವನ್ನೇ ನುಂಗುವಂತಹವರು".

"ಅಯ್ಯಾ ಶಾಸ್ತ್ರೀ, ಅಲ್ಲಲ್ಲಿ ಕೆಲವು ರಾಜಕಾರಣಿಗಳು ಕೆಟ್ಟು ಹೋಗಿರಬಹುದು. ಆದರೆ ಕಾಂಗ್ರೆಸ್ಸೆಲ್ಲಾ ಕೆಟ್ಟು ಹೋಗಿಲ್ಲವಪ್ಪ. ಈಗಲೂ ಕೂಡ ಬಹುಮಂದಿ ಕಾಂಗ್ರೆಸ್ಸಿಗರಲ್ಲಿ ಬಹಳ ಒಳ್ಳೆಯವರಿದ್ದಾರೆಂಬುದನ್ನು ನೀನು ಮರೆಯಬಾರದು. ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನೂ, ನಮ್ಮ ಮಹಾಪ್ರಧಾನಿಗಳ ಮುಖಂಡತ್ವವನ್ನೂ ಇಡಿಯ ದೇಶವೇ ಒಪ್ಪಿಕೊಂಡಿರುತ್ತದೆ. ಊರಿದ್ದಲ್ಲೆಲ್ಲಾ ತಿಪ್ಪೆಗುಂಡಿಗಳಿರುವಂತೆ ರಂಗನಾಥ ಮತ್ತು ಕಲ್ಲಪ್ಪನಂತಹ ದುಷ್ಟ ಕೀಟಗಳು ಅಲ್ಲಲ್ಲಿ ಕಾಂಗ್ರೆಸ್ಸಿಗೆ ಸೇರಿಕೊಂಡಿವೆ. ನಿನ್ನಂತಹವರು ಹೆಚ್ಚು ಸಂಖ್ಯೆಯಲ್ಲಿ ಕಾಂಗ್ರೆಸ್‌ಗೆ ಸದಸ್ಯರಾದರೆ ಆ ದುಷ್ಟ ಕೀಟಗಳು ತಮ್ಮಷ್ಟಕ್ಕೆ ತಾವೇ ಹಾರಿಹೋಗುತ್ತವೆ. ಆ ದುಷ್ಟ ಕೀಟಗಳು ಕಾಂಗ್ರೆಸ್ಸಿನ ಮೇಲಿನ ಮಮತೆಯಿಂದ ಕಾಂಗ್ರೆಸ್ಸಿಗೆ ಸೇರಿಲ್ಲ. ಕಾಂಗ್ರೆಸ್ಸಿನಿಂದ ಬರತಕ್ಕ ಲಾಭಕ್ಕಾಗಿ ಸೇರಿವೆ. ಆಕಸ್ಮಾತ್ ಕಾಂಗ್ರೆಸ್

ಅಧಿಕಾರವನ್ನು ಕಳೆದುಕೊಂಡರೆ ಆ ಕೀಟಗಳು ಅಧಿಕಾರವಿರುವ ಪಕ್ಷದ ಕಡೆಗೆ ಮೆಲ್ಲಗೆ ಹರಿದು ಹೋಗುತ್ತವೆ. ನೀನು ಸಮಾಜವಾದದಲ್ಲಿ ನಂಬಿಕೆಯಿಲ್ಲವೆಂದು ಹೇಳಿದೆ. ಯಾವ ದೇಶದಲ್ಲಿ ಇದ್ದವರಿಗೂ, ಇಲ್ಲದವರಿಗೂ ಅಜಗಜಾಂತರ ಅಸಮತೆ ಇರುತ್ತದೆಯೋ, ಆ ದೇಶದಲ್ಲಿ ಜನಸಾಮಾನ್ಯರಲ್ಲಿ ಅತೃಪ್ತಿ ಮೂಡುತ್ತದೆ. ಅತೃಪ್ತಿ ಹೆಚ್ಚಾದಲ್ಲಿ ಅಶಾಂತಿಯುಂಟಾಗುತ್ತದೆ. ಅಶಾಂತಿ ಹೆಚ್ಚಾದಲ್ಲಿ ಆಂದೋಳನವಾಗುತ್ತದೆ. ಆಂದೋಳನ ಹೆಚ್ಚಾದಲ್ಲಿ ಕ್ರಾಂತಿಯುಂಟಾಗುತ್ತದೆ. ಕ್ರಾಂತಿಯಾದಲ್ಲಿ ರಕ್ತಪಾತವಾಗುತ್ತದೆ. ಇವು ನಾನು ಹೇಳುವ ಮಾತುಗಳಲ್ಲ, ಜಗತ್ತಿನ ಇತಿಹಾಸ ಹೇಳಿದ ಮಾತುಗಳು. ನಮ್ಮ ದೇಶ ಅತಿವಿಸ್ತಾರವಾದ ದೇಶ ಮತ್ತು ಬಹು ಹಿಂದುಳಿದ ದೇಶ. ಈ ದೇಶದ ಬಹು ಮಂದಿ ಜನರು ಬಡವರು. ಧಾರ್ಮಿಕ ಮತ್ತು ವಾಸ್ತವಿಕ ದೃಷ್ಟಿಯಿಂದ ಬಡವರ ಬಾಳನ್ನು ಉತ್ತಮಪಡಿಸುವುದು ಆಡಳಿತವರ್ಗದ ಪವಿತ್ರ ಕರ್ತವ್ಯ. ಕಾಂಗ್ರೆಸ್ಸಿನವರಾದ ನಾವು ಅಹಿಂಸಾಮಾರ್ಗದಲ್ಲಿ, ಪ್ರಜಾಪ್ರಭುತ್ವದ ರೀತಿ ನೀತಿಗಳಿಂದ, ಸಮಾಜವಾದವನ್ನು ಅನುಷ್ಠಾನಕ್ಕೆ ತರುವ ಪ್ರಯತ್ನವನ್ನು ಮಾಡುತ್ತಿದ್ದೇವೆ. ಪ್ರಜಾಪ್ರಭುತ್ವವನ್ನು ಉಳಿಸುವ ಸಲುವಾಗಿ, ಅತೃಪ್ತಿ ಅಂದೋಳನಗಳನ್ನು ತಪ್ಪಿಸುವ ಸಲುವಾಗಿ, ಸಮಾಜವಾದವನ್ನು ಅನುಷ್ಠಾನಕ್ಕೆ ತರುವುದು ಅತ್ಯಾವಶ್ಯಕ."

"ಹೋಗಲಯ್ಯ ಮೋಹನ್, ರಾಜಕಾರಣ ಬಿಟ್ಟು ಬೇರೆ ಮಾತಾಡೋಣ ನೀನು ಯಾವಾಗಲಯ್ಯಾ ಮದುವೆಯಾಗೋದು? ನಿನ್ನ ಸಂಗಡ ಓದುತ್ತಿದ್ದವರಿಗೆ ಮದುವೆಯಾಗಿ ಅರ್ಧ ಡಜನ್ ಮಕ್ಕಳಾಗಿವೆ. ನೀನಿನ್ನೂ ಬ್ರಹ್ಮಚಾರಿಯಾಗಿದ್ದೀಯ. ನಿನ್ನ ಕತೆಯೇನಯ್ಯಾ ಹೇಳು" ಎಂದು ಶಾಸ್ತ್ರಿ ಹೇಳುತ್ತಿರುವಷ್ಟರಲ್ಲಿ, ಚೆನ್ನಮ್ಮನು ಒಳಗಡೆಯಿಂದ ಜಗಲಿಗೆ ಬಂದು "ಸಾಸ್ತ್ರಿಗಳೇ ದೇವರು ಕರ್ಕುಂಡ್ ಬಂದ್ಹಾಗೆ ಬಂದೀರಿ.ನಮ್ಮ ಹುಡುಗಗೆ ಮುವತ್ತೈದು ವುರ್ಸಾತು. ಇನ್ನೂ ಲಗ್ನಿಲ್ಲಾ, ಮೂರ್ತಿಲ್ಲಾ ಅವ ನನ್ಮಾತು ಕೇಳೂದಿಲ್ಲ. ನೀವೇ ತೀರ್ಮಾನ ಮಾಡಿ ಹೋಗಬೇಕು. ಅವನ ಜೊತಿಗೆ ಜೈಲೀಗೆ ಹೋದೋರು, ಅವಗಿಂತ ಕಡೀಗೆ ಕಾಂಗ್ರೆಸ್ಸಿಗೇ ಸೇರದೋರುಯಲ್ಲಾ ಚಂದಾಗಿ ಅದ್ಯಾರೆ. ಸಿದ್ದಮ್ಮ ಹೆಗ್ಗಡ್ತಿ ಮಗ ರಂಗನಾಥ ಲಕ್ಷಾನ್‌ಪತಿ ಆಗ್ಯಾನೆ. ಶೀತೂರು ಬಸಪ್ಪನ ಮಗ ಕಲ್ಲಪ್ಪ ಮೊದ್ಲುಯಾತಗೂ ಬ್ಯಾಡದವನು. ಈಗ ಅವ ಒಬ್ಬ ದೊಡ್ಡ ಮನಸ್ಯ ಆಗ್ಯಾನೆ. ನನ್ ಮಗಗೆ ಇದ್ದೋರ್ಬದ್ದೋರ ಹ್ವತ್ರ ಯಲ್ಲಾ ನಿಷ್ಟೂರ. ಅವನ ಕಂಡರೆ ದುಡ್ಡಿದ್ದವರಿಗೆ ಒಬ್ಬರಿಗೂ ಆಗೂದಿಲ್ಲ. ನಮ್ಮ ಹಣೇಬರಕೆ ಗೇಣಿಗದ್ದೆ, ಗುತ್ಗಿ ತ್ವಾಟ, ಹುಲ್ಲು ಜೋಪಡಿ, ಯಜಮಾನರು ವುಂದಿನಾನು ಸುಖಪಡ್ದೆ ದಿಕ್ಕಿಲ್ಲದವರಂತೆ ಜೈಲಾಗೆ ಸತ್ತರು. ಕಡೇ ಗಳೀಗೀಲಿ ಅವರ ಮಕ ನೋಡೂಕು ಪುಣ್ಯಾ ನಂಗೆ ಇರ್ಲಿಲ್ಲ" ಎಂದು ಹೇಳಿ ಅತ್ತಳು.

"ಅಳಬೇಡಿ ಚನ್ನಮ್ಮನವರೇ, ನಿಮ್ಮ ಮಗ ಒಳ್ಳೆಯವನು. ಅವನಿಗೆ ದೇವರು ಒಳ್ಳೇದು ಮಾಡ್ತಾನೆ. ಅವ ಇಂದಿಲ್ದೆ ಇದ್ರೆ ಇನ್ನೊಂದು ದಿನ ದೊಡ್ಡ ವ್ಯಕ್ತಿಯಾಗ್ತಾನೆ. ಮದ್ವೆ ವಿಚಾರ ಅವನಿಗೇ ಬಿಡೋಣ. ನಾನೂ ಹೇಳ್ತೀನಿ" ಎಂದು ಹೇಳಿ ಶಾಸ್ತ್ರಿಯು ಚೆನ್ನಮ್ಮನನ್ನು ಸಮಾಧಾನ ಪಡಿಸಿದನು. ಶಾಸ್ತ್ರಿಗೆ ಚೆನ್ನಮ್ಮನ ಮಾತುಗಳನ್ನು ಕೇಳಿ

ಸಂಕಟವಾಯಿತು. ಸಾಮಾನ್ಯ ಜನರ ದೃಷ್ಟಿಯಿಂದ ಆಕೆಯ ವಾದ ಸಮಂಜಸವಾಗಿತ್ತು. ಆದರೆ ಆದರ್ಶವಾದಿಗಳ ದೃಷ್ಟಿಯಿಂದ ಮೋಹನನ ಜೀವನ ಸರ್ವಸಮರ್ಪಕವಾಗಿತ್ತು. ಮೋಹನನೊಡನೆ ಅವನ ಭವಿಷ್ಯದ ವಿಚಾರದಲ್ಲಿ ಶಾಸ್ತ್ರಿ ದಿನವೆಲ್ಲಾ ಚರ್ಚಿಸಿದನು. ಮೋಹನನು ತನ್ನ ಆದರ್ಶವಾದವನ್ನು ಬಿಡಲೊಪ್ಪಲಿಲ್ಲ. ಮೋಹನನ ಮೊಂಡುತನದಿಂದ ಶಾಸ್ತ್ರಿಗೆ ಬೇಸರವಾಗುವ ಬದಲು ಮೊದಲಿಗಿಂತಲೂ ಅವನ ವಿಚಾರದಲ್ಲಿ ಗೌರವ ಹೆಚ್ಚಾಯಿತು. ಮರುದಿನ ಮೂರ್ತಿ ಶಾಸ್ತ್ರಿಗಳಿಬ್ಬರೂ ಪಂಜರವಳ್ಳಿಯಿಂದ ಹೊರಟುಹೋದರು.

## ೧೪. "ಲಂಚ"
## ಸಮಾಜವನ್ನಾವರಿಸಿರುವ ಅಸತ್ಯಜೀವನದ ಶಿಶು

ಕರಿಯಪ್ಪನು ಸರ್ಕಾರಿ ನೌಕರಿಯನ್ನು ಸೇರಲು ಬಹಳ ಅವಕಾಶಗಳಿದ್ದವು. ಆ ಅವಕಾಶಗಳನ್ನು ಅಲ್ಲಗಳೆದು, ಅವನು ಕಾಂಗ್ರೆಸ್ಸಿಗೆ ಸೇರಿದ್ದನು, ಹೂವಿಯ ಅಕಾಲ ದುರ್ಮರಣದಿಂದ ಅವನಿಗೆ ಜೀವನದಲ್ಲಿ ಜಿಗುಪ್ಸೆ ಉಂಟಾಗಿತ್ತು. ಅವನ ಬಾಳಿನ ಆಶೆಯ ಕುಸುಮ ಕಂದಿಹೋಗಿ, ಜೀವನ ನಶ್ವರವಾಗಿ ತೋರಿತ್ತು. ಸಾಯುವವರೆಗೆ ಹೇಗಾದರೂ ಬದುಕಿರಬೇಕೆಂಬ ಭಾವನೆಯಿಂದ ಜೀವನವನ್ನು ಸಾಗಿಸುತ್ತಿದ್ದನು. ಮೋಹನ ಬದುಕಿರುವವರೆಗೆ ತಾನೂ ಬದುಕಿರಬೇಕೆಂದು ಯೋಚಿಸುತ್ತಿದ್ದನು. ಆದರ್ಶ ವ್ಯಕ್ತಿಯಾಗಿದ್ದ ಮೋಹನನಿಗೆ ಪದೇಪದೇ ಬರುತ್ತಿದ್ದ ತೊಂದರೆಗಳನ್ನು ನೋಡಿ ಕರಿಯಪ್ಪನಿಗೆ ಒಂದು ಕಡೆ ಆಶ್ಚರ್ಯವೂ, ಇನ್ನೊಂದು ಕಡೆ ದುಃಖವೂ ಆಗುತ್ತಿತ್ತು. ಜೀವವಿರುವವರೆಗೂ ಜೀವನ ರಥ ಸಾಗಬೇಕಾಗಿತ್ತು. ಜೀವನವನ್ನು ಹೇಗೆ ಸಾಗಿಸಬೇಕೆಂಬುವುದರ ಕಡೆಗೆ ಈಚೆಗೆ ಅವನ ಗಮನ ಹರಿದಿತ್ತು. ಸಣ್ಣೇಗೌಡನ ಮನೆಯ ಊಳಿಗದ ಕೆಲಸವನ್ನು ಮಾಡಲು ಅವನು ಸಿದ್ಧನಾಗಿರಲಿಲ್ಲ. ಸರ್ಕಾರಿ ಕೆಲಸಕ್ಕೆ ಸೇರಲು ವಯಸ್ಸಿನ ಪರಿಮಿತಿ ಮೀರಿತ್ತು. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಕಾಂಗ್ರೆಸ್ ಸ್ವಯಂಸೇವಕರನ್ನು ದೇಶಪ್ರೇಮಿಗಳು ಸಾಕುತ್ತಿದ್ದರು. ಸ್ವಾತಂತ್ರ್ಯ ಬಂದನಂತರ ದೇಶಕ್ಕೋಸ್ಕರ ತ್ಯಾಗಮಾಡಿದ. ಸ್ವಯಂಸೇವಕರ ಬಾಳು ಕಷ್ಟವಾಯಿತು. ಕಲ್ಲಪ್ಪನಂತೆ ಗಿರಾಕಿಗಳ ಖರ್ಚಿನಲ್ಲಿ ಜೀವನ ನಡೆಸುವುದು ಕರಿಯಪ್ಪನ ಮನಸ್ಸಿಗೆ ಒಪ್ಪದ ವಿಷಯವಾಗಿತ್ತು. ಆದ್ದರಿಂದ ಸ್ವಾತಂತ್ರನಾಗಿ ಮತ್ತು ಗೌರವಯುತನಾಗಿ ಜೀವನ ನಡೆಸಬೇಕೆಂದು ಅವನ ಯೋಚಿಸುತ್ತಿದ್ದನು.

ಸ್ವರಾಜ್ಯ ಬಂದನಂತರ ಹರಿಜನರಿಗೂ, ರಾಜಕೀಯದಲ್ಲಿ ನೊಂದವರಿಗೂ ಉಚಿತವಾಗಿ ಸರ್ಕಾರದ ಬಂಜರು ಭೂಮಿಯನ್ನು ಹಂಚುವ ಯೋಜನೆಯನ್ನು ಸರ್ಕಾರದವರು ಜಾರಿಗೆ ತಂದಿದ್ದರು. ಕರಿಯಪ್ಪನು ಹರಿಜನ ಪಂಗಡಕ್ಕೆ ಸೇರಿದವನಾಗಿ, ರಾಜಕೀಯದಲ್ಲಿ ನೊಂದವನಾಗಿ, ಭೂಮಿಯಿಲ್ಲದ ಬಡವನಾಗಿದ್ದುದರಿಂದ ಸರ್ಕಾರಿ ಭೂಮಿಯನ್ನು ಉಚಿತವಾಗಿ ಪಡೆಯಲೂ ಸರ್ವವಿಧದಲ್ಲಿಯೂ ಅರ್ಹತೆ ಪಡೆದಿದ್ದನು. ಒಂದು ದಿನ ಅವನ ತಾಯಿ ಸಿದ್ದಿಯು "ಮಗನೇ, ಸರ್ಕಾರ್ದೋರು ಬಡೋರಿಗೆ ಪುಗ್ಸಾಟೆ ಭೂಮಿ ಕೊಡ್ತಾರಂತೆ. ಮೋನಯ್ಯಗೆ ಹೇಳಿ ನೀನೂ ಸ್ವಲ್ಪ ಭೂಮಿ ತಗೋಳೊ" ಎಂದು ಹೇಳಿದ್ದಳು.

ವ್ಯವಸಾಯಕ್ಕೆ ಯೋಗ್ಯವಾದ ಬಂಜರು ಭೂಮಿಗಾಗಿ ಕರಿಯಪ್ಪನು ಬಹಳ ಹುಡುಕಿದನು. ಮಾಸ್ತಿಬೀಳೆಂಬ ಪ್ರದೇಶದಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ನಾಲ್ಕು

ಎಕರೆ ಭೂಮಿ ಅವನ ಕಣ್ಣಿಗೆ ಬಿದ್ದಿತು. ಬಹುಕಾಲದ ಹಿಂದೆ ಆ ಸ್ಥಳದಲ್ಲಿ ಮಹಿಳೆಯರು ಸತಿಯನ್ನು ಆಚರಿಸುತ್ತಿದ್ದರಂತೆ ಅದಕ್ಕಾಗಿ ಆ ಸ್ಥಳವನ್ನು ಮಹಾಸತಿಬೀಳು ಅಥವಾ ಮಾಸ್ತಿಬೀಳು ಎಂದು ಕರೆಯುತ್ತಿದ್ದರು. ಕರಿಯಪ್ಪನು ಆರಿಸಿದ ನಾಲ್ಕು ಎಕರೆ ಭೂಮಿ ವಿನಾ ಉಳಿದ ಪ್ರದೇಶವೆಲ್ಲವೂ ಕಾಡು ಸೇರಿ ಹೋಗಿದ್ದಿತು. ಆ ನಾಲ್ಕು ಎಕರೆ ಭೂಮಿಗೆ ಅರ್ಜಿಯನ್ನು ಸಲ್ಲಿಸುವ ವಿಚಾರದಲ್ಲಿ ಕರಿಯಪ್ಪನು ಮೋಹನನ ಅಭಿಪ್ರಾಯವನ್ನು ಕೇಳಿದನು. ಮೋಹನನು ಅರ್ಜಿಯನ್ನು ಸಲ್ಲಿಸಬಹುದೆಂದು ಒಪ್ಪಿಗೆಯಿತ್ತನು. ಆದರೆ ಜಮೀನಿನ ಸರ್ವೆನಂಬರು ಗೊತ್ತಾಗದೆ ಅರ್ಜಿಯನ್ನು ಸಲ್ಲಿಸುವಂತಿರಲಿಲ್ಲ. ಸರ್ವೆನಂಬರನ್ನು ತಿಳಿಯಬೇಕಾದರೆ ಶಾನುಭೋಗರ ಸಹಾಯ ಅವಶ್ಯಕವಿತ್ತು. ಶಾನುಭೋಗನು ನಾಗೇಂದ್ರನ ತಮ್ಮ ರಾಘವೇಂದ್ರನಾಗಿದುದರಿಂದ ಸರ್ವೆನಂಬರನ್ನು ಪತ್ತೆ ಹಚ್ಚುವ ಕೆಲಸ ಸ್ವಲ್ಪ ಕಷ್ಟವಾಗಿತ್ತು. ಕರಿಯಪ್ಪನು ಮೋಹನನ ಕಡೆಯವನಾದ್ದರಿಂದ ರಾಘವೇಂದ್ರನು ಸರ್ವೆ ನಂಬರನ್ನು ಸುಲಭವಾಗಿ ಕೊಡುತ್ತಾನೆಂಬ ಭರವಸೆ ಇರಲಿಲ್ಲ. ನಾಗೇಂದ್ರನ ಮನೆಗೆ ಹೋಗುವ ಮನಸ್ಸಿಲ್ಲದಿದ್ದರೂ, "ಕಾರ್ಯವಾಸಿ ಕತ್ತೆಯ ಕಾಲು ಕಟ್ಟು" ಎಂಬ ಗಾದೆಗನುಸಾರವಾಗಿ ನಿರ್ವಾಹವಿಲ್ಲದೆ ಕರಿಯಪ್ಪನು ರಾಘವೇಂದ್ರನ ಭೇಟಿಗಾಗಿ ನಾಗೇಂದ್ರನ ಮನೆಗೆ ಹೋದನು.

ನಾಗೇಂದ್ರನೂ, ರಾಘವೇಂದ್ರನೂ ಒಂದೇ ಮನೆಯಲ್ಲಿ ವಾಸವಾಗಿದ್ದರು. ಅವರ ಮನೆಯು ಅವರ ಅಡಕೆಯ ತೋಟದ ಮೇಲ್ಭಾಗದಲ್ಲಿತ್ತು. ಅದೊಂದು ದೊಡ್ಡ ಹೆಂಚಿನ ಮನೆಯಾಗಿತ್ತು. ಮನೆಯ ಒಂದು ಪಕ್ಕದಲ್ಲಿ ಬಚ್ಚಲು ಮನೆಯೂ, ಇನ್ನೊಂದು ಪಕ್ಕದಲ್ಲಿ ಪಣತದ ಕೊಟ್ಟಿಗೆಯೂ ಇದ್ದವು. ಬಚ್ಚಲು ಮನೆಯ ಪಕ್ಕದಲ್ಲಿ ಅಡಕೆಯ ಸುಲ್ತದ ಕೊಟ್ಟಿಗೆಯಿತ್ತು. ಮನೆಯ ಹಿಂಭಾಗ ಜಾನುವಾರು ಕೊಟ್ಟಿಗೆ, ಸೌದೆ ಕೊಟ್ಟಿಗೆ, ಆಳುಗಳ ಬಿಡಾರಗಳು ಇತ್ಯಾದಿ ಕಟ್ಟಡಗಳಿದ್ದವು. ಮನೆಯ ಮುಂಭಾಗದಲ್ಲಿ ಅಡಕೆಯನ್ನು ಹರಡುವ ಮನೆಯಷ್ಟೇ ಎತ್ತರವಾದ ಚಪ್ಪರವಿತ್ತು. ಮನೆಯೂ, ಅದಕ್ಕೆ ಸಂಬಂಧಪಟ್ಟ ಕಟ್ಟಡಗಳೂ, ದೂರದಿಂದ ನೋಡುವವರಿಗೆ ಒಂದು ಸಣ್ಣ ಊರಿನಂತೆ ಕಾಣುತ್ತಿದ್ದವು.

ಕರಿಯಪ್ಪನು ನಾಗೇಂದ್ರನ ಮನೆಗೆ ಹೋಗಿದ್ದಾಗ ನಾಗೇಂದ್ರನು ಮನೆಯಲ್ಲಿರಲಿಲ್ಲ. ಶಾನುಭೋಗ್ ರಾಘವೇಂದ್ರನು ಬಚ್ಚಲು ಮನೆಯಲ್ಲಿ ಅಭ್ಯಂಜನ ಸ್ನಾನ ಮಾಡುತ್ತಿದ್ದಾನೆಂದು ಮನೆಯ ಆಳೊಬ್ಬನು ಕರಿಯಪ್ಪನಿಗೆ ಹೇಳಿದನು. ಕರಿಯಪ್ಪನು ಅಂಗಳದಲ್ಲಿ ಚಪ್ಪರದ ಕೆಳಗೆ ನಿಂತಿದ್ದನು. ಎರಡು ಘಂಟೆಗಳ ಕಾಲ ಅಲ್ಲಿ ಅವನು ಕಾದಿದ್ದರೂ ರಾಘವೇಂದ್ರನು ಬಚ್ಚಲು ಮನೆಯಿಂದ ಹೊರಗಡೆ ಬರಲಿಲ್ಲ. ಎರಡು ಘಂಟೆಗಳ ನಂತರ ರಾಘವೇಂದ್ರನು ಬಚ್ಚಲು ಮನೆಯಿಂದ ಹೊರಗೆ ಬಂದವನು ಕರಿಯಪ್ಪನನ್ನು ನೋಡಿದನು. ಆದರೆ ಆತನು ಆಗ ಮಡಿಯಲ್ಲಿದ್ದುದರಿಂದ ಕರಿಯಪ್ಪನೊಡನೆ ಮಾತನಾಡುವ ಹಾಗಿರಲಿಲ್ಲ. ಬಚ್ಚಲು ಮನೆಯಿಂದ ನೇರವಾಗಿ ಅವನ ದೇವರ ಕೋಣೆಗೆ ಹೋಗಿ ಪೂಜೆಗೆ ಕುಳಿತನು. ಪೂಜೆಯಾದ ನಂತರ ಅವನು ಊಟಕ್ಕೆ ಕುಳಿತಿರುವನೆಂದು ಕರಿಯಪ್ಪನಿಗೆ ಆಳು ಹೇಳಿದನು. ಆಗಲೇ ಮಧ್ಯಾಹ್ನ ಎರಡು

ಘಂಟೆಯಾಗಿತ್ತು. ಕರಿಯಪ್ಪನ ಹೊಟ್ಟೆಯ ಘಂಟೆಯೂ ಭಾರಿಸುತ್ತಿತ್ತು. ಅವನ ಊಟದ ವಿಚಾರವನ್ನು ಯಾರಾದರೂ ಪ್ರಸ್ತಾಪಿಸಬಹುದೆಂದು ಕರಿಯಪ್ಪನು ನಿರೀಕ್ಷಿಸುತ್ತಿದ್ದನು. ಆದರೆ ಅವನನ್ನು ಯಾವೂರ ದಾಸಯ್ಯನೆಂದು ಯಾರೂ ಕೇಳಲಿಲ್ಲ. ನಿಂತು ಆಯಾಸವಾದ್ದರಿಂದ ಅಂಗಳದಲ್ಲೇ ಕುಳಿತನು. ಕುಳಿತು ಬೇಸರವಾದ್ದರಿಂದ ತೋಟದ ಕಡೆಗೆ ಹೋದನು. ತಿರುಗಿ ಬಂದು ಪುನಃ ಚಪ್ಪರದಡಿಯಲ್ಲಿ ಕುಳಿತನು. ಆಗಲೂ ಕೂಡ ಶಾನುಭೋಗರ ಸುಳಿವೇ ಇರಲಿಲ್ಲ. ಮತ್ತೆ ಬೇಸರವಾಗಿ ಕರಿಯಪ್ಪನು ಗದ್ದೆಯ ಕಡೆಗೆ ಹೋದನು. ತಿರುಗಿ ಗದ್ದೆಯಿಂದ ಅಂಗಳಕ್ಕೆ ಬಂದಾಗ ಸಾಹುಕಾರರು ವಿಶ್ರಾಂತಿ ಪಡೆಯುತ್ತಿದ್ದಾರೆಂದು ಆಳೊಬ್ಬನು ತಿಳಿಸಿದನು. ನಾಲ್ಕು ಘಂಟೆಯಾದರೂ ರಾಘವೇಂದ್ರನು ಹೊರಗೆ ಬರಲಿಲ್ಲ.

ನಾಲ್ಕೂವರೆ ಘಂಟೆಯ ಸಮಯದಲ್ಲಿ ಶಾನುಭೋಗರು ಹೊರಗೆ ಬಂದು, ಕರಿಯಪ್ಪನನ್ನು ನೋಡಿ "ಏನ್ ಕರಿಯಾ ಯಾಕ್ ಬಂದೀಯಾ" ಎಂದು ಕೇಳಿದರು. ಕರಿಯಪ್ಪನು ಬಗ್ಗಿ ನಮಸ್ಕಾರಮಾಡಿ "ಏನಿಲ್ಲ ಬುದ್ಧೀ ಮಾಸ್ತಿಬೀಳಿಗೆ ದರಖಾಸ್ತು ಹಾಕೋಣ ಅಂತ ಮಾಡೀನಿ. ಅದ್ರ ಸರ್ವೆ ನಂಬರು ತಮ್ಮ ಹತ್ರ ತಿಳಿಯೋಣ ಅಂತ ಬಂದೆ" ಎಂದನು. ರಾಘವೇಂದ್ರನು ಕರಿಯಪ್ಪನನ್ನು ದಿಟ್ಟಿಸಿ ನೋಡಿ "ಓಹೋ ರಾಜಮಾನ್ಯರಾಜೇಶ್ರೀ ಕರಿಯಪ್ಪನವರಿಗೆ ಇಂದು ನಮ್ಮ ನೆನಪಾಯಿತೇನು? ನಿಮ್ಮ ವಡೇರು ಮೋಹನಗೌಡರಿದ್ದಾರಲ್ಲಾ ಅವರೇ ಈ ತಾಲ್ಲೂಕಿನ ಮುಖಂಡರು. ಅವರೇನ್ ಬೇಕಾದರೂ ಮಾಡಬಹುದು ನಮ್ಮ ಕೈಯ್ಯೊಳಗೇನಿದೆ? ನೀವು ಅವರ ಹತ್ರ ದಯಮಾಡಿಸಬಹುದಲ್ಲ? ಎಂದು ವ್ಯಂಗ್ಯವಾಗಿ ನುಡಿದನು.

ರಾಘವೇಂದ್ರನ ಮಾತುಗಳನ್ನು ಕೇಳಿ ಕರಿಯಪ್ಪನಿಗೆ ರಕ್ತ ಬಿಸಿಯಾಯಿತು. ಆದರೂ ಮರುಮತನಾಡದೆ ಹಿಂದಿರುಗಿ ಮೋಹನನ ಮನೆಗೆ ಹೋಗಿ, ನಡೆದ ವಿಚಾರವನ್ನು ಮೋಹನನಿಗೆ ವರದಿ ಮಾಡಿದನು. ತಾನೊಬ್ಬ ಶಾಸನ ಸಭೆಯ ಸದಸ್ಯನಾಗಿದ್ದೂ ಕೂಡ ತನ್ನನ್ನು ನಂಬಿದ ಕರಿಯಪ್ಪನಿಗೆ ಸಹಾಯಮಾಡುವ ಅವಕಾಶವಿಲ್ಲದುದುಕ್ಕಾಗಿ ಮೋಹನನು ವ್ಯಸನಪಟ್ಟನು. ಜಮೀನುಗಳ ಸರ್ವೆನಂಬರು ಗಳು ಶೇಕದಾರರಲ್ಲಿ ಸಿಕ್ಕುತ್ತವೆ ಎಂಬ ವಿಚಾರ ಮೋಹನನಿಗೆ ಗೊತ್ತಿತ್ತು. ಹೋಬಳಿಯ ಶೇಕದಾರರ ಬಳಿಗೆ ಹೋಗಿ ಸರ್ವೆನಂಬರನ್ನು ಪತ್ತೆ ಹಚ್ಚಿಕೊಂಡು ಬರಬೇಕೆಂದು ಅವನು ಕರಿಯಪ್ಪನಿಗೆ ಸೂಚಿಸಿದನು.

ಮರುದಿನ ಶೇಕದಾರರ ದರ್ಶನಕ್ಕಾಗಿ ಕರಿಯಪ್ಪನು ಪವಿತ್ರಪುರಕ್ಕೆ ಹೋದನು. ಶೇಕದಾರರು ಹೋಬಳಿಯ ಕೇಂದ್ರಸ್ಥಳದಲ್ಲಿ ವಾಸಮಾಡಬೇಕೆಂಬ ಸರ್ಕಾರದ ನಿಯಮವಿದ್ದಾಗ್ಯೂ ಅವರು ಆ ನಿಯಮಕ್ಕೆ ವಿರುದ್ಧವಾಗಿ ತಾಲ್ಲೂಕಿನ ಕೇಂದ್ರ ಪಟ್ಟಣವಾದ ಪವಿತ್ರಪುರದಲ್ಲಿ ವಾಸವಾಗಿದ್ದರು. ಶೇಕದಾರರ ಮನೆ ಪವಿತ್ರಪುರದ ಬಸ್ಸು ನಿಲ್ದಾಣದ ಸಮೀಪದಲ್ಲಿತ್ತು. ಆ ಮನೆಗೆ ಶೇಕದಾರರು ತಿಂಗಳಿಗೆ ಐವತ್ತು ರೂಪಾಯಿಗಳ ಬಾಡಿಗೆಕೊಡುತ್ತಿದ್ದರು. ಮನೆಯ ಸೋಫಾ, ರೇಡಿಯೋ, ಮೇಜು, ಬೆತ್ತದ ಕುರ್ಚಿಗಳು

ಹೂವಿನ ಕುಂಡಗಳು ಮುಂತಾದ ಸಾಮಾನುಗಳಿಂದ ಸೊಗಸಾಗಿ ಅಲಂಕೃತವಾಗಿತ್ತು. ಅಮಲ್ದಾರರ ಮನೆಯಲ್ಲಿಯೂ ಕೂಡ ಇಷ್ಟೊಂದು ಸಾಮಾನುಗಳಿರಲಿಲ್ಲ. ಕರಿಯಪ್ಪನು ಮನೆಯೊಳಗೆ ಹೋದವನು "ಕೇವಲ ನೂರ ಇಪ್ಪತ್ತು ರೂಪಾಯಿಗಳ ಸಂಬಳ ಬರುತ್ತಿರುವ ಸಣ್ಣ ಅಧಿಕಾರಿಯೊಬ್ಬನು ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಜೀವನ ನಡೆಸಲು ಹೇಗೆ ಸಾಧ್ಯ" ಎಂದು ಯೋಚಿಸುತ್ತಾ ಶೇಕದಾರರು ಕುಳಿತಿದ್ದ ಕೊಠಡಿಗೆ ಕಾಲಿಟ್ಟನು. ಶೇಕದಾರರು ಇನ್ನೊಬ್ಬ ಅರ್ಜಿದಾರನ ಹತ್ತಿರ ಮಾತನಾಡುತ್ತಿದ್ದರು. ಕರಿಯಪ್ಪನನ್ನು ನೋಡಿದ ಕೂಡಲೆ ಶೇಕದಾರರಿಗೆ ಸಿಟ್ಟು ಬಂತು. ಒಬ್ಬರ ಹತ್ತಿರ ಮಾತನಾಡುವಾಗ ಹೇಳದೆ ಕೇಳದೆ ಇನ್ನೊಬ್ಬರು ಬರುವುದು ಸಭ್ಯತೆಯ ಲಕ್ಷಣವಲ್ಲವೆಂದು ಅವರು ಕರಿಯಪ್ಪನಿಗೆ ಹೇಳಿದರು. ಬಹುಶಃ ತಮ್ಮ ಲಂಚದ ವ್ಯವಹಾರಕ್ಕೆ ಕರಿಯಪ್ಪನು ಅಡ್ಡಿಯಾಗುತ್ತಾನೆಂಬ ಭಾವನೆಯಿಂದ ಶೇಕದಾರರು ಆ ರೀತಿ ಹೇಳಿರಬೇಕೆಂದು ತೋರುತ್ತದೆ. ಕರಿಯಪ್ಪನು ಮನೆಯ ಹೊರಗಡೆ ಹೋಗಿ ರಸ್ತೆಯ ಪಕ್ಕದಲ್ಲಿ ನಿಂತುಕೊಂಡನು. ಕಾಲು ಘಂಟೆಯ ನಂತರ ಒಳಗಡೆ ಶೇಕದಾರರೊಡನೆ ಮಾತನಾಡುತ್ತಿದ್ದ ವ್ಯಕ್ತಿ ಹೊರಗಡೆ ಬಂದನು. ಆ ವ್ಯಕ್ತಿಯನ್ನು ಹಿಂಬಾಲಿಸಿ ಶೇಕದಾರರ ಜವಾನನೂ ಬರುತ್ತಿದ್ದನು.

ಶೇಕದಾರರ ಜವಾನನು ಆ ವ್ಯಕ್ತಿಯನ್ನು ಕುರಿತು "ಏನ್ ಸ್ವಾಮೀ ನಮ್ಮ ಸಾಹೇಬರೀಗೇ ಕೊಟ್ಟು ಹೋತೀರಲ್ಲ. ಬಡವನ್ನ ಮರತೇ ಬಿಟ್ರಿ. ನಮ್ಮಂತ ಬಡಪಾಪಿ ಪರದೇಶಿಗಳ ಮರಿಬಾರ್ದು ಸ್ವಾಮೀ. ಕಾಫಿಖರ್ಚಿಗಾರೂ ಕೊಟ್ಟು ಹೋಗಿ" ಎಂದನು. ಆ ವ್ಯಕ್ತಿ ಸಿಟ್ಟಿನಿಂದ ಜವಾನನ್ನು ಕುರಿತು.

"ಆಫೀಸರು, ನೌಕರರು, ಜವಾನರು, ಯಲ್ಲಾ ಸೇರಿ ಜನರನ್ನ ಹುರಿಮುಕೊಂಡು ತಿಂದು ಬಿಡಿ. ಸರ್ಕಾರಿ ಕೆಲ್ಸಾ ಮಾಡೋರಿಗೆ ಸಂಬಳ, ಸಂಬಳದ ಮ್ಯಾಲೆ ಗಿಂಬಳ, ಅದರ ಮೇಲೆ ಪೆನ್ಸನ್ ನಮಗೇನದೆ? ಅವರಿಗೆ ಇವರಿಗೆ ಕೊಟ್ಟು ತಲೆ ಬೋಳಿಸುಕೊಳ್ಳೂದು ಕರ್ಮ ಆಗ್ಯದೆ" ಎಂದು ಹೇಳಿದನು.

ಆ ವ್ಯಕ್ತಿ ಕರಿಯಪ್ಪನ ಕಡೆ ತಿರುಗಿ "ನಿಮ್ಮ ಹೆಸರೇನೋ ನಂಗೊತ್ತಿಲ್ಲ. ನೀವು ಕಾಂಗ್ರೆಸ್ನೋರು ಅಂತ ಕಾಣ್ತದೆ. ಏನ್ರೀ ಇದು ಸುಲಿಗೆ? ಸರ್ಕಾರಿ ಅಧಿಕಾರಿಗಳ ಸುಲಿಗೆ, ಈಚೆಗೆ ಪುಡಾರಿಗಳ ಸುಲಿಗೆ. ಈ ಸುಲಿಗೇನೆಲ್ಲಾ, ಹ್ಯಾಂಗ್ರಿ ಸಹಿಸೋದು? ನೀವ್ ರಾಜಕಾರಣಿಗಳು ಉಪನ್ಯಾಸ ಮಾಡ್ತೀರಲ್ಲಾ. ನನ್ನ ಕಥೆ ಸ್ವಲ್ಪ ಕೇಳ್ರಿ ನಾನು ಸಾಲ್ಮಕ್ಕಿ ಊರಿನವ. ನನ್ನ ಹೆಸರು ರಂಗಪ್ಪ ಅಂತ. ಐದು ವರ್ಷದ ಕೆಳಗೆ ನಾಲ್ಕು ಎಕರೆ ಭೂಮಿಗೆ ನಾ ದರಖಾಸ್ತು ಕೊಟ್ಟಿದ್ದೆ. ಈವರಿಗೆ ನಾನೂರು ರೂಪಾಯಿ ನನ್ನ ಕೈಬಿಟ್ಟು ಹೋಗ್ಯಾತು. ಆದರೂ ಇನ್ನೂ ಭೂಮಿ ಮಾತ್ರ ನನ್ನ ಕೈಸೇರಿಲ್ಲ. ಕಂಬಕ್ಕೆಲ್ಲಾ ಕೈ ಮುಗಿದು ಕೈ ಬೆಚ್ಚಗೆ ಮಾಡಿದ್ದಾತು. ನನ್ನ ರಿಕಾರ್ಡು ಶೇಕ್ದಾರ್ರಿಂದ ಡೆಪ್ಟಿಕಮಿಷನ್‌ರಿಂದ ಶೇಕ್ದಾರ್ರಿಗೆ ಆತ್ಲಾಗಿಂದ ಇತ್ಲಾಗಿ, ಇತ್ಲಾಗಿಂದ ಅತ್ಲಾಗಿ ಹನ್ನೆರಡು ಸಾರಿ ಓಡ್ಯಾಡಿದೆ. ಈಗ ಮತ್ತೆ ಶೇಕ್ದಾರ್ರಿಗೆ ವಾಪಸು ಬಂದಿದೆ. ಕೆಲವರು ಗುಮಾಸ್ತರಿಗೆ ನೋಡಿ

ನಡಕೊಳ್ಳದೆಯಿದ್ರೆ ಏನಾರೂ ಒಂದು ಸಣ್ಣ ಕೊಕ್ಕೆ ಹಾಕಿ ರೆಕಾರ್ಡ್ ಹಿಂದಕ್ಕೆ ವಗಾಸ್ತಾರೆ. ನಮ್ಮ ದೇಶದ ಅಧಿಕಾರಿಗಳಲ್ಲಿ ಕೆಲವರಿಗೆ ಜನಗಳ ಮ್ಯಾಲೆದಯಾನೇ ಇಲ್ಲ. ಅವರ ಸಂಬಳ ಅವರ ಗಿಂಬಳ, ಅವರ ಷೋಕಿ, ಅವರ ಜೋಕೆ ಇವೇ ಅವರಿಗೆ ಹೆಚ್ಚು ಜನ ಕಟ್ಟಿಕೊಂಡು ಅವರಿಗೆ ಏನಾಗ್ಬೇಕು. ನಾ ಹೈಸ್ಕೂಲು ಸೆಕೆಂಡ್ ಇಯರ್‌ವರೀಗೆ ಓದಿದವ. ನಂಗೇ ಹೀಗಾದ್ರೆ ವಿದ್ಯೆಯಿಲ್ಲದವರ ಗತಿ ಏನ್ ನೀವೇ ಹೇಳಿ"

"ರಂಗಪ್ಪನವರೇ, ನನ್ನ ಹೆಸರು ಕರಿಯಪ್ಪ ಅಂತ. ನಾ ಪಂಜ್ರೊಳ್ಳಿ ಊರಿನವ. ನೀವು ಮಾತನಾಡುವ ಧಾಟಿ ನೋಡಿದರೆ ಜಗತ್ತೆಲ್ಲಾ ಕೆಟ್ಟು ಹೋಗಿದೆ ಅಂತ ನಿಮ್ಮ ಭಾವನೆ ಇರುವಂತೆ ತೋರುತ್ತದೆ. ಸಾರ್ವಜನಿಕರಲ್ಲಿ ಹೇಗೆ ಒಳ್ಳೆಯವರು ಮತ್ತು ಕೆಟ್ಟವರು ಇರುತ್ತಾರೋ ಅಧಿಕಾರಿಗಳಲ್ಲೂ ಒಳ್ಳೆಯವರೂ ಇರ್ತಾರೆ ಕೆಟ್ಟವರೂ ಇರ್ತಾರೆ. ಒಬ್ಬಿಬ್ಬರು ಸರ್ಕಾರಿ ನೌಕರರ ತಪ್ಪಿಗೆ ನೀವು ಕಾಂಗ್ರೆಸ್ಸನ್ನು ಯಾಕೆ ದೂರುತ್ತೀರಿ? ಕೆಲವು ಸಂದರ್ಭಗಳಲ್ಲಿ ಸಕಾರಣವಾಗಿ ಕಾಗದ ಪತ್ರಗಳು ಫೈಸಲಾಗುವುದು ತಡವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಅಧಿಕಾರಿಗಳಲ್ಲಿ ಅಸಡ್ಡೆಯಿಂದ ನಿಧಾನವಾಗುತ್ತದೆ. ಕಾಂಗ್ರೆಸ್ ಮಂತ್ರಿಗಳು ಕಷ್ಟಪಟ್ಟು ದುಡಿಯುತ್ತಿದ್ದಾರೆ. ಸರ್ಕಾರವೆಲ್ಲಾ ಸಾರ್ವತ್ರಿಕವಾಗಿ ಕೆಟ್ಟು ಹೋಗಿದೆ ಅಂದರೆ ಮೂರ್ಖತನವಾಗುತ್ತದೆ. ಕ್ಷಮಿಸಿ ರಂಗಪ್ಪನವರೇ"

"ಏನ್ರೀ ಕರಿಯಪ್ಪಾ ಎಷ್ಟು ಸುಲಭವಾಗಿ ನನ್ನ ಬಾಯಿ ಮುಚ್ಚಿಸಬೇಕು ಅಂತ ಮಾಡ್ತೀರಿ ನೀವು. ನಿಮಗೇನಾದ್ರು ಜನರ ಕಷ್ಟ ತಿಳಿದಿದ್ದರೆ ನೀವು ಈ ರೀತಿ ಮಾತಾಡ್ತಾ ಇರಲಿಲ್ಲ. ಸರ್ಕಾರಿ ನೌಕರರು ಪ್ರಜೆಗಳ ಖರ್ಚಿನಾಗೆ ಓದಿಕೊಂಡು. ಪ್ರಜೆಗಳ ದುಡ್ಡಿನಾಗೆ ಸಂಬಳ ತಗೋಳ್ಳೋರು ಅವರು ಪ್ರಜೆಗಳಿಗೆ ಪೋಷಕರು ಇದ್ಹಾಗೆ ಇರ್ಬೇಕು. ಈ ತಾಲೋಕ್ನಾಗೆ ಎಷ್ಟು ಜನ ಅಧಿಕಾರಿಗಳು ಪ್ರಜೆಗಳ ಪೋಷಕರ ಹಾಗೆ ಇದ್ದಾರೆ? ಹೇಳ್ರಿ. ವಿದ್ಯೆ ಇಲ್ಲದ ಬಡವ ಒಬ್ಬ ದರ್ಖಾಸ್ತು ಕೊಟ್ಟ ಭೂಮಿ ಪಡೆಯೂದು ಎಷ್ಟು ಕಷ್ಟ ಅಂತ ನೀವು ತಿಳಿದುಕೊಂಡೀರಾ? ಸರ್ವೆ ನಂಬರು ಪತ್ತೆ ಮಾಡಬೇಕಾದರೆ ಶಾನುಭೋಗರಿಗೆ ಅಥವಾ ಶೇಕ್ದಾರ್ರಿಗೆ ಕೈ ಬೆಚ್ಚಗೆ ಮಾಡ್ಬೇಕು. ಅರ್ಜಿ ಬರೆಯೋರಿಗೆ ಫೀಜು ಕೊಡ್ಬೇಕು. ಅಮಲ್ದಾರರಿಗೆ ಕಲ್ಲಪ್ಪನಂಥ ಪುಡಾರಿ ಕೈಲಿ ಹೇಳಿಸಬೇಕು. ಆನಂತರ ದರಖಾಸ್ತು ಗುಮಾಸ್ತರನ್ನ ಸರಿಮಾಡಿಕೊಳ್ಳಬೇಕು. ರಿಕಾರ್ಡು ಮೇಲುಗಡೆ ಆಫೀಸಿಗೆ ಹೋದರೆ ಅಲ್ಲಿದ್ದ ದರಖಾಸ್ತ್ ಗುಮಾಸ್ತರನ್ನು ನೋಡಿ ನಡೆದುಕೊಳ್ಳಬೇಕು. ಪವಿತ್ರಪುರದ ಅಮಲ್ದಾರರ ಆಫೀಸಿನಲ್ಲಿ ನಡೆಯತಕ್ಕ ಕತೆ ಇದು. ಅಲ್ಲಿ ಐದು ಅಥವಾ ಹತ್ತು ರೂಪಾಯಿಗಳ ಲಂಚ ಆದರೆ ಪವಿತ್ರಪುರದ ಪೋಲಿಸ್ ಇನ್‌ಸ್ಪೆಕ್ಟರ ಆಫೀಸಿನಲ್ಲಿ ನೂರು ರೂಪಾಯಿನಿಂದ ಹಿಡಿದು ಸಾವಿರದವರೆಗೆ ಲಂಚ. ಅಲ್ಲಿ ಫಿರ್ಯಾಧಿಗೂ ಕ್ಷೌರ, ಅಪರಾಧಿಗೂ ಕ್ಷೌರ. ಎಲ್ಲಾ ಅಧಿಕಾರಿಗಳೂ ಕೆಟ್ಟವರು ಅಂತ ನಾ ಹೇಳೂದಿಲ್ಲ. ಬಹಳ ಜನ ಒಳ್ಳೆಯ ಅಧಿಕಾರಿಗಳೂ ಇದ್ದಾರೆ; ಒಳ್ಳೆಯ ರಾಜಕಾರಣಿಗಳೂ ಇದ್ದಾರೆ. ಆದರೆ ನಂಗೇನಾದರೂ ಸರ್ವಾಧಿಕಾರ ಸಿಕ್ಕಿದರೆ ಪವಿತ್ರಪುರದ ಕೆಲವು ಲಂಚಕೋರ

ಅಧಿಕಾರಿಗಳನ್ನೂ, ರಂಗನಾಥ ಮತ್ತು ಕಲ್ಲಪ್ಪನಂಥ ರಾಜಕಾರಣಿಗಳನ್ನೂ ಗಲ್ಲಿಗೇರಿಸುತ್ತಿದ್ದೆ. ನಿಮ್ಮ ಮಂತ್ರಿಗಳಿಗೆ ಕಣ್ಣಿಲ್ಲವೇನ್ರೀ? ಅವರ್‍ಯಾಕೆ ಸುಮ್ಮನೆ ಇದಾರೆ."

"ರಂಗಪ್ಪನವರೇ, ಆಡಳಿತದಲ್ಲಿ ಲಂಚ ಇಲ್ಲ ಎಂದು ನಾನು ಹೇಳುವುದಿಲ್ಲ. ಲಂಚವನ್ನು ಸಂಪೂರ್ಣವಾಗಿ ನಿರ್ಮೂಲ ಮಾಡುವುದು ಸಾಧ್ಯವಿಲ್ಲ. ಲಂಚ ಎನ್ನುವುದು ಇಡೀ ಸಮಾಜವನ್ನಾವರಿಸಿರುವ ಅಸತ್ಯ ಜೀವನದ ಶಿಶು. ಸಾರ್ವಜನಿಕರು. ಅದರಲ್ಲಿಯೂ ಜೀವನದ ನಾನಾ ಕ್ಷೇತ್ರಗಲ್ಲಿ ಮುಖಂಡರೆನಿಸಿಕೊಂಡಿದ್ದವರು ನಿರ್ಮಲವಾದ ಜೀವನವನ್ನು ಸಾಗಿಸುತ್ತಿದ್ದರೆ ಲಂಚ ತನ್ನಷ್ಟಕ್ಕೆ ತಾನೆ ಕಡಿಮೆಯಾಗುತ್ತದೆ. ಕೆಲವರು ಮಂತ್ರಿಗಳು ಎಷ್ಟೇ ನಿಸ್ಪೃಹರಾಗಿದ್ದರೂ ಇಂದಿನ ಪರಿಸ್ಥಿತಿಯಲ್ಲಿ ಅವರು ಲಂಚವನ್ನು ತಡೆಗಟ್ಟುವುದು ಬಹಳ ಕಷ್ಟ. ಲಂಚವನ್ನು ಕಂಡು  ಹಿಡಿಯುವುದೂ ಸುಲಭವಲ್ಲ. ಕೊಟ್ಟವರು ಹೇಳುವುದಿಲ್ಲ; ತೆಗೆದುಕೊಂಡವರು ತಿಳಿಸುವುದಿಲ್ಲ. ಆದ್ದರಿಂದ ರುಜುವಾತ್ ಮಾಡುವುದು ಬಹಳ ಕಷ್ಟ. ಒಮ್ಮೊಮ್ಮೆ  ಸಾರ್ವಜನಿಕರೂ ಸಹ ಪ್ರಾಮಾಣಿಕ ಅಧಿಕಾರಿಗಳ ಮೇಲೆ ದೂರನ್ನು ಹೇಳುತ್ತಾರೆ. ಅಧಿಕಾರಿಗಳಲ್ಲೂ ಎಷ್ಟೊ ಜನ ಒಳ್ಳೆಯವರಿದ್ದಾರೆ. ಹಿಟ್ಟೂ ಒಂದೇ ಬೂದಿಯೂ  ಒಂದೇ ಅನ್ನುವ ರೀತಿಯಲ್ಲಿ ಮಾತನಾಡಬಾರದು" ಎಂದು ಕರಿಯಪ್ಪನು ಹೇಳಿ ಶೇಕದಾರರ ಮನೆಯೊಳಗೆ ಹೋದನು. ರಂಗಪ್ಪನೂ, ಕರಿಯಪ್ಪನೂ, ಮಾತನಾಡುತ್ತಿದ್ದಾಗ ಜವಾನನು ಹೇಳದೆ ಕೇಳದೆ ಎಲ್ಲಿಯೋ ಜಾರಿ ಹೋಗಿದ್ದನು.

ಕರಿಯಪ್ಪನು ಶೇಕದಾರರ ಮನೆಗೆ ಹೋಗಿ ಅವರಿಗೆ ನಮಸ್ಕರಿಸಿ ತಾನು ಬಂದ ಉದ್ದೇಶವನ್ನು ಅವರಿಗೆ ಸಂಕ್ಷಿಪ್ತವಾಗಿ ತಿಳಿಸಿದನು. ಶೇಕದಾರರು ತಮ್ಮ ಮನಸ್ಸಿನಲ್ಲಿಯೇ "ಇನ್ನೊಬ್ಬ ಗಿರಾಕಿ, ಇನ್ನೊಂದು ಹತ್ತು ರೂಪಾಯಿ ನೋಟು" ಎಂದು ಹಿಗ್ಗಿದರು. ಅವರು ಕರಿಯಪ್ಪನನ್ನು ಕುರಿತು "ಏನ್ರೀ, ನಿಮಗೆ ಸರ್ವೆನಂಬರು ಬೇಕಾಗಿದ್ದರೆ ಶಾನುಭೋಗರ ಹತ್ತಿರ ಹೋಗುವ ಬದಲು ನನ್ನ ಬಳಿ ಯಾಕೆ ಬಂದಿರಿ? ನಿಮ್ಮ ಕಾಂಗ್ರೆಸ್ ಸರ್ಕಾರದವರೇ ಯಾವ್ಯಾವ ಕೆಲಸ ಮಾಡಬೇಕು ಅಂತ ನಿಗದಿ ಮಾಡಿದ್ದಾರೆ. ಸರ್ವೆನಂಬರ್ ಹುಡುಕುವುದು ನನ್ನ ಡ್ಯೂಟಿಯಲ್ಲ. ಅದನ್ನು ಹುಡುಕುವುದೂ ಸುಲಭವಲ್ಲ. ಒಂದು ಘಂಟೆ ಹಿಡಿಯುತ್ತದೆ. ನಾನೇ ಹುಡುಕಬೇಕು ಅಂತ ಆದರೆ ನನಗೆ ಎಕ್ಸ್‌ಟ್ರಾ ಕೆಲಸ ಆಗುತ್ತದೆ ಎಕ್ಸ್‌ಟ್ರಾ ಕೆಲಸಕ್ಕೆ ಎಕ್ಸ್‌ಟ್ರಾ ರೆಮ್ಯುನರೇಶನ್ ಗೊತ್ತಾಯ್ತಲ್ಲ? ಎಂದು ಹೇಳಿದನು.

"ಏನ್ ಶೇಕ್ದಾರ್ರೆ, ನನ್ನಂತಹ ಕಾಂಗ್ರೆಸ್ಸಿನವನ ಹತ್ತಿರವೇ ಲಂಚ ಕೇಳ್ತಿರಲ್ಲಾ, ನಿಮ್ಮ ಧೈರ್ಯ ಮೆಚ್ಚಬೇಕು"

"ನೀವೇನ್ ಹುಲಿ ಕಟ್ಟಿದ್ದಿರೊ ಕರಡಿ ಕಟ್ಟಿದ್ದಿರೋ. ನಿಮ್ಮ ಬಂಡವಾಳ ನಮಗೆ ಗೊತ್ತಿಲ್ಲ ಅಂತ ಮಾಡಿದ್ದಿರೇನು? ನಿಮ್ಮ ಕಾಂಗ್ರೆಸ್  ಮುಖಂಡರು ಎಲ್ಲಾ ಸತ್ಯವಂತರು ಅಂತ  ಮಾಡಿದ್ದಿರೇನು? ನಿಮ್ಮ ಮುಖಂಡರು ರಂಗನಾಥಪ್ಪನವರು ಲಂಚದಿಂದ ಲಕ್ಷಾಧಿಪತಿಯಾಗಿದ್ದಾರೆ. ಕಲ್ಲಪ್ಪನವರು ಲಂಚದ ಸೌಧವನ್ನೇ ನಿರ್ಮಿಸಿದ್ದಾರೆ. ನಮ್ಮಂತಹವರಿಗೆ  ನೀವು ವೇದಾಂತ ಹೇಳ್ತಾ ಇದ್ದೀರಿ. ನಿಮ್ಮ ಕೆಲಸ ಆಗಬೇಕು ಅಂತ

ಕಂಡರೆ ಕೊಡಿ. ಇಲ್ಲವಾದರೆ ಬಿಡಿ. ನಿಮ್ಮ ಮಂತ್ರಿಗಳೇ ಇದ್ದಾರಲ್ಲ ಅವರ ಹತ್ತಿರವೇ ಹೋಗಿ, ನೀವು ಮಂತ್ರಿಗಳ ಹತ್ತಿರ ಹೋದರೂ ನಿಮ್ಮ ರಿಕಾರ್ಡು ನನ್ನ ಹತ್ತಿರವೇ ಬರಬೇಕು, ಓ ಅಲ್ಲಿ ನೋಡಿ, ಟೇಬಲ್ ಮೇಲೆ ಒಂದು ಕಟ್ಟಿದೆಯಲ್ಲಾ ಆಕಟ್ಟಿನಲ್ಲಿರುವ ಅರ್ಜಿಗಳೆಲ್ಲವೂ ಎರಡು ವರ್ಷಗಳ ಹಿಂದೆ ನಿಮ್ಮ ಮಂತ್ರಿಗಳಿಗೆ ಕೊಟ್ಟ ಅರ್ಜಿಗಳು. ಆ ಅರ್ಜಿಗಳು ಎರಡು ವರ್ಷಗಳಿಂದ ತಾಲ್ಲೂಕ್ ಕಛೇರಿಯಲ್ಲಿ ಕೊಳೆಯುತ್ತಿದ್ದವು. ಮೊನ್ನೆ ಮಂತ್ರಿಗಳು ತಾಲ್ಲೂಕ್ ಕಛೇರಿಗೆ ಇನ್‌ಸ್ಪೆಕ್ಷನ್ನಿಗೆ ಬರುತ್ತಾರೆಂದು ವದಂತಿ ಹಬ್ಬಿದ್ದರಿಂದ ತಾಲ್ಲೂಕ್ ಕಛೇರಿಯಿಂದ ಆ ಅರ್ಜಿಗಳ ಕಟ್ಟನ್ನು ನನಗೆ ಕಳುಹಿಸಿದ್ದಾರೆ. ತಾಲ್ಲೂಕ್ ಆಫೀಸ್ ಗುಮಾಸ್ತರು ನಿಮ್ಮ ಮಂತ್ರಿಗಳಿಗಿಂತ ಬುದ್ಧಿವಂತರು

"ಶೇಕದಾರರೇ ನಿಮಗೆ ಏಕ್ಸ್‌ಟ್ರಾ ರೆಮ್ಯುನರೇಷನ್ ಕೊಡಬೇಕು ಅಂತ ಆದರೆ ಕೊಡ್ತೀನಿ. ಆದರೆ ಕೊಡುವುದಕ್ಕಿಂತ ಮುಂಚಿತವಾಗಿ ನಿಮ್ಮ ಹತ್ತಿರ ಸ್ವಲ್ಪ ಮನಸ್ಸು ಬಿಚ್ಚಿ ಮಾತನಾಡಬೇಕು ಅಂತ ಅನಿಸುತ್ತದೆ. ನಿಮಗೆ ಕೇಳುವ ತಾಳ್ಮೆ ಇದ್ದರೆ ನಾನು ಹೇಳ ಬಯಸುತ್ತೇನೆ."

"ಓಹೋ ಆಗಲಿ, ಅಗತ್ಯವಾಗಿ ಹೇಳಬಹುದು."

"ನೋಡಿ ಶೇಕ್ದಾರರೇ, ನೀವು ಗ್ರಾಜ್ಯುಯೇಟ್ ಅಂತ ಕೇಳಿದ್ದೆ. ನಿಮಗೆ ನೂರ ಇಪ್ಪತ್ತೈದು ರೂಪಾಯಿಗಳ ಸಂಬಳ ಬರ್‍ತಾ ಇದೆ ಅಂತ ತೋರುತ್ತದೆ. ಲಕ್ಷಾಂತರ ಮಂದಿ ಬಡವರಿಗಿಂತ ನೀವು ಸುಖವಾಗಿದ್ದೀರೆಂದು ನೀವು ಒಪ್ಪಬೇಕಾಗುತ್ತದೆ. ಹೀಗಿದ್ದರೂ ನೀವು ನಮ್ಮಂತಹ ಗರೀಬರಿಂದ ಹಣ ಕೇಳುವುದು ಧರ್ಮವೇ? ದೇವರು ಮೆಚ್ಚುತ್ತಾನೆಯೇ? ದಯವಿಟ್ಟು ನೀವೇ ಹೇಳಿ.

"ಕರಿಯಪ್ಪನವರೇ, ನೀವು ದೇವರು ಧರ್ಮಗಳ ವಿಚಾರವನ್ನು ಪ್ರಸ್ತಾಪಿಸಿದಿರಿ. ನೀವು ಹೇಳಿದ್ದಕ್ಕೆ ನಾನು ಜವಾಬನ್ನು ಕೊಡಲೇಬೇಕು. ಬನ್ನಿ ಕುಳಿತುಕೊಳ್ಳಿ. ನೀವು ಆತ್ಮೀಯವಾಗಿ ಹೇಳಿದ ಮಾತುಗಳಿಗೆ ನಾನು ಆತ್ಮೀಯವಾಗಿ ಮನಸ್ಸು ಬಿಚ್ಚಿ ಜವಾಬನ್ನು ಹೇಳುತ್ತೇನೆ. ನಿಮ್ಮಂತಹ ಕಾಂಗ್ರೆಸ್ಸಿನವರು ನಮ್ಮಂತಹ ಬಡ ನೌಕರರ ಕಷ್ಟ ಸುಖಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ಒಂದರ್ಧ ಗಂಟೆ ಈ ಬಗ್ಗೆ ಕಳೆದರೂ ಚಿಂತೆಯಿಲ್ಲ. ನೀವು ತಾಳ್ಮೆಯಿಂದ ಕೇಳಿ. ನೀವು ಹೇಳಿದ ಹಾಗೆ ನಾನು ಬಿ. ಎ. ಪಾಸು ಮಾಡಿದ್ದೇನೆ. ಕಾಲೇಜಿನಲ್ಲಿ ಓದುತ್ತಿದ್ದಾಗ ಆದರ್ಶ ಜೀವನ ನಡೆಸಬೇಕೆಂದು ನಾನು ಸಂಕಲ್ಪ ಮಾಡಿದ್ದೆ. ಕಾಲೇಜು ಬಿಟ್ಟ ನಂತರ ಕೆಲಸಕ್ಕಾಗಿ ಒದ್ದಾಡಿ, ಹಿಡಿಯಬಾರದವರ ಕಾಲನ್ನು ಹಿಡಿದು, ಪ್ರೊಬೇಶನರಿ ರೆವೆನ್ಯೂ ಇನ್‌ಸ್ಪೆಕ್ಟರ ಕೆಲಸವನ್ನು ಸಂಪಾದಿಸಿದೆ. ಪ್ರೊಬೇಶನರಿ ಅವಧಿಯಲ್ಲಿ ಮತ್ತು ನಂತರ ಕೆಲವು ಕಾಲ ನನಗೆ ಬರುತ್ತಿದ್ದ ಜುಜುಬಿ ಸಂಬಳದಲ್ಲಿ ಸತ್ಯವಂತನಾಗಿ ಜೀವನ ಸಾಗಿಸುತ್ತಿದ್ದೆ. ಪ್ರೊಬೇಶನರಿ ಅವಧಿ ಮುಗಿದನಂತರ ನನ್ನನ್ನು ಸೋಮಲಾಪುರ ತಾಲ್ಲೂಕಿಗೆ ವರ್ಗಮಾಡಿದರು. ಆ ಸಮಯದಲ್ಲಿ ಸೋಮಲಾಪುರ ತಾಲ್ಲೂಕಿನಲ್ಲಿ ದೊಡ್ಡ ನೀರಾವರಿ ಕಾಮಗಾರಿ ನಡೆಯುತ್ತಿತ್ತು. ಅದು ಸುಮಾರು ಇಪ್ಪತ್ತು ಕೋಟಿ ರೂಪಾಯಿಗಳ ಕಾಮಗಾರಿ. ಆ ಕಾಮಗಾರಿಯಲ್ಲಿ ಕೆಲಸ ಮಾಡುತ್ತಿದ್ದ

ಅಸಿಸ್ಟೆಂಟ್ ಇಂಜಿನೀಯರೊಬ್ಬರು ನನ್ನ ಆಪ್ತ ಸ್ನೇಹಿತರಾಗಿದ್ದರು. ಅವರು ಆದರ್ಶ ವ್ಯಕ್ತಿ. ದೇವರ ಹಾಗಿದ್ದವರು. ಬಹಳ ಸತ್ಯವಂತರು. ಅವರು ಬಹಳ ಕಟ್ಟುನಿಟ್ಟಾಗಿ ದಕ್ಷತೆಯಿಂದ ಕೆಲಸಮಾಡುತ್ತಿದ್ದರು. ಕಂಟ್ರಾಕ್ಟರುಗಳನ್ನು ಮನೆಯ ಹತ್ತಿರ ಸೇರಿಸುತ್ತಿರಲಿಲ್ಲ. ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ನೀತಿ ನಿಯಮಗಳಿಗನುಗುಣವಾಗಿ ಕೆಲಸಮಾಡುತ್ತಿದ್ದರು. ಆ ಕಾಮಗಾರಿಯ ಮೇಲ್ವಿಚಾರಣೆಯ ದೊಡ್ಡ ಇಂಜಿನೀಯರು ತಿಂಗಳು ಒಂದಕ್ಕೆ ಒಂದು ಸಾವಿರದ ನಾನೂರುಚಿಲ್ರೆ ರೂಪಾಯಿಗಳ ಸಂಬಳವನ್ನು ಪಡೆಯತಕ್ಕ ಅಧಿಕಾರಿಯಾಗಿದ್ದರು. ಅವರು ಬಕಪಕ್ಷಿಯಂತಿದ್ದರು. ಅವರಿಗೆ ಸಂಬಳದ ಜೊತೆಗೆ ಪ್ರತಿ ತಿಂಗಳಲ್ಲೂ ಸುಮಾರು ಐದು ಸಾವಿರ ರೂಪಾಯಿಗಳವರೆಗೆ ಲಂಚದ ವರಮಾನವಿತ್ತು. ಅವರು ಮಿತಿಮೀರಿ ಕುಡಿಯುತ್ತಿದ್ದರು. ಅವರ ಕೈಕೆಳಗೆ ಕೆಲಸಮಾಡುತ್ತಿದ್ದ ಎಕ್ಸಿಕ್ಯೂಟಿವ್ ಇಂಜಿನೀಯರುಗಳೂ, ಅಸಿಸ್ಟೆಂಟ್ ಇಂಜಿನೀಯರುಗಳೂ, ಓವರ್ಸಿ ವಗ್ಯೆರೆಯವರೂ ಅವರ ಲಂಚದ ವ್ಯವಹಾರದಲ್ಲಿ ಸಹಕರಿಸಬೇಕಾಗಿತ್ತು. ಲಂಚಕೋರ ಅಧಿಕಾರಿಗಳೂ, ಕಂಟ್ರಾಕ್ಟರುಗಳೂ ಸಾಮಿಲಾಗಿ ಸಹಸ್ರಾರು ರೂಪಾಯಿಗಳನ್ನು ಕೊಳ್ಳೆಹೊಡೆಯುತ್ತಿದ್ದರು. ನನ್ನ ಸ್ನೇಹಿತರು ಮಾತ್ರ ಆ ಕೂಟಕ್ಕೆ ಸೇರಿರಲಿಲ್ಲ. ಪ್ರಾಮಾಣಿಕರಾಗಿದ್ದುದರಿಂದ ಅವರನ್ನು ಕಂಡರೆ ಅವರ ಸಹೋದ್ಯೋಗಿಗಳಿಗೂ ಆಗುತ್ತಿರಲಿಲ್ಲ: ಕಂಟ್ರಾಕ್ಟರುಗಳಿಗೂ ಆಗುತ್ತಿರಲಿಲ್ಲ. ಅವರ ಸಹೋದ್ಯೋಗಿಗಳು ಅವರನ್ನು ಕೆಲಸಕ್ಕೆ ಬಾರದ ಎಳೆ ನಿಂಬೆಕಾಯಿ ಅನ್ನುತ್ತಿದ್ದರು.

"ಒಂದು ದಿನ ಮೇಲ್ವಿಚಾರಣೆಯ ದೊಡ್ಡ ಇಂಜಿನೀಯರು ನನ್ನ ಸ್ನೇಹಿತರನ್ನು ಕರೆದು ನಿಯಮಗಳಿಗೆ ವಿರುದ್ಧವಾಗಿ ಟೆಂಡರ್ ಕರೆಯದೆ ಕಂಟ್ರಾಕ್ಟರ್ ಒಬ್ಬರಿಗೆ ಒಂದು ಕೆಲಸವನ್ನು ಕೊಡಬೇಕೆಂದು ಹೇಳಿದರು. ನನ್ನ ಸ್ನೇಹಿತರು ಬರಹ ಮೂಲಕ ಆರ್ಡರು ಕೊಟ್ಟರೆ ಕಂಟ್ರಾಕ್ಟರಿಗೆ ಕೆಲಸ ಕೊಡಲು ಅಡ್ಡಿಯಿಲ್ಲವೆಂದರು. ದೊಡ್ಡ ಇಂಜಿನೀಯರಿಗೆ ದೊಡ್ಡ ಸಿಟ್ಟೇ ಬಂತು. ಒಂದು ತಿಂಗಳೊಳಗಾಗಿ ಆ ದೊಡ್ಡ ಇಂಜಿನೀಯರು ನನ್ನ ಸ್ನೇಹಿತ ಸಣ್ಣ ಇಂಜಿನೀಯರ ಮೇಲೆ ನೂರಾರು ದೂರುಗಳು ಬರುವಂತೆ ಏರ್ಪಾಡು ಮಾಡಿಬಿಟ್ಟರು. ಅನಂತರ ಆ ದೂರುಗಳ ಆಧಾರದ ಮೇಲೆ ನನ್ನ ಸ್ನೇಹಿತರು ನಾಲಾಯಕ್ ಎಂದು ಅವರ ಎರಡು ಇಂಕ್ರಿಮೆಂಟನ್ನು ಸರ್ಕಾರದವರು ನಿಲ್ಲಿಸಿದರು. ಆ ದೊಡ್ಡ ಇಂಜಿನೀಯರು ಅಷ್ಟಕ್ಕೆ ತೃಪ್ತರಾಗದೆ. ಪ್ರತಿವರ್ಷವೂ ತಮ್ಮ ಕೈಕೆಳಗಿನ ಅಧಿಕಾರಗಳ ವಿಚಾರದಲ್ಲಿ ಬರತಕ್ಕ ಗುಪ್ತ ವರದಿಯಲ್ಲಿ ನನ್ನ ಸ್ನೇಹಿತರು ಲಂಚಕೋರರರೆಂದೂ, ಜಗಳಗಂಟರೆಂದೂ ಬರೆದಿಟ್ಟರು. ಇದಾದ ಕೆಲವು ತಿಂಗಳ ನಂತರ ದೊಡ್ಡ ಇಂಜಿನೀಯರ ಶಿಫಾರಸ್ಸಿನ ಮೇರೆಗೆ ಸರ್ಕಾರದವರು ನನ್ನ ಸ್ನೇಹಿತ ಅಸಿಸ್ಟೆಂಟ್ ಇಂಜಿನೀಯರನ್ನು ಡಿಗ್ರೇಡ್ ಮಾಡಿದರು. ಇದರ ಸತ್ಯವಂತರಾದ ನನ್ನ ಸ್ನೇಹಿತರಿಗೆ ಸಿಕ್ಕ ಪ್ರತಿಫಲ."

"ಆಮೇಲೆ ಏನಾಯಿತು ಹೇಳಿ ಶೇಕ್ದಾರರೇ"

"ಇನ್ನು ನನಗೆ ದೊರೆತ ಪ್ರತಿಫಲದ ವಿಚಾರವನ್ನು ಹೇಳುತ್ತೇನೆ ಕೇಳಿ. ನಾನು ಸೋಮಲಾಪುರಕ್ಕೆ ಹೋದನಂತರ ಸುಮಾರು ಒಂದು ವರ್ಷದಲ್ಲಿ ನಮ್ಮ ಅಮಲ್ದಾರರಿಗೆ ವರ್ಗವಾಯಿತು. ಅವರು ಪ್ರಾಮಾಣಿಕ ಅಧಿಕಾರಿ ಸಾಕಾದಷ್ಟು ದಕ್ಷತೆಯೂ ಅವರಲ್ಲಿತ್ತು. ಅವರ ಬದಲಿಗೆ ಬಂದ ಅಮಲ್ದಾರರು ಲಂಚಕೋರರು. ಅವರಿಗೆ ಕೆಲಸವೂ ಸರಿಯಾಗಿ ಗೊತ್ತಿರಲಿಲ್ಲ. ಅವರು ಸೋಮಲಾಪುರಕ್ಕೆ ಬಂದನಂತರ ಒಂದು ದಿನ ನನ್ನನ್ನು ಕರೆಯಿಸಿ ತಮಗೆ ಅಗತ್ಯವಾಗಿ ಖರ್ಚಿಗೆ ಬೇಕಾಗಿದೆಯೆಂದೂ, ಆದ್ದರಿಂದ ನೂರು ರೂಪಾಯಿಗಳನ್ನು ಕೊಡಬೇಕೆಂದೂ, ನನ್ನನ್ನು ಕೇಳಿದರು. ನನಗೆ ಮೈ ಬೆವರಿತು ಆ ದಿನ ನನ್ನ  ಹತ್ತಿರ ನೂರಾಣೆಗಳೂ ಸಹಾ ಇರಲಿಲ್ಲ. ನನ್ನ ಬಳಿ ಹಣವಿಲ್ಲವೆಂದು ಅಮಲ್ದಾರರಲ್ಲಿ ದೈನ್ಯದಿಂದ ಅರಿಕೆಮಾಡಿಕೊಂಡೆ. ಅಮಲ್ದಾರರು ಕೋಪಗೊಂಡು ನನ್ನ ಕಡೆ ದುರುಗುಟ್ಟಿಕೊಂಡು ನೋಡುತ್ತಾ "ಯು ಹ್ಯಾವ್ ನೋ ಮ್ಯಾನರ್ಸ್ ಯು ಮೇ ಗೋ" ಎಂದರು. ಅಂದಿನಿಂದ ಅಮಲ್ದಾರರ ವಕ್ರ ದೃಷ್ಟಿ ನನ್ನ ಮೇಲೆ ಬಿತ್ತು. ಅನಂತರ ಒಂದು ತಿಂಗಳೊಳಗಾಗಿ ಎರಡು ಕೇಸುಗಳಲ್ಲಿ ನಾನು ಎಕ್ಸ್‌ಪ್ಲನೇಶ‍ರ್ ಕೊಡಲೇಬೇಕೆಂದು ಅಮಲ್ದಾರರು ಆರ್ಡರ್ ಮಾಡಿದರು. ಅಷ್ಟು ಹೊತ್ತಿಗಾಗಲೇ ನನ್ನ ಸ್ನೇಹಿತರಾಗಿದ್ದ ಅಸಿಸ್ಟೆಂಟ್ ಇಂಜಿನೀಯರಿಗೆ ಡಿಗ್ರೇಡ್ ಆಗಿತ್ತು. ನನ್ನ ಗತಿಯೂ ಹಾಗೇ ಆಗಬಹುದೆಂದು ಭಯ ನನಗುಂಟಾಯಿತು. ಆದ್ದರಿಂದ ಗತ್ಯಂತರವಿಲ್ಲದೆ ಅಮಲ್ದಾರರಿಗೆ ಮೊದಲನೆ ಕಂತು ನೂರು ರೂಪಾಯಿಗಳನ್ನೊಪ್ಪಿಸಿ ಅವರೊಡನೆ ರಾಜಿ ಮಾಡಿಕೊಂಡೆ ಅಂದಿನಿಂದ ನಾನು ಅಡ್ಡ ದಾರಿ ಹಿಡಿದೆ."

"ಶೇಕ್ದಾರರೇ ಅಡ್ಡದಾರಿ ಹಿಡಿದಿದ್ದರಿಂದ ನಿನ್ನ ಮನಸ್ಸಿಗೆ ಶಾಂತಿಯುಂಟಾಗಿ ದೆಯೆ?"

"ಕರಿಯಪ್ಪನವರೇ, ಲಂಚಕೋರನಾಗಿರುವುದೇ ನನಗೆ ಸಮಾಧಾನವಿಲ್ಲ. ಒಮ್ಮೊಮ್ಮೆ ಲಂಚದ ಹವ್ಯಾಸವನ್ನು ಬಿಡಬೇಕೆನಿಸುತ್ತದೆ. ಆದರೆ ಒಮ್ಮೊಮ್ಮೆ, ನನಗಿಂತ ದೊಡ್ಡವರು ಲಂಚದಿಂದ ಸುಖವಾಗಿರುವಾಗ ನಾನೇಕೆ ಸತ್ಯವಂತನಾಗಿ ಬಡತನದಲ್ಲಿ ನರಳಬೇಕೆನಿಸುತ್ತದೆ. ಇಂದಿನ ಕಾಲದಲ್ಲಿ ಸತ್ಯವಂತರ ಪಾಲಿಗೇ ಕಷ್ಟವೇ ಹೊರತು ಸುಖವಿಲ್ಲ. ಈ ತಾಲ್ಲೂಕಿನ ಮುಖಂಡರ ನಿದರ್ಶನವನ್ನೇ ತೆಗೆದುಕೊಳ್ಳಿ. ನಿಮ್ಮ ಮೋಹನ್ ನಿಜವಾದ ಗಾಂಧೀ ಭಕ್ತರಾಗಿದ್ದಾರೆ. ಅವರಿಗಾದ ಪ್ರತಿಫಲವೇನು? ಕಷ್ಟ, ನಿಷ್ಠುರ, ಬಡತನ ಇವೇ ಅವರಿಗೆ ದೊರಕಿದ ಪ್ರತಿಫಲ. ರಂಗನಾಥಪ್ಪ ಮತ್ತು ಕಲ್ಲಪ್ಪ ಮಾಡಬಾರದ್ದು ಮಾಡ್ತಾರೆ. ಅವರು ಮಜಾಮಾಡಿಕೊಂಡು ಸುಖವಾಗಿದ್ದಾರೆ.

"ಲಂಚ ಎನ್ನುವುದು ಒಂದು ಸಾಂಕ್ರಾಮಿಕ ರೋಗ ಇದ್ದಹಾಗೆ. ಕೆಲವರು ಮಂತ್ರಿಗಳು ಮತ್ತು ರಾಜಕಾರಣಿಗಳು ಲಂಚಕೋರರಾಗಿರುವುದನ್ನು ನೋಡಿ, ಕೆಲವರು ದೊಡ್ಡ ಅಧಿಕಾರಿಗಳು ಲಂಚಕೋರರಾಗುತ್ತಾರೆ. ಕೆಲವರು ದೊಡ್ಡ ಅಧಿಕಾರಿಗಳು ಲಂಚಕೋರರಾಗಿರುವುದನ್ನು ನೋಡಿ ಕೆಲವರು ಸಣ್ಣ ಅಧಿಕಾರಿಗಳು ನಿರ್ಭಯವಾಗಿ ಲಂಚಕ್ಕೆ ಕೈಯೊಡ್ಡುತ್ತಾರೆ. ದೊಡ್ಡ ರಾಜಕಾರಣಿಗಳೂ ಮಂತ್ರಿಗಳೂ ದೊಡ್ಡ ಅಧಿಕಾರಿಗಳು ಪ್ರಾಮಾಣಿಕತೆಯಿಂದ ಬಾಳಿದರೆ ನಮ್ಮಂತಹ ಸಣ್ಣನೌಕರರು ಅವರ ಆದರ್ಶವನ್ನು

ಅನುಸರಿಸುತ್ತೇವೆ. 'ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲಾ' ಎನ್ನುವ ಹಾಗೆ ದೊಡ್ಡವರು ಮೊದಲು ಸರಿಯಾಗಬೇಕು. ನಮ್ಮೊಂತೋರ ಮಾತೇನ್ ಬಿಡಿ, ನಾವು ಯಾರನ್ನೂ ಸುಲಿಗೆ ಮಾಡುವುದಕ್ಕೆ ಹೋಗುವುದಿಲ್ಲ. ನಾನು ಪಾರ್ಟಿಗಳಿಂದ ನಿರೀಕ್ಷೆಮಾಡುವುದು ಐದು ಅಥವಾ ಹತ್ತು ರೂಪಾಯಿ. ಲಂಚ ಕಡಿಮೆಯಾಗಬೇಕಾದರೆ ಆಡಳಿತದಲ್ಲಿ ಬಿಗಿ ಮತ್ತು ದರ್ಪ ಹೆಚ್ಚಾಗಬೇಕು. ಜೊತೆಗೆ ಕೆಲವರು ರಾಜಕೀಯ ಮುಖಂಡರು ಗಿರಣಿ ಮಾಲೀಕರ, ಕಂಟ್ರಾಕ್ಟರುಗಳು ಮತ್ತು ದಲ್ಲಾಲಿಗಳ ಜೇಬಿನಲ್ಲಿರುವುದು ತಪ್ಪಬೇಕು. ಜೊತೆಗೆ ಎಲ್ಲಾ ರಾಜಕೀಯ ಪಕ್ಷಗಳೂ ಒಳ್ಳೆಯವರನ್ನು ನೋಡಿ ಚುನಾವಣೆಗಳಿಗೆ ನಿಲ್ಲಿಸಬೇಕು. ಅಲ್ಲದೆ ಸಣ್ಣನೌಕರರ ಸಂಬಳಕ್ಕೂ ದೊಡ್ಡ ಆಫೀಸರ ಸಂಬಳಕ್ಕೂ ಅಜಗಜಾಂತರ ವ್ಯತ್ಯಾಸವಿರದಂತೆ ಸಂಬಳ ಸಾರಿಗೆಗಳನ್ನು ನಿಗದಿಮಾಡಬೇಕು.

"ಶೇಕ್ದಾರರೇ, ನೀವು ಹೇಳಿದ್ದನ್ನೆಲ್ಲಾ ಕೇಳಿದೆ, ನಿಮ್ಮ ವಾದಸರಣಿಯ ಪ್ರಕಾರ ಕೆಲವರು ಕೊಲೆ, ದರೋಡೆ, ಮೋಸ, ಇವುಗಳಿಂದ ಹಣವನ್ನು ಗಳಿಸುತ್ತಿರುವುದರಿಂದ ಉಳಿದವರೂ ಅದೇ ರೀತಿಯಲ್ಲಿ ಹಣವನ್ನು ಗಳಿಸಬೇಕೆಂದು ಅರ್ಥವಾಗುತ್ತದೆ. ನಮ್ಮ ದೇಶದಲ್ಲಿ ಕೋಟಿಗಟ್ಟಲೆ ಜನರು ಬಡತನದಲ್ಲಿ ನರಳುತ್ತಿದ್ದಾರೆ. ನಿಮ್ಮ ವಾದವನ್ನು ಒಪ್ಪುವುದಾದರೆ ಬಡವರಾಗಿರುವವರೆಲ್ಲರೂ ಹೊಟ್ಟೆಪಾಡಿಗಾಗಿ ಕಳ್ಳತನಮಾಡಬೇಕೆಂದು ಒಪ್ಪಿಕೊಂಡಂತೆ ಆಗುತ್ತದೆ. ಸರ್ಕಾರಿ ನೌಕರರೆಲ್ಲರೂ ವಿದ್ಯಾವಂತರಾದವರು ಮತ್ತು ಸುಸಂಸ್ಕೃತರು. ಅವಿದ್ಯಾವಂತರಾದ ರೈತ ಕಾರ್ಮಿಕರಿಗೆ ಅವರು ಆದರ್ಶಪ್ರಾಯವಾಗಿರ ಬೇಕು. ಆದರೆ ಇಂದು ಅವಿದ್ಯಾವಂತರೂ, ಬಡವರೂ, ವಿದ್ಯಾವಂತರಿಗಿಂತ ಮತ್ತು ಶ್ರೀಮಂತರಿಗಿಂತ ಹೆಚ್ಚು ಸತ್ಯವಂತರಾಗಿದ್ದಾರೆ. ಸಂಬಳಸಾರಿಗೆಗಳಲ್ಲಿರುವ ಏರುಪೇರು ಗಳು ಕಡಿಮೆಯಾಗುವುದು ಅವಶ್ಯಕ. ಆದರೆ ಏರುಪೇರೆಗಳ ದೆಶೆಯಿಂದ ಲಂಚವನ್ನು ಸಮರ್ಥಿಸುವುದು ಮೂರ್ಖತನ. ಈ ದೇಶದಲ್ಲಿ ಇದ್ದವರಿಗೂ ಇಲ್ಲದವರಿಗೂ ಇರುವ ಅಜಗಜಾಂತರ ವ್ಯತ್ಯಾಸ ಅದಷ್ಟು ಜಾಗ್ರತೆಯಾಗಿ ಕಡಿಮೆಯಾಗಬೇಕು. ಆದರೆ ಅಜಗಜಾಂತರ ವ್ಯತ್ಯಾಸವಿದೆಯೆಂಬ ಕಾರಣದಿಂದ ಇಲ್ಲದವರು ಕಳ್ಳತನ ಮಾಡುವುದಕ್ಕಾಗುವುದಿಲ್ಲ.

"ಕರಿಯಪ್ಪನವರೇ, ನೀವು ನನ್ನನ್ನು ವಾದದಲ್ಲಿ ಸೋಲಿಸಿದಿರಿ. ನಾನು ನಿಮ್ಮೆದುರು ಒಂದು ಪ್ರತಿಜ್ಞೆಮಾಡುತ್ತೇನೆ. ನನಗಿಂತ ಅಥವಾ ನನ್ನಷ್ಟೇ ಬಡವರಾದವರಿಂದ ನಾನಿನ್ನು ಮುಂದೆ ಅಕ್ರಮ ಸಂಭಾವನೆ ತೆಗೆದುಕೊಳ್ಳುವುದಿಲ್ಲ. ಲಂಚದ ಆಶೆಯಿಂದ ರಿಕಾರ್ಡುಗಳನ್ನು ಹಿಂದಿಡುವುದಿಲ್ಲ. ಪಾರ್ಟಿಗಳು ಅವರಾಗಿ ಕೊಟ್ಟರೆ ಮಾತ್ರ ತೆಗೆದುಕೊಳ್ಳುತ್ತೇನೆ. ನೀವು ನನಗೇನೂ ಕೊಡಬೇಕಾಗಿಲ್ಲ. ನಿಮ್ಮಿಂದ ನನಗೆ ಸ್ವಲ್ಪಮಟ್ಟಿಗೆ ಜ್ಞಾನೋದಯವಾಗಿದೆ. ನಿಮಗೆ ಬೇಕಾದ ಸರ್ವೆ ನಂಬರನ್ನು ಸ್ವಲ್ಪ ಹೊತ್ತಿನಲ್ಲೇ ಕೊಡುತ್ತೇನೆ"

"ಶೇಕ್ದಾರರೇ ನಿಮ್ಮ ಪ್ರತಿಜ್ಞೆಗಾಗಿ ನಾನು ಋಣಿಯಾಗಿದ್ದೇನೆ. ನಿಮ್ಮ ಅರ್ಧಂಬರ್ಧ ಸತ್ಯಸಂಧತೆ ನನಗೆ ಅರ್ಧಂಬರ್ಧ ತೃಪ್ತಿಯನ್ನು ಕೊಟ್ಟಿದೆ. ಶೇಕ್ದಾರರೇ ಜೀವನದಲ್ಲಿ

ನಾನು ಬಹಳ ಕಷ್ಟಪಟ್ಟಿರುವೆನು. ಸತ್ಯವಂತರಾದವರನ್ನು ಭಗವಂತನು ಕೈ ಬಿಡುವುದಿಲ್ಲವೆಂದು ನಾನು ಸ್ವಂತ ಅನುಭವದಿಂದ ಪಡೆದ ನಂಬಿಕೆ."

"ಕರಿಯಪ್ಪನವರೇ, ಸ್ವರಾಜ್ಯ ಬಂದ ನಂತರ ದೇವರು ನಮ್ಮಂತಹ ಅಲ್ಪ ಸಂಖ್ಯಾತರನ್ನು ಕೈಬಿಟ್ಟಿದ್ದಾನೆ; ಹರಿಜನರ ಕೈಯನ್ನು ಹಿಡಿದಿದ್ದಾನೆ. ಬಹುಸಂಖ್ಯಾತ ಜಾತಿಯವರ ಮಧ್ಯ ನಾವು ಉಳಿಯುವುದೇ ಕಷ್ಟ. ಒಂದು ದೃಷ್ಟಿಯಿಂದ ಯೋಚಿಸಿದರೆ ಸ್ವರಾಜ್ಯ ಬಂದನಂತರ ಜಾತೀಯತೆ ಹೆಚ್ಚಾಗಿದೆ ಎನ್ನಬೇಕು"

"ಸ್ವಾಮಿ ಶೇಕ್ದಾರರೇ, ಬಡಜನರಾದ ಹರಿಜನರನ್ನು ನೋಡಿ ನೀವೇಕೆ ಅಸೂಯೆಪಡುತ್ತಿದ್ದೀರಿ? ಶತಮಾನಗಳಿಂದ ಮೇಲ್ಜಾತಿಯುವರು ನಮ್ಮಿಂದ ದುಡಿಸಿಕೊಂಡರು. ಅದಕ್ಕಾಗಿ ನಾವು ಮುಂದುವರಿದ ಜಾತಿಯವರನ್ನು ದ್ವೇಷಿಸುವುದಿಲ್ಲ. ನೀವು ಜಾತಿಯ ವಿಷಯವನ್ನು ಪ್ರಸ್ತಾಪಿಸಿದಿರಿ, ಯಾವ ಜಾತಿಯವರು ಜಾತೀಯತೆಯನ್ನು ಬಿಟ್ಟಿದ್ದಾರೆಂಬುದನ್ನು ದಯವಿಟ್ಟು ತಿಳಿಸಿ, ಎಲ್ಲಾ ಜಾತಿಗಳಲ್ಲಿಯೂ ಒಳ್ಳೆಯವರು ಇದ್ದಾರೆ; ಕೆಟ್ಟವರೂ ಇದ್ದಾರೆ. ಎಲ್ಲಾ ಜಾತಿಗಳಲ್ಲಿಯೂ ಜಾತೀಯತೆಯ ಭಾವನೆ ಇದ್ದವರೂ ಇದ್ದಾರೆ; ಇಲ್ಲದವರೂ ಇದ್ದಾರೆ. ಅನಾವಶ್ಯಕವಾಗಿ ಒಂದು ಜಾತಿಗೆ ಸೇರಿದವರು ಇನ್ನೊಂದು ಜಾತಿಯವರನ್ನು ಕುರಿತು ಜಾತಿವಾದಿಗಳೆಂದು ಕರೆಯುತ್ತಾರೆ. ಒಂದು ಮಾತು ನಿಜ. ಕೆಲವು ಜಾತಿಗಳಲ್ಲಿ ಜಾತೀಯತೆಯ ಸೋಂಕು ಹೆಚ್ಚಾಗಿದೆ; ಕೆಲವು ಜಾತಿಗಳಲ್ಲಿ ಈ ಸೋಂಕು ಕಡಿಮೆಯಾಗಿದೆ. ಒಮ್ಮೊಮ್ಮೆ ಜಾತಿಗೆ ಹೆಚ್ಚು ಅಂಟಿಕೊಂಡಿರುವ ಜಾತೀಯತೆಯ ಪಿಶಾಚಿಗಳು ತಮ್ಮ ಜಾತಿಯತೆಯ ವ್ಯವಹಾರಕ್ಕೆ ಯಾರಾದರೂ ಅಡ್ಡಿ ಬಂದರೆ, ಆ ರೀತಿ ಅಡ್ಡಿ ಬಂದವರನ್ನೇ ಜಾತಿವಾದಿಗಳೆಂದು ಕರೆಯುತ್ತಾರೆ. ಏನೋ ಈಚೆಗೆ ಹರಿಜನರಾದ ನಾವು ಕಣ್ಣು ಬಿಡುತ್ತಾ ಇದ್ದೇವೆ. ಈಚೆಗೆ ಸರ್ಕಾರದ ಕೃಪಾದೃಷ್ಟಿಯೂ ನಮ್ಮ ಮೇಲೆ ಸ್ವಲ್ಪ ಬೀಳುತ್ತಾ ಇದೆ. ಆದರೆ ನಾವುಗಳು ಇನ್ನೂ ಸಮಾಜದ ಕೆಳಪದರರದಲ್ಲಿದ್ದೇವೆ. ದೇಶದಲ್ಲಿ ಬಡತನ ಅವಿದ್ಯೆಗಳು ನಿರ್ಮೂಲವಾದರೆ ಜಾತೀಯತೆ ತನ್ನಷ್ಟಕ್ಕೆ ತಾನೇ ನಿರ್ಮೂಲವಾಗುತ್ತದೆ"

ಕರಿಯಪ್ಪನು ಸರ್ವೆನಂಬರನ್ನು ಶೇಕ್ದಾರರಿಂದ ಪಡೆದುಕೊಂಡು, ಶೇಕದಾರರಿಗೆ ವಂದನೆಗಳನ್ನರ್ಪಿಸಿ ಊರಿಗೆ ಹೋದನು. ಮರುದಿನ ದರಖಾಸ್ತು ಅರ್ಜಿಯನ್ನು ತಯಾರುಮಾಡಿ, ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿ ನಾಗೇಂದ್ರನ ಬಳಿಗೆ ಹೋಗಿ, ತಾನು ರಾಜಕೀಯದಲ್ಲಿ ನೊಂದವನೆಂದು ಸರ್ಟಿಫಿಕೇಟನ್ನು ಕೊಡಬೇಕೆಂದು ಕೇಳಿದನು. ನಾಗೇಂದ್ರನು ಬಹಳ ವ್ಯಂಗ್ಯವಾಗಿ "ನೀವು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕಷ್ಟಪಟ್ಟು ನೊಂದಿರುವುದು ನನಗೆ ಗೊತ್ತಿಲ್ಲವಲ್ಲಾ" ಎಂದು ಹೇಳಿದನು. ಅಧಿಕಾರಕ್ಕೋಸ್ಕರ ಈಚೆಗೆ ಕಾಂಗ್ರೆಸ್ಸಿಗೆ ಸೇರಿದ್ದ ನಾಗೇಂದ್ರನಿಗೆ ಕರಿಯಪ್ಪನ ತ್ಯಾಗದ ವಿಚಾರ ಹೇಗೆ ತಾನೆ ಗೊತ್ತಾಗಬೇಕು! ಕಾಂಗ್ರೆಸ್ ಸಮಿತಿಯವರು ಸರ್ಟಿಫಿಕೇಟ್ ಕೊಡದೆ ಹೋದದ್ದರಿಂದ ಮೋಹನನಿಂದ ಸರ್ಟಿಫಿಕೇಟನ್ನು ಪಡೆದು, ಕರಿಯಪ್ಪನು ಅರ್ಜಿಯನ್ನು ಅಮಲ್ದಾರರಿಗೆ ಸಲ್ಲಿಸಿದನು.

ಕರಿಯಪ್ಪನು ಮಾಸ್ತಿಬೀಳು ಜಮೀನಿಗೆ ದರಖಾಸ್ತು ಅರ್ಜಿಯನ್ನು ಸಲ್ಲಿಸಿ ಆರು ತಿಂಗಳಾಗಿತ್ತು. ತನ್ನ ಅರ್ಜಿಯೇನಾಯಿತೆಂಬುದು ಕರಿಯಪ್ಪನಿಗೆ ಗೊತ್ತಾಗಲಿಲ್ಲ. ತಾಲ್ಲೂಕ್ ಕಛೇರಿಯಿಂದ ಅವನಿಗೆ ಯಾವ ಜವಾಬೂ ಬಂದಿರಲಿಲ್ಲ. ಅರ್ಜಿಯೇನಾಗಿದೆಯೆಂಬು ದನ್ನು ತಿಳಿಯುವ ಉದ್ದೇಶದಿಂದ ಒಂದು ದಿನ ಅವನು ಶೇಕದಾರರ ಬಳಿಗೆ ಹೋದನು. ಶೇಕದಾರರು ಬಹಳ ಸಲಿಗೆಯಿಂದ ಮಾತನಾಡಿ ಬಂದ ಉದ್ದೇಶವನ್ನು ಪ್ರಶ್ನಿಸಿದರು. ತನ್ನ ಅರ್ಜಿಯ ಸಂಬಂಧ ಯಾವ ನಡೆವಳಿಕೆ ನಡೆದಿದೆ ಎಂಬುದನ್ನು ತಿಳಿಯುವ ಸಲುವಾಗಿ ಬಂದಿರುವುದಾಗಿ ಕರಿಯಪ್ಪನು ಹೇಳಿದನು. ಶೇಕದಾರರು ತಮ್ಮ ರಿಜಿಸ್ಟರನ್ನೂ, ರಿಕಾರ್ಡುಗಳನ್ನೂ ಹುಡುಕಿ ನೋಡಿ ಕರಿಯಪ್ಪನ ಅರ್ಜಿ ತಮಗೆ ಬರಲಿಲ್ಲವೆಂದರು.

ಕರಿಯಪ್ಪನಿಗೆ ಆಶ್ಚರ್ಯವಾಯಿತು. ಸಾಮಾನ್ಯವಾಗಿ ಅಮಲ್ದಾರರಿಗೆ ಸಲ್ಲಿಸಿದ ಅರ್ಜಿಯು ಒಂದು ವಾರದೊಳಗೆ ಅಥವಾ ಹೆಚ್ಚೆಂದರೆ ಹದಿನೈದು ದಿನದೊಳಗೆ ಶೇಕದಾರರ ಕೈ ಸೇರಬೇಕಾಗಿತ್ತು. ಕರಿಯಪ್ಪನು ಸ್ವತಃ ಅಮಲ್ದಾರರಿಗೆ ಅರ್ಜಿಯನ್ನು ಸಲ್ಲಿಸಿದ್ದನು. ಆರು ತಿಂಗಳಾದರೂ ಆ ಅರ್ಜಿ ಶೇಕದಾರರ ಕೈ ಸೇರದೆ ಇದ್ದದ್ದು ಕರಿಯಪ್ಪನ ಮನಸ್ಸಿನಲ್ಲಿ ನಾನಾ ವಿಧವಾದ ಉಹಾಪೋಹಗಳಿಗೆ ಆಸ್ಪದ ಕೊಟ್ಟಿತ್ತು. ತನ್ನ ಅರ್ಜಿಯು ಶೇಕದಾರರಿಗೆ ತಲುಪದೆ ಇರುವ ವಿಚಾರವನ್ನು ಕರಿಯಪ್ಪನು ಮೋಹನನಿಗೆ ತಿಳಿಸಿದನು. ಮೋಹನನು ದರಖಾಸ್ತು ಗುಮಾಸ್ತರನ್ನು ವಿಚಾರಿಸಬೇಕೆಂದು ಸೂಚಿಸಿದನು.

ಮೋಹನನ ಸೂಚನೆಗನುಸಾರವಾಗಿ ಕರಿಯಪ್ಪನು ದರಖಾಸ್ತು ಗುಮಾಸ್ತನ ಬಳಿಗೆ ಹೋದನು. ದರಖಾಸ್ತು ಗುಮಾಸ್ತನು ಮಧ್ಯವಯಸ್ಸಿನವನಾಗಿದ್ದನು. ಬಡಬಗ್ಗರಿಗೆ ಕಿರುಕುಳಕೊಟ್ಟು ಅವರನ್ನು ಸುಲಿಗೆ ಮಾಡಿದ ಪಾಪದ ಪ್ರತೀಕವೋ ಎನ್ನುವ ಹಾಗೆ, ಮಧ್ಯವಯಸ್ಸಿನವನಾಗಿದ್ದರೂ ಅವನ ಮುಖದಲ್ಲಿ ಸುಕ್ಕುಬಿದ್ದು ಅರವತ್ತು ವರ್ಷದ ಮುದುಕನಂತೆ ತೋರುತ್ತಿದ್ದನು. ಹರಳೆಣ್ಣೆಯನ್ನು ಕುಡಿದವರಂತೆ ಅವನು ಸೊಟ್ಟ ಮೋರೆಯನ್ನು ಹಾಕಿಕೊಂಡಿದ್ದನು. ಪ್ರತಿದಿನವೂ ಕನಿಷ್ಠ ಪಕ್ಷ ಹತ್ತು ರೂಪಾಯಿಗಳ ಅಕ್ರಮ ಸಂಪಾದನೆ ಅವನಿಗಿತ್ತು. ಆದರೂ ಅವನು ಹಾಕಿದ್ದ ಹರಕು ಅಂಗಿಯನ್ನು ನೋಡಿದರೆ ಅವನ ಅಕ್ರಮ ಸಂಪಾದನೆಯೆಲ್ಲವೂ ಸೋರಿ ಹೋಗುವಂತೆ ಭಗವಂತನು ಅವನ ಜೀವನದಲ್ಲಿ ಎಲ್ಲಿಯೋ ಒಂದು ರಂಧ್ರವನ್ನು ಕೊರೆದಿರಬೇಕೆಂದು ವ್ಯಕ್ತವಾಗುತ್ತಿತ್ತು.

ಕರಿಯಪ್ಪನು ಅವನ ಸಮೀಪಕ್ಕೆ ಹೋಗಿ ವಿನಯದಿಂದ "ಏನ್ ಸ್ವಾಮಿ, ಈಗ ಆರು ತಿಂಗಳ ಹಿಂದೆ ಒಂದು ದರಖಾಸ್ತು ಅರ್ಜಿ ಅಮಲ್ದಾರರಿಗೆ ಕೊಟ್ಟಿದ್ದೆ. ಅದರ ವಿಚಾರ ಏನಾಯ್ತು ಅಂತ ಗೊತ್ತಾಗಿಲ್ಲ. ನಿಮ್ಮ ಆಫೀಸೀನಿಂದ ನನಗೆ ಯಾವ ಜವಾಬೂ ಬರಲಿಲ್ಲ. ದಯವಿಟ್ಟು ಏನಾಗಿದೆ ಎಂಬುದನ್ನು ನೋಡಿ ಹೇಳುತ್ತೀರಾ?" ಎಂದನು

"ಏನ್ರೀ, ನೀವು ಗಾಂಧೀಟೋಪಿ ಹಾಕ್ಕೊಂಡು ಬಂದಕೂಡ್ಲೆ ಎಲ್ಲಾ ಕೆಲಸಕಾರ್ಯ ಬಿಟ್ಟು ನಿಮ್ಮ ಕೆಲಸಾನೇ ಮಾಡಬೇಕೇನ್ರಿ ನಿಮ್ಮ ಕಾಂಗ್ರೆಸ್ ಸರ್ಕಾರ ಬಂದಮೇಲೆ ನಮ್ಮ ಕೆಲಸ ಒಂದಕ್ಕೆ ಹತ್ತರಷ್ಟು ಜಾಸ್ತಿ ಆಗಿದೆ. ಆದರೆ ನಮ್ಮ ಸಂಬಳಮಾತ್ರ ಒಂದಕ್ಕೆ

ಹತ್ತರಷ್ಟು ಜಾಸ್ತಿ ಆಗಿಲ್ಲ. ಮುಂಚೆ ದಿನಕ್ಕೆ ಮೂರು ದರಖಾಸ್ತು ಅರ್ಜಿಗಳೂ ಬರುತ್ತಿದ್ದವು. ಈಗ ದಿನವೂ ಅರ್ಜಿಗಳ ಹೊರೆಯೇ ಬರುತ್ತಾ ಇದೆ. ನನಗೇನು ನಾಲ್ಕು ಕೈಗಳಿವೆಯೇನ್ರಿ? ಮುಂಚೆ ಸಾಗುವಳಿ ಮಾಡತಕ್ಕ ಶಕ್ತಿ ಇದ್ದವರು ಮಾತ್ರ ಅರ್ಜಿ ಹಾಕುತ್ತಿದ್ದರು. ಈಗ ನಿಮ್ಮ ಸರ್ಕಾರದವರು ಜಮೀನು ಇಲ್ಲದವರಿಗೆಲ್ಲಾ ಜಮೀನು ಹಂಚುವುದಕ್ಕೆ ಹೊರಟಿದ್ದಾರೆ. ಹೊಲೇರು, ಮಾದಿಗರು, ಬುಡುಬುಡ್ಕೇರು, ಹಕ್ಕಿಪಕ್ಕಿಯವರು, ಬೆಸ್ತರು, ಕಿಂದರಿಜೋಗಿಗಳು ಎಲ್ಲಾರೂ ಅರ್ಜಿ ಹಾಕುವವರೇ ಆಗಿದ್ದಾರೆ. ಎಷ್ಟು ಕೆಲಸ ಮಾಡಿದರೂ ಮುಗಿಯೂದಿಲ್ಲ. ಸಾಲದುದಕ್ಕೆ ನಿಮ್ಮ ಮಂತ್ರಿಗಳ ಕಾಟ. ಮಂತ್ರಿಗಳು ಇನ್‌ಸ್ಪೆಕ್ಷನ್ ಮಾಡುವುದನ್ನು ನಾವ್ಯಾರೂ ಕೇಳಿರಲಿಲ್ಲ. ಈಗ ನಿಮ್ಮ ಮಂತ್ರಿಗಳು ಸರ್‌ಪ್ರೈಸ ಇನ್‌ಸ್ಪೆಕ್ಷನ್ ಮಾಡುವುದಕ್ಕೆ ಹೊರಟಾರೆ. ಹೋದ ತಿಂಗಳು ನಾನು ಊಟಕ್ಕೆ ಅಂತ ಮನೆಗೆ ಹೋಗಿ ಬರುವುದರೊಳಗೆ ನಿಮ್ಮ ಮಂತ್ರಿಗಳು ಹೇಳದೆ ಕೇಳದೇ ಕಳ್ಳರ ಹಾಗೆ ಆಫೀಸಿಗೆ ನುಗ್ಗಿ, ನನ್ನ ಪಿಜನ್‌ಹೋಲಾಗಿದ್ದ ರಿಕಾರ್ಡೆಲ್ಲಾ ಕಿತ್ತು ಹಾಕಿ, ಬಾಯಿಗೆ ಬಂದ್ಹಾಗೆ ನನ್ನ ಬೈದು ಹದಿನೈದು ದಿನ ಸಸ್ಪೆಂಡ್ ಮಾಡಿ ಹೋದರು. ಇದೇ ಏನ್ರೀ ಮಂತ್ರಿ ಅದವರು ಮಾಡೂ ಕೆಲಸ? ಮಂತ್ರಿಗಳು ದೊಡ್ಡ ಆಫೀಸರ ತಂಟೇಗೆ ಹೋಗೋದಿಲ್ಲ. ದೊಡ್ಡ ಆಫೀಸರು ಕೆಲವರಿಗೆ ಇನ್‌ಸ್ಪೆಕ್ಷನ್ನೂ ಬರೋದಿಲ್ಲ; ಕೆಲಸಾನೂ ಬರೋದಿಲ್ಲ. ಕೆಲವರು ದೊಡ್ಡ ಆಫೀಸರು ಪೋಸ್ಟಾಫೀಸಿನ ಹಾಗೆ ಆಗ್ಯಾರೆ. ಮೇಲಿಂದ ಬರತಕ್ಕ ಕಾಗದ ಮೇಲಕ್ಕೆ ಕಳಸೂದು; ಕೆಳಗಿಂದ ಬರತಕ್ಕ ಕಾಗದ ಮೇಲಕ್ಕೆ ಕಳಸೂದು ಅವರ ಕೆಲಸ ಆಗಿದೆ. ಅಂತವರಿಗೆ ನಾವು ಕೆಲಸ ಹೇಳಿಕೊಡಬೇಕು. ಅಂತಹವರನ್ನು ಹಿಡಿಯುವುದು ಬಿಟ್ಟು ನಿಮ್ಮ ಮಂತ್ರಿಗಳು ನಮ್ಮಂತಹವರನ್ನು ಗೋಳ್‌ಹೊಯ್ಯುತಾರೆ."

"ಏನ್ರೀ ಗುಮಾಸ್ತರೇ ನೀವು ರಾಜಕಾರಣಿಗಳ ಹಾಗೆ ಮಾತಾಡ್ತಾ ಇದ್ದೀರಿ? ರಾಜಕಾರಣ ಮಾಡಬೇಕಾದರೆ ರಾಜೀನಾಮೆ ಕೊಟ್ಟು ರಂಗಕ್ಕೆ ಇಳಿಯಿರಿ. ಆಗ ನಿಮ್ಮ ರಂಗು ಗೊತ್ತಾಗ್ತದೆ. ಸರ್ಕಾರದ ಉಪ್ಪು ತಿಂದು ಸರ್ಕಾರ ಬಯ್ಯುವವರಿಗೆ 'ನಮ್ಮಕ್ ಹರಾಮ್' ಅಂತಾರೆ. ರೈತಾಪಿ ಜನರು, ಮಳೆಯಾಗದೆ ತಮ್ಮ ಭೂಮೀಲಿ ಬೆಳೆಯಾಗದೆ ಇದ್ದರೆ ಭಗವಂತನಲ್ಲಿ ಮೊರೆಯಿಡುತ್ತಾರೆ. ವ್ಯವಹಾರ ಮಾಡುವವರು ತಮ್ಮ ವ್ಯವಹಾರದಲ್ಲಿ ನಷ್ಟ ಹೊಂದಿದರೆ ತಮ್ಮ ಅದೃಷ್ಟವನ್ನು ಶಪಿಸುತ್ತಾರೆ. ಆದರೆ ನಿಮ್ಮಂಥ ಕೆಲವರು ಸರ್ಕಾರಿ ನೌಕರರು ತಮಗಾದ ತಲೆನೋವಿಗೂ ಸಹ ಸರ್ಕಾರವನ್ನು ಶಪಿಸುತ್ತಾರೆ. ಈ ದೇಶದ ಅಸಂಖ್ಯಾತ ರೈತ ಕಾರ್ಮಿಕರಿಗೆ ನಿಮಗೆ ಬರುವಷ್ಟು ವರಮಾನವೂ ಬರುವುದಿಲ್ಲವಲ್ಲಾ. ಅವರು ಯಾರನ್ನು ಶಪಿಸಬೇಕು? ಅವರು ನಿಮ್ಮನ್ನು ಶಪಿಸಬೇಕು. ಯಾಕೆಂದರೆ ನೀವೆಲ್ಲರೂ ಪ್ರಾಮಾಣಿಕತೆಯಿಂದ ಮತ್ತು ದೇಶಾಭಿಮಾನದಿಂದ ಕೆಲಸಮಾಡಿದ್ದರೆ ಅವರು ಈಗಿರುವುದಕ್ಕಿಂತಲೂ ಸುಖವಾಗಿರುತ್ತಿದ್ದರು. ನಿಮ್ಮ ಕಷ್ಟವನ್ನು ಗುಡ್ಡದಷ್ಟು ದೊಡ್ಡದು ಮಾಡುವ ನಿಮಗೆ ನಿಮಗಿಂತ ಬಡವರಾಗಿದ್ದವರ ಕಷ್ಟ ಗೊತ್ತಾಗುವುದಿಲ್ಲವೆಂದು ವ್ಯಥೆಪಡಬೇಕಾಗಿದೆ. ನೀವು ಸರಿಯಾಗಿ ಕೆಲಸಮಾಡದೆ ಇದ್ದರೆ

ಮಂತ್ರಿಗಳು ಇನ್‌ಸ್ಪೆಕ್ಷನ್ ಮಾಡುವುದು ತಪ್ಪೆ? ನಿಮ್ಮ ಹತ್ತಿರ ನನಗೇಕೆ ಒಣಚರ್ಚೆ. ನನ್ನ ಅರ್ಜಿಯೇನಾಗಿದೆಯೆಂಬುದನ್ನು ತಿಳಿಸಿ. ನಾನು ಹೊರಟು ಹೋಗುತ್ತೇನೆ."

"ನನಗೆ ಇಂದು ಹುಡುಕುವುದಕ್ಕೆ ಪುರುಸೊತ್ತಿಲ್ಲ. ಬೇರೆ ಅರ್ಜೆಂಟ್ ಕೆಲಸಾ ಇದೆ. ನೀವು ಹಿಂದೆ ಕೊಟ್ಟ ಅರ್ಜಿಯ ತಾರೀಖು, ಜಮೀನ್ ಸರ್ವೆ ನಂಬರು ವಗೈರೆಗಳನ್ನು ನಮೂದಿಸಿ ರಿಮೈಂಡರ್ ಅರ್ಜಿಕೊಟ್ಟರೆ ನಿಮ್ಮ ಅರ್ಜಿ ಏನಾಗಿದೆ. ನೋಡಿ ಅಂತ ಎಂಡಾರಸ್‌ಮೆಂಟ್ ಕೊಡ್ತಿನಿ. ನೀವು ನನ್ನನ್ನು ಹೆದರಿಸಬೇಕಾಗಿಲ್ಲ. ಹೆದರಿಸಿ ಏನು ಮಾಡ್ತಿರಿ? ಹೆಚ್ಚು ಅಂದರೆ ನಿಮ್ಮ ಮಂತ್ರಿಗಳಿಗೆ ಹೇಳಿ ನನ್ನನ್ನು ವರ್ಗಮಾಡಿಸ್ತಿರಿ. ಅಷ್ಟೇ ತಾನೆ? ಈ ಊರು ಇಲ್ಲದೆ ಇದ್ದರೆ ಇನ್ನೊಂದೂರು."

ಆ ಗುಮಾಸ್ತನ ಹತ್ತಿರ ಮಾತನಾಡಿ ಪ್ರಯೋಜವಿಲ್ಲವೆಂದು ತಿಳಿದು ಕರಿಯಪ್ಪನು ಹೆಡ್‌ಗುಮಾಸ್ತರ ಬಳಿಗೆ ಹೋಗಿ ವಿದ್ಯಮಾನವನ್ನು ವಿವರಿಸಿದನು. ಹೆಡ್‌ಗುಮಾಸ್ತರು ಕರಿಯಪ್ಪನನ್ನು ಗೌರವದಿಂದ ಬರಮಾಡಿಕೊಂಡು ಅವನನ್ನು ಕುಳ್ಳಿರಿಸಿ ತಾಲ್ಲೂಕ್ ಕಛೇರಿಯಲ್ಲಿದ್ದ ರಿಜಿಸ್ಟರುಗಳನ್ನು ತರಿಸಿ ಬಹಳವಾಗಿ ಹುಡುಕಿದನು. ಕರಿಯಪ್ಪನ ಅರ್ಜಿಯು ಯಾವ ರಿಜಿಸ್ಟರಿನಲ್ಲಿಯೂ ನಮೂದಾಗಿರಲಿಲ್ಲ. ಅನಂತರ ಸಾಗುವಳಿ ಚೀಟಿಯ ರಿಜಿಸ್ಟರನ್ನು ನೋಡುವುದರಲ್ಲಿ ಕರಿಯಪ್ಪನು ಅಪೇಕ್ಷಿಸಿದ್ದ ಮಾಸ್ತಿಬೀಳಿನ ಜಮೀನು ಎರಡು ತಿಂಗಳ ಹಿಂದೆ ಪಂಜರವಳ್ಳಿ ನೀಲೇಗೌಡನ ಆಳು ಕಾಳ ಎಂಬುವವನಿಗೆ ಮಂಜೂರಾಗಿದ್ದ ವಿಚಾರ ಗೊತ್ತಾಯಿತು. ಕಾಳನು ರಾಜಕೀಯದಲ್ಲಿ ನೊಂದವನೆಂಬ ಕಾರಣದ ಮೇಲೆ ಜಮೀನು ಅವನಿಗೆ ಮಂಜೂರಾಗಿತ್ತು. ಕಾಳನು ರಾಜಕೀಯದಲ್ಲಿ ನೊಂದವನೆಂದು ರಂಗನಾಥನು ಶಿಫಾರಸ್ಸು ಮಾಡಿದ್ದನು. ಕರಿಯಪ್ಪನು ಮಂಕು ಹಿಡಿದವನಂತೆ ಹೆಡ್‌ಗುಮಾಸ್ತರ ಬಳಿ ಸುಮ್ಮನೆ ಕುಳಿತುಬಿಟ್ಟನು. ಹೆಡ್‌ಗುಮಾಸ್ತರಿಗೂ ಕರಿಯಪ್ಪನನ್ನು ನೋಡಿ ಸಂಕಟವಾಯಿತು. ಬೇರೆ ಯಾವುದಾದರೂ ಭೂಮಿಗೆ ಅರ್ಜಿ ಹಾಕಿದರೆ ತಾವು ಕೊಡಿಸುವ ಪ್ರಯತ್ನ ಮಾಡುವುದಾಗಿ ಅವರು ಕರಿಯಪ್ಪನಿಗೆ ಭರವಸೆ ಹೇಳಿದರು. ಕರಿಯಪ್ಪನು ತಾನಿನ್ನು ಅರ್ಜಿಯನ್ನು ಹಾಕುವ ಗೊಡವೆಗೆ ಹೋಗುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿ ಹೊರಟು ಹೋದನು.

ಊರಿಗೆ ಹೋದನಂತರ ಎಲ್ಲಾ ವಿಚಾರಗಳನ್ನೂ ಅವನು ಮೋಹನನಿಗೆ ವರದಿ ಮಾಡಿದನು. ಕರಿಯಪ್ಪನ ಅರ್ಜಿ ನಾಪತ್ತೆಯಾಗಿರುವುದಕ್ಕೂ, ಜಮೀನು ಕಾಳನಿಗೆ ಸಿಕ್ಕುವಂತೆ ಮಾಡಿದ್ದಕ್ಕೂ, ರಂಗನಾಥನೂ ಅವನ ಸ್ನೇಹಿತರೂ ಕಾರಣರೆಂದು ಸ್ಪಷ್ಟವಾಗಿತ್ತು. ಹಿಂದೆ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಕರಿಯಪ್ಪನಿಗೆ ದೊರಕಬೇಕಾಗಿದ್ದ ಕಾಂಗ್ರೆಸ್ ಟಿಕೆಟ್ ಕಾಳನಿಗೆ ದೊರಕಿತ್ತು. ಈಗ ಕಾನೂನು ಪ್ರಕಾರ ಕರಿಯಪ್ಪನಿಗೆ ದೊರಕಬೇಕಾಗಿದ್ದ ಭೂಮಿ ಕಾಳನಿಗೆ ದೊರಕಿತು. ವಾಸ್ತವಿಕವಾಗಿ ಆ ಭೂಮಿ ಕಾಳನಿಗೆ ಉಳಿಯಲಿಲ್ಲ. ನೀಲೇಗೌಡನು ತನ್ನ ಪರವಾಗಿ ತನ್ನ ಆಳು ಕಾಳನಿಂದ ದರಖಾಸ್ತು ಅರ್ಜಿಯನ್ನು ಹಾಕಿಸಿದ್ದನು. ಕಾಳನಿಗೆ ಸಾಗುವಳಿ ಚೀಟಿ ದೊರೆತ ಮರುದಿನವೇ ನೀಲೇಗೌಡನು ಕಾಳನಿಂದ ಆ ಭೂಮಿಯನ್ನು ತನ್ನ ಹೆಸರಿಗೆ ಭೋಗ್ಯ ಮಾಡಿಸಿಕೊಂಡನು.

# ೧೫. ವಿಷ ಮತ್ತು ಮಾಟ

ರಂಗನಾಥನ ಮನೆಯಲ್ಲಿ ರಂಗನಾಥ, ನಾಗೇಂದ್ರ, ಕಲ್ಲಪ್ಪ ಮತ್ತು ಸಂಕಪೂಜಾರಿ ಸೇರಿದ್ದರು. ರಂಗನಾಥನು ಬಹಳ ಪೆಚ್ಚಾಗಿದ್ದನು. ಉಳಿದವರ ಮುಖದಲ್ಲೂ ಗೆಲವಿನ ಕಳೆಯಿರಲಿಲ್ಲ. ಮೋಹನನ ರಾಜಕೀಯದ ಮಗ್ಗಲು ಮುರಿಯಬೇಕೆಂದು ಮಾಡಿದ ಅವರ ಎಲ್ಲಾ ಪ್ರಯತ್ನಗಳೂ ವ್ಯರ್ಥವಾಗಿದ್ದವು. ದುಷ್ಟಶಿಖಾಮಣಿಗಳ ದುಷ್ಕೃತ್ಯಗಳ ದೆಸೆಯಿಂದ ಮೋಹನನು ಮೊದಲಿಗಿಂತಲೂ ಮಿಗಿಲಾಗಿ ಜನಾನುರಾಗಿಯಾಗಿದ್ದನು. ಆದ್ದರಿಂದಲೇ ಅವರೆಲ್ಲರೂ ಖಿನ್ನರಾಗಿದ್ದರು. ಸ್ವಲ್ಪ ಹೊತ್ತಿನನಂತರ ರಂಗನಾಥನು ಮೌನವನ್ನು ಮುರಿದು, ತನ್ನ ಸ್ನೇಹಿತರನ್ನು ಕುರಿತು "ನಾವು ಇದುವರೆಗೆ ಮಾಡಿದ್ದೆಲ್ಲಾ ನೀರಿನಲ್ಲಿ ಹೋಮ ಮಾಡಿದಂತಾಗಿದೆ. ವೃಥಾ ಶ್ರಮ, ವೃಥಾ ಖರ್ಚು, ವೃಥಾ ಜನಗಳಲ್ಲಿ ನಿಷ್ಠೂರ. ನಾವೊಂದು ಮಾಡಿದರೆ ಅದೊಂದಾಗುತ್ತದೆ. ಡೇಬೈಡೇ ಮೋಹನ ಹೀರೋ ಆಗ್ತ ಇದ್ದಾನೆ. ನನಗಂತೂ ಡಿಸ್‌ಗಸ್ಟ್ ಆಗಿದೆ. ಏನ್ಮಾಡ್ಬೇಕು ಅಂತ ತೋರುವುದಿಲ್ಲ" ಎಂದು ಹೇಳಿದನು.

ಕಲ್ಲಪ್ಪನು ಮಧ್ಯೆ ಬಾಯಿಹಾಕಿ "ಏನಯ್ಯಾ ರಂಗನಾಥಾ, ನೀನು ನಮ್ಮ ತಾಲ್ಲೂಕಿನ ಮತ್ತು ಕ್ರಮೇಣ ಡಿಸ್ಟ್ರಿಕ್ಟಿನ ಲೀಡರಾಗುವವನು. ನೀನೇ ಹೀಗೆ ಅಳುಬುರುಕನಂತೆ ಮಾತನಾಡಿದರೆ ನಿನ್ನನ್ನು ಯಾರಪ್ಪಾ ಹಿಂಬಾಲಿಸುತ್ತಾರೆ? ಮೊದಲು ಸಾಮ,ಆಮೇಲೆ ಭೇದ, ಆಮೇಲೆ ದಂಡ, ಹೀಗೆ ಎಲ್ಲಾ ಅಸ್ತ್ರಗಳನ್ನೂ ಉಪಯೋಗಿಸಬೇಕು. ಹೇಡಿಗಳು ಲೀಡರ್ ಆಗುವುದಿಲ್ಲಪ್ಪಾ" ಎಂದು ಚುಚ್ಚುವಂತೆ ಮಾತನಾಡಿದನು.

ವಾಸ್ತವವಾಗಿ ರಂಗನಾಥನು ತಾಲ್ಲೂಕಿನ ಮುಖಂಡನಾಗಬೇಕೆಂಬುದು ಕಲ್ಲಪ್ಪನ ಆಸೆಯಾಗಿರಲಿಲ್ಲ. ರಾಜಕಾರಣದಲ್ಲಿ ರಂಗನಾಥನು ಮುಂದುವರಿಯತ್ತಿರುವುದನ್ನು ಕಲ್ಲಪ್ಪನೂ, ನಾಗೇಂದ್ರನೂ ಅಂತರಂಗದಲ್ಲಿ ಸಹಿಸುತ್ತಿರಲಿಲ್ಲ. ಒಂದು ಸಾರಿ ರಾಜಕೀಯ ರಂಗದಿಂದ ಮೋಹನನ ನಿರ್ಗಮನವಾದ ಮೇಲೆ ತಮ್ಮ ಕೈವಾಡಗಳನ್ನು ತೋರಿಸಬೇಕೆಂದು ಕಲ್ಲಪ್ಪನೂ, ನಾಗೇಂದ್ರನೂ ಹವಣಿಸುತ್ತಿದ್ದರು. ಮೋಹನ ಮೂಲೆಗೆ ಬಿದ್ದನಂತರ ಬಹುಸಂಖ್ಯಾತ ಪಂಗಡಗಳಿಗೆ ಸೇರಿದ್ದ ರಂಗನಾಥನಿಗೂ, ಕಲ್ಲಪ್ಪನಿಗೂ ಪೈಪೋಟಿ ಬಿದ್ದಾಗ ತಾನೂ ಒಂದು ಕೈ ನೋಡಬಹುದೆಂದು ನಾಗೇಂದ್ರನು ಮನಸ್ಸಿನಲ್ಲಿಯೇ ಮಂಡಿಗೆಯನ್ನು ಸವಿಯುತ್ತಿದ್ದನು. ಸಂಕಪೂಜಾರಿಗೆ ರಾಜಕಾರಣ ಅರ್ಥವಾಗದೆ ಇದ್ದರೂ ತನ್ನ ಧಣಿ ತಾಲ್ಲೂಕಿನ ಮುಖಂಡನಾಗಿ ಕಾಲಕ್ರಮೇಣ ಜಿಲ್ಲೆಯ ಮುಖಂಡನಾಗುತ್ತಾನೆಂಬುದನ್ನು ಕಲ್ಲಪ್ಪನ ಬಾಯಿಂದ ಕೇಳಿ ತುಂಬಾ ಸಂತೋಷವಾಯಿತು. ತಾನು ತಾಲ್ಲೂಕಿನ ಮತ್ತು ಜಿಲ್ಲೆಯ ಭಾವೀ ನಾಯಕನೆಂಬುದನ್ನು

ತನ್ನ ಸ್ನೇಹಿತರು ಒಪ್ಪಿಕೊಂಡಿದ್ದರಿಂದ ರಂಗನಾಥನಿಗೆ ಸ್ವರ್ಗವು ಮೂರೇ ಮಾರು ದೂರ ಇದ್ದಂತೆ ತೋರಿತು. ರಂಗನಾಥನು ಸ್ನೇಹಿತರನ್ನು ಕುರಿತು "ನೀವೆಲ್ಲರೂ ನನ್ನ ನೆಚ್ಚಿನ ಗೆಳೆಯರು. ನನಗೋಸ್ಕರ ನೀವುಗಳು ತ್ಯಾಗವನ್ನು ಮಾಡಲು ಸಹಾ ಸಿದ್ಧರಿದ್ದೀರಿ. ನಿಮ್ಮಿಂದ ಯಾವುದನ್ನೂ ಮುಚ್ಚಿಡಲು ಇಷ್ಟಪಡುವುದಿಲ್ಲ. ನಾನು ಮೋಹನನ ವಿರುದ್ಧ, ಈಗ ತಾನೆ ಕಲ್ಲಪ್ಪನು ಪ್ರಸ್ತಾಪಿಸಿದ ಎಲಾ ಅಸ್ತ್ರಗಳನ್ನೂ ಪ್ರಯೋಗಮಾಡಿ ಮುಗಿಸಿದ್ದೇನೆ. ನಿಮಗೆ ಯಾರಿಗೂ ಗೊತ್ತಾಗದೆ ಒಂದು ಪ್ರಯೋಗ ಮಾಡಿದ್ದೆ. ಅದು ಮಿಸ್‌ಫೈರ್ ಆಯಿತು. ಈ ಪ್ರಯೋಗ ಯಶಸ್ವಿಯಾಗಿದ್ದರೆ ಮೋಹನನು ಈಗ ಬೇರೆ ಲೋಕದಲ್ಲಿ ಪಾಲಿಟಿಕ್ಸ್ ಮಾಡುತ್ತಾ ಇರಬೇಕಾಗಿತ್ತು. ಏನು ಮಾಡುವುದು?" ಎಂದು ಹೇಳುತ್ತಿರುವಷ್ಟರಲ್ಲಿ ಕಲ್ಲಪ್ಪನೂ, ನಾಗೇಂದ್ರನೂ ಅದು ಯಾವ ಪ್ರಯೋಗವೆಂಬುದನ್ನು ತಿಳಿಸಬೇಕೆಂದು ಹಠಮಾಡಿದರು. ರಂಗನಾಥನು ಅದು ಗುಟ್ಟಿನ ವಿಚಾರವೆಂದು ಹೇಳಿದನು. ಆದರೆ ನಾಗೇಂದ್ರನೂ ಕಲ್ಲಪ್ಪನೂ ಒತ್ತಾಯ ಪಡಿಸಿದ್ದರಿಂದ ರಂಗನಾಥನು ಈ ರೀತಿ ತಿಳಿಸಿದನು.

"ನಾನು ಆ ಪ್ರಯೋಗದ ವಿಚಾರವನ್ನು ಪ್ರಸ್ತಾಪಿಸದೆ ಇದ್ದಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ. ಈಗಿನ ಕಾಲದಲ್ಲಿ ಗೋಡೆಗಳಿಗೂ ಕಿವಿಗಳಿರುತ್ತವೆ. ನನ್ನ ಪ್ರಯೋಗದ ವಿಚಾರ ಬೇರೆಯವರಿಗೆ ಗೊತ್ತಾದರೆ ನನ್ನ ಮರ್ಯಾದೆ ಮೂರು ಕಾಸಾಗುತ್ತದೆ. ಆದ್ದರಿಂದ ನೀನು ಹೇಳುವ ವಿಚಾರವನ್ನು ದೇವರ ಆಣೆಯಾಗಿಯೂ ನೀವು ನಿಮ್ಮ ಅತ್ಯಂತ ಆತ್ಮೀಯರೊಡನೆಯೂ ಹೇಳಬಾರದು. ಗೊತ್ತಾಯಿತೆ? ಈಗ ನನ್ನ ಪ್ರಯೋಗದ ವಿಚಾರವನ್ನು ಹೇಳುತ್ತೇನೆ, ಕೇಳಿ. ಮೋಹನನ ರಾಜಕಾರಣವನ್ನು ಮಾತ್ರವಲ್ಲ ಅವನ ಜೀವನ ನಾಟಕವನ್ನೂ ಸಹ ಮುಗಿಸಬೇಕೆಂದು ನಾನೊಂದು ಪ್ಲಾನ್ ಮಾಡಿದ್ದೆ. ಮೋಹನ ಮತ್ತು ಅವನ ಸ್ನೇಹಿತರು ಯಾವಾಗಲೂ ಮೂರ್ತಿಯ ಮನೆಯಲ್ಲಿ ಅವರ ಗ್ರೂಪ್‌ಮೀಟಿಂಗನ್ನು ನಡೆಯಿಸುತ್ತಿದ್ದರು. ಮೀಟಿಂಗು ಸೇರಿದಾಗಲೆಲ್ಲಾ ಮೂರ್ತಿಯು ಬಸ್‌ಸ್ಟಾಂಡ್ ಹೋಟೇಲಿನಿಂದ ಕಾಫಿಯನ್ನು ತರಿಸುತ್ತಿದ್ದನು. ಆ ಮೀಟಿಂಗುಗಳಿಗೆ ನನ್ನ ಕಡೆಯ ಸಿ.ಐ.ಡಿ. ಗಳನ್ನೂ ಸಹ ಕಳುಹಿಸುತ್ತಿದ್ದೆನು. ನನ್ನ ಸಿ.ಐ.ಡಿ ಗಳು ಮೋಹನನ ಕಡೆಯವರಂತೆ ನಟಿಸುತ್ತಾ ಮೀಟಿಂಗಿನಲ್ಲಿ ನಡೆದ ಎಲ್ಲಾ ವಿಚಾರಗಳನ್ನು ನನಗೆ ವರದಿ ಮಾಡುತ್ತಿದ್ದರು. ಬಸ್‌ಸ್ಟಾಂಡ್ ಹೋಟೆಲಿನಿಂದ ಕಾಫಿ ಬರುತ್ತಾ ಇದ್ದದ್ದೂ, ಕಾಫಿಯನ್ನು ಅನಂತ ಎಂಬ ಹೋಟೇಲ್ ಮಾಣಿ ಸರ್ವ್‌ಮಾಡುತ್ತಿದ್ದದ್ದೂ ನನಗೆ ಸಿ.ಐ.ಡಿ ಗಳಿಂದ ಗೊತ್ತಾಗಿತ್ತು. ಆ ಮಾಣಿಯನ್ನು ಪಾಕೆಟ್ ಮಾಡಿದರೆ ಮೋಹನನಿಗೆ ಸ್ವರ್ಗಕ್ಕೆ ಟಿಕೇಟ್ ಕೊಡಬಹುದೆಂದು ಯೋಚಿಸಿದ. ನನ್ನ ಬಂಧು ಒಬ್ಬನನ್ನು ಅಂತರಂಗಕ್ಕೆ ತೆಗೆದುಕೊಂಡೆ. ನನ್ನ ಬಂಧು ಹೋಟೆಲ್ ಮಾಣಿಯನ್ನು ತನ್ನ ಅಂತರಂಗಕ್ಕೆ ತೆಗೆದುಕೊಂಡನು. ನನ್ನ ಹೆಸರನ್ನು ಮಾಣಿಗೆ ಹೇಳಬಾರದೆಂದು ನನ್ನ ಬಂಧುವಿಗೆ ಕಟ್ಟಾಜ್ಞೆ ಮಾಡಿದ್ದೆ. ನನ್ನ ಬಂಧುವಿಗೂ ಮಾಣಿಗೂ, ಒಂದು ಗುಟ್ಟಿನ ಒಪ್ಪಂದವಾಯಿತು. ಆ ಒಪ್ಪಂದದ ಪ್ರಕಾರ ನನ್ನ ಬಂಧುವು ಮಾಣಿಗೆ

ಐದುನೂರು ರೂಪಾಯಿಗಳನ್ನು ಕೊಡತಕ್ಕದ್ದೆಂತಲೂ, ಮೋಹನನ ಕಡೆಯವರು ಮೂರ್ತಿಯ ಮನೆಯಲ್ಲಿ ಸೇರಿದಾಗ ಆ ಮಾಣಿಯು ಫಾಲಿಡಾಲು ಹಾಕಿದ ಕಾಫಿಯನ್ನು ಮೋಹನನಿಗೆ ಕೊಡಬೇಕೆಂತಲೂ ಮಾತಾಗಿತ್ತು."

ಮಧ್ಯೆ ಕಲ್ಲಪ್ಪನು ಬಾಯಿಹಾಕಿ "ಆಮ್ಯಾಲೇನಾತು" ಎಂದನು.

ಆ ಒಪ್ಪಂದದ ಪ್ರಕಾರ ನಮ್ಮ ಬಂಧು ಒಂದು ಸಣ್ಣ ಸೀಸೆಯನ್ನೂ ಮತ್ತು ಅಡ್ವಾನ್ಸ್ ಆಗಿ ಇನ್ನೂರು ರೂಪಾಯಿಗಳನ್ನೂ ಮಾಣಿಗೆ ಕೊಟ್ಟಿದ್ದನು. ಕೆಲಸವಾದ ನಂತರ ಇನ್ನುಳಿದ ಮುನ್ನೂರು ರೂಪಾಯಿಗಳನ್ನು ಮಾಣಿಗೆ ಕೊಡುವುದೆಂದು ಮಾತಾಗಿತ್ತು. ಸ್ವಾತಂತ್ರ್ಯ ದಿನಾಚರಣೆಯ ದಿನ ಸಾಯಂಕಾಲ ಮೂರ್ತಿಯ ಮನೆಯಲ್ಲಿ ಮೋಹನನ ಕಡೆಯವರು ಸೇರಿದ್ದರು. ಮಾಮೂಲು ಪ್ರಕಾರ ಬಸ್‌ಸ್ಟಾಂಡ್ ಹೋಟೇಲಿಗೆ ಕಾಫಿಗಾಗಿ ಆರ್ಡರು ಹೋಗಿತ್ತು. ನಮ್ಮ ಪ್ಲಾನ್ ಪ್ರಕಾರ ಕೆಲಸವೂ ನಡೆಯಿತು. ಫಾಲಿಡಾಲ್ ಹಾಕಿದ ಕಾಫಿಯನ್ನು ಮಾಣಿ ಮೋಹನನಿಗೆ ಕೊಟ್ಟೇ ಬಿಟ್ಟನು. ಅದರೇನಾಯಿತು? ಮೋಹನನ ಲಕ್ ಚೆನ್ನಾಗಿತ್ತು. ಆ ದಿನ ತನಗೆ ಡಿಸೆಂಟ್ರಿಯೆಂದು ಹೇಳಿ, ತನಗೆ ಕೊಟ್ಟ ಕಾಫಿಯನ್ನು ಮೋಹನ ತನ್ನ ಪಕ್ಕದಲ್ಲೇ ಕುಳಿತಿದ್ದ ನಮ್ಮ ಕಡೆ ಸಿ.ಐ.ಡಿ. ಸಾಬ್‌ಜಾನ್‌ಗೆ ಕೊಟ್ಟನು. ನನ್ನ ಪ್ಲಾನ್ ಸಾಬ್‌ಜಾನ್‌ಗೆ ಗೊತ್ತಿರಲಿಲ್ಲ. ಆದ್ದರಿಂದ ಕಾಫಿಯನ್ನು ಸಾಬ್‌ಜಾನ್ ಕುಡಿದೇ ಬಿಟ್ಟನು. ಕುಡಿದ ಸ್ವಲ್ಪಹೊತ್ತಿನಲ್ಲಿಯೇ ಸಂಕಟವಾಗ ತೊಡಗಿದ್ದರಿಂದ ಸಾಬ್‌ಜಾನ್ ತನಗೆ ಆರೋಗ್ಯ ಸರಿಯಿಲ್ಲವೆಂದು ಹೇಳಿ ಮೀಟಿಂಗನ್ನು ಬಿಟ್ಟು ತನ್ನ ಮನೆಗೆ ಹೋದನು. ಸಾಬ್‌ಜಾನ್ ಮನೆಯನ್ನು ಬಹಳ ಕಷ್ಟಪಟ್ಟು ತಲುಪಿದ್ದೇ ತಡ, ಅವನಿಗೆ ವಾಂತಿ, ಜುಲಾಬು ಪ್ರಾರಂಭವಾಯಿತು. ಕಾಲರಾ ಅಂತ ಭಾವಿಸಿ ಅವನ ಅಣ್ಣ ಅವನಿಗೆ ಚಕ್ರಾಣಿ ಬೇರನ್ನು ತೇಯ್ದು ಕುಡಿಸಿದನು. ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಆ ದಿನ ಸರ್ಕಾರಿ ಆಸ್ಪತ್ರೆಯ ಡಾಕ್ಟರು ಸಹಾ ಊರಲ್ಲಿ ಇರಲಿಲ್ಲ. ಜೊತೆಗೆ ರಾತ್ರಿಯ ಕಾಲವಾದ್ದರಿಂದ ಸರಿಯಾದ ಚಿಕಿತ್ಸೆಗೂ ಅವಕಾಶವಾಗಲಿಲ್ಲ. ಕಾಂಪೌಂಡರಿಂದ ಔಷಧ ತೆಗೆದುಕೊಂಡು ಹೋಗಿ ಕುಡಿಸಿದನು. ಆ ಔಷಧದಿಂದಲೂ ಯಾವ ಪ್ರಯೋಜನವೂ ಆಗದೆ, ಕೇವಲ ಒಂದು ಘಂಟೆಯೊಳಗಾಗಿ ಮೋಹನ್ ಹೋಗಬೇಕಾಗಿದ್ದ ಸ್ಥಳಕ್ಕೆ ಸಾಬ್‌ಜಾನ್ ಹೊರಟುಹೋದನು. ಅವನು ಸತ್ತ ನಂತರ ನನಗೆ ವರ್ತಮಾನ ಬಂತು. ಆಗ ಏನು ಮಾಡುವಂತೆಯೂ ಇರಲಿಲ್ಲ. ನಮ್ಮ ಕೆಲಸವಾಗಲಿಲ್ಲ. ಆದರೆ ಅತ್ಯುತ್ತಮ ಕೆಲಸಗಾರನೊಬ್ಬನನ್ನು ನಾವು ಕಳೆದು ಕೊಂಡೆವು. ಈ ಪ್ರಸಂಗವಾದ ನಂತರ ಒಬ್ಬ ಗಟ್ಟಿಗ ಮಂತ್ರವಾದಿಯನ್ನು ಹಿಡಿದು ಮೋಹನನ ಮೇಲೆ ಮಾಟವನ್ನು ಮಾಡಿಸಿದ್ದೇನೆ. ಮಾಟ ಮಾಡಿಸಿ ಆಗಲೇ ಕೆಲವು ತಿಂಗಳಾದವು. ಆದರೆ ಅದರ ಪರಿಣಾಮ ಮೋಹನನ ಮೇಲೆ ಇದುವರೆಗೂ ಏನೂ ಆಗಿಲ್ಲ. ಆದ್ದರಿಂದಲೇ ನನಗೆ ಡಿಸ್‌ಗಸ್ಟ್ ಆಗಿದೆ ಅಂತ ಹೇಳಿದ್ದು. ದಯವಿಟ್ಟು ಈ ವಿಚಾರಗಳನ್ನು ಇನ್ನಾರಿಗೂ ಹೇಳಬಾರದು. ನನ್ನಾಣೆ ಹೇಳಬಾರದು. ಇಲ್ಲಿಯೇ ಮರೆತು ಬಿಡಬೇಕು"

ರಂಗನಾಥನು ಹೇಳಿದ ಕಥೆಯನ್ನು ಕೇಳಿ ಒಬ್ಬೊಬ್ಬರೂ ಒಂದೊಂದು ವಿಧವಾಗಿ ಯೋಚಿಸತೊಡಗಿದರು. ಕಲ್ಲಪ್ಪನ ಮನಸ್ಸಿಗೆ ರಂಗನಾಥನು ಸಾಹಸಿಯೆಂಬ ಭಾವನೆ ಬಂತು. ಸಂಕಪೂಜಾರಿ ಮನಸ್ಸಿಗೆ ತನ್ನ ಧಣಿ ಮಾಡಿದ್ದು ಸರಿಯೆಂದು ತೋರಿತು. ನಾಗೇಂದ್ರನೂ ಎಷ್ಟೇ ಕೆಡುಕಿಯಾಗಿದ್ದರೂ ಉಳಿದವರಿಗಿಂತಲೂ ಸ್ವಲ್ಪ ಉತ್ತಮನಾಗಿದ್ದನು. ರಾಜಕಾರಣಕ್ಕೋಸ್ಕರ ಅವನು ರಂಗನಾಥನ ಮತ್ತು ಕಲ್ಲಪ್ಪ ಸ್ನೇಹ ಬೆಳೆಸಿದ್ದನು. ಆದರೆ ಅವರಿಬ್ಬರೂ ರಾಜಕಾರಣವನ್ನು ವಿಷಹಾಕಿಸುವ ಮತ್ತು ಮಾಟ ಮಾಡಿಸುವ ಮಟ್ಟಕ್ಕೆ ಕೊಂಡೊಯ್ಯುತ್ತಾರೆಂದು ಅವನು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ರಂಗನಾಥನು ಹೇಳಿದ ಕಥೆಯನ್ನು ಕೇಳಿದ ಮೇಲೆ ಅವರಿಬ್ಬರ ಜೊತೆಯಲ್ಲಿ ತಾನಿರುವುದು ಯೋಗ್ಯವಲ್ಲವೆಂದು ನಾಗೇಂದ್ರನು ಮನಸ್ಸಿನಲ್ಲೇ ಯೋಚಿಸುತ್ತಿದ್ದನು. ಅವನ ಮನಸ್ಸು ಅಲ್ಲೋಲ್ಲಕಲ್ಲೋಲ ಪರಿಸ್ಥಿತಿಯಲ್ಲಿ ಹೊಯ್ದಾಡುತ್ತಿತ್ತು. ಅವನು ರಂಗನಾಥನನ್ನು ಕುರಿತು ಇಂತೆಂದನು.

“ರಂಗನಾಥ, ನಿನ್ನ ಸಾಹಸದ ಕಾರ್ಯಗಳನ್ನು ಕೇಳಿ ಮೈ ಜುಮ್ಮೆನ್ನುತ್ತದೆ. ಇನ್ನು ಮೇಲೆ ಇಂತಹ ಸಾಹಸಕ್ಕೆ ಕೈ ಹಾಕಬೇಡ. ಪೈಪೋಟಿಗೂ ಒಂದು ಮಿತಿಯಿರಬೇಕು. ಅಹಿತ ಪೈಪೋಟಿ ಈ ಮಟ್ಟಕ್ಕೆ ಹೋಗಬಾರದು. ನೀನು ಮೋಹನನಿಗೆ ವಿಷವನ್ನು ಹಾಕಿಸುವ ಪ್ರಯತ್ನ ಮಾಡಿಸಿದೆ. ಅವನ ಮೇಲೆ ಮಾಟಮಾಡಿಸಿದೆ. ಅವುಗಳಿಂದ ಅವನಿಗೇನೂ ಆಗಲಿಲ್ಲ. ದೇವರಿಲ್ಲವೇನಯ್ಯಾ? ಮೋಹನ ನನಗಿಂತಲೂ, ನಿನಗಿಂತಲೂ ಒಳ್ಳೆಯವನೆಂಬುದನ್ನು ನಾವಿಬ್ಬರೂ ಒಪ್ಪಲೇಬೇಕು. ಒಳ್ಳೆಯವರಿಗೆ ದೇವರ ರಕ್ಷಣೆ ಇದೆಯೆಂಬುದನ್ನು ನೀನು ಹೇಳಿದ್ದರಿಂದಲೇ ವ್ಯಕ್ತವಾಗುತ್ತದೆ. ನಾನೇನೋ ಇದುವರೆಗೆ ನಿಮ್ಮ ಜೊತೆ ಇದ್ದೆ. ನಿಮ್ಮ ಜೊತೆಯಲ್ಲಿದ್ದುದರಿಂದ ರಾಜಕಾರಣದಲ್ಲಿ ನಾನೂ ಮುಂದಕ್ಕೆ ಬರಲು ಅನುಕೂಲವಾಯಿತು. ನಾನು ಅದಕ್ಕಾಗಿ ನಿಮಗೆ ಋಣಿಯಾಗಿದ್ದೇನೆ. ಆದರೆ ಇನ್ನು ಮುಂದೆ ಕೊಲೆ, ಮಾಟ ಮುಂತಾದ ಕಾರ್ಯಗಳಲ್ಲಿ ತೊಡಗಿದರೆ ನಾನು ನಿಮ್ಮೊಡನೆ ಸಹಕರಿಸಲು ಸಿದ್ಧನಾಗಿಲ್ಲ. ನೀವು ಮಾಡುವ ಒಳ್ಳೆಯ ಕೆಲಸಕ್ಕೆ ನನ್ನ ಸಹಕಾರ ನಿಮಗಿದೆ. ಜಗತ್ತಿನಲ್ಲಿ ಸಾಮ್ರಾಜ್ಯಗಳನ್ನಾಳಿದ ದೊರೆಗಳೂ, ಚಕ್ರವರ್ತಿಗಳೂ ಮಣ್ಣು ಮುಕ್ಕಿ ಹೋಗಿದ್ದಾರೆ. ನೀನೇನೂ ಶಾಶ್ವತವಾಗಿ ಮುಖಂಡರಾಗಿ ಉಳಿಯುವುದಕ್ಕಾಗುವುದಿಲ್ಲ. ಆದ್ದರಿಂದ ದುಬಾರಿ ಕೆಲಸಕ್ಕೆ ಕೈ ಹಾಕಬೇಡಿ. ಇವತ್ತು ನೀನು ಹೇಳಿದ ವಿಚಾರವನ್ನು ನಾನು ಯಾರಿಗೂ ತಿಳಿಸುವುದಿಲ್ಲ”

ನಾಗೇಂದ್ರನ ಮಾತುಗಳು ಕಲ್ಲಪ್ಪನಿಗೆ ಹಿಡಿಸಲಿಲ್ಲ. ನಾಗೇಂದ್ರನು ಈಚೆಗೆ ಅಂತರಂಗವಾಗಿ ಮೋಹನನ ಕಡೆ ಸೇರಿದ್ದಾನೆಂಬ ಸಂಶಯ ಕಲ್ಲಪ್ಪನಿಗುಂಟಾಯಿತು. ಕಲ್ಲಪ್ಪನು ನಾಗೇಂದ್ರನನ್ನು ಕುರಿತು,

“ಭಟ್ರು ಯಾವಾಗ ಇಷ್ಟೊಂದು ವೇದಾಂತಿಗಳಾದದ್ದು. ಇಷ್ಟುದಿನಗಳವರೆಗೆ ಈ ವೇದಾಂತ ಎಲ್ಲಿ ಹೋಗಿತ್ತೋ? ನಿಮ್ಮನ್ನು ಈ ತಾಲ್ಲೂಕಿನ ಮುಖಂಡರನ್ನಾಗಿ ಮಾಡುವುದಕ್ಕೆ ನಾವೆಲ್ಲರೂ ಒಪ್ಪಿಕೊಂಡಿದ್ದರೆ ಈ ವೇದಾಂತ ಬರ್ತಾ ಇರ್ಲಿಲ್ಲ. ನೋಡಿ

ಭಟ್ರೆ, ರಾಮಾಯಣ, ಮಹಾಭಾರತಗಳಲ್ಲೂ ಅವತಾರ ಪುರುಷರು ಮೋಸ ಕೃತ್ರಿಮಗಳಿಂದ ತಮ್ಮ ಕಾರ್ಯ ಸಾಧನೆಮಾಡಿದ್ದಾರೆ. ರಂಗನಾಥ ಮಾಡಿದ್ದರಲ್ಲಿ ತಪ್ಪೇನೂ ಇಲ್ಲ. ನಿಮಗೆ ನಮ್ಮ ಸಹವಾಸ ಸಾಕಾಗಿ ಹೋಗಿದ್ದರೆ ನಿಮ್ಮ ದಾರಿಯನ್ನು ನೀವು ಹಿಡಿಯಬಹುದು. ಆದರೆ ರಂಗನಾಥ ಹೇಳಿದ್ದನ್ನು ಕುಂಟುನೆಪಮಾಡಿಕೊಂಡು ನೀವು ಟೋಪಿಯನ್ನು ತಿರುಗಿಸಿ ಹಾಕುವುದು ಬೇಡ" ಎಂದನು

ಅದಕ್ಕೆ ನಾಗೇಂದ್ರನು "ನೋಡು ಕಲ್ಲಪ್ಪ, ನಿನಗಿಂತ ಹೆಚ್ಚು ವೇದಾಂತ ನನಗೆ ಗೊತ್ತಿದೆ. ನೀನು ನನಗೆ ವೇದಾಂತ ಕಲಿಸಬೇಕಾಗಿಲ್ಲ. ಕೊಲೆ ಮಾಟಗಳಿಂದ ನಾನು ಈ ತಾಲ್ಲೂಕಿನ ಮುಖಂಡನಾಗಲು ಎಂದೂ ಇಷ್ಟಪಟ್ಟವನಲ್ಲ. ನೀನು ಬೇಕಾದರೆ ನಾಯಕನಾಗಬಹುದು. ನನ್ನ ಅಡ್ಡಿಯೇನು ಇಲ್ಲ. ನೀನು ರಾಮಾಯಣ ಮತ್ತು ಮಹಾಭಾರತಗಳ ವಿಚಾರವನ್ನು ಪ್ರಸ್ತಾಪಿಸಿದೆ. ಆ ಎರಡು ಮಹಾ ಗ್ರಂಥಗಳೂ ಸತ್ಯಕ್ಕೆ ಅಂತ್ಯದಲ್ಲಿ ಜಯವಿದೆಯೆಂಬುದನ್ನು ಜಗತ್ತಿಗೆ ಸಾರಿವೆ. ಅದನ್ನು ನೀನು ಮರೆತಿರುವಂತೆ ತೋರುತ್ತದೆ" ಎಂದು ನುಡಿದನು.

ತಮ್ಮ ಕೂಟದಲ್ಲಿ ಈ ರೀತಿಯ ಬಿಕ್ಕಟ್ಟು ಬಂದಿದ್ದರಿಂದ ರಂಗನಾಥನಿಗೆ ದಿಗಿಲಾಯಿತು. ಅವನು ಉಪಾಯದಿಂದ ಬಿಕ್ಕಟ್ಟನ್ನು ನಿವಾರಿಸಬೇಕೆಂದು ಯೋಚಿಸಿ. ಬುದ್ಧಿವಂತಿಕೆಯಿಂದ ನಾಗೇಂದ್ರನಿಗೂ ಕಲ್ಲಪ್ಪನಿಗೂ ಸಮಾಧಾನವಾಗುವಂತೆ ನಾಲ್ಕು ಮಾತುಗಳನ್ನು ಹೇಳಿ, ಇಬ್ಬರೂ ಮೊದಲಿನಂತೆ ಹೊಂದಿಕೊಂಡು ಹೋಗಬೇಕೆಂದು ಪ್ರಾರ್ಥಿಸಿ, ಇನ್ನು ಮುಂದೆ ಮೋಹನನ ವಿರುದ್ಧ ಕೈಗೊಳ್ಳತಕ್ಕ ಕ್ರಮಗಳನ್ನು ಎಲ್ಲರ ಒಪ್ಪಿಗೆಯಿಂದ ಕೈಗೊಳ್ಳುವುದಾಗಿ ಭರವಸೆ ನೀಡಿದನು.

ಆ ಭರವಸೆಯಿಂದ ನಾಗೇಂದ್ರನಿಗೆ ಯಾವ ತೃಪ್ತಿಯೂ ದೊರಕಲಿಲ್ಲ. ಕಲ್ಲಪ್ಪನೂ, ರಂಗನಾಥನೂ ದುಷ್ಟರೆಂಬುದು ಅವನ ಮನಸ್ಸಿನಲ್ಲಿ ನಾಟಿಹೋಗಿತ್ತು. ದುಷ್ಟರಿಂದ ದೂರವಿರುವುದೇ ಲೇಸೆಂದು ಯೋಚಿಸುತ್ತಿದ್ದರೂ ಬಹಿರಂಗವಾಗಿ ಅವರೊಡನೆ ನಿಷ್ಠುರ ಕಟ್ಟಿಕೊಳ್ಳುವ ಧೈರ್ಯ ಅವನಿಗಿರಲಿಲ್ಲ. ಆದ್ದರಿಂದ ಅಂದಿನಿಂದ ಅವನು ಒಮ್ಮೊಮ್ಮೆ ಅವರ ಜೊತೆಯಲ್ಲಿ ಇದ್ದವನಂತೆ ನಟಿಸುತ್ತಿದ್ದನು; ಒಮ್ಮೊಮ್ಮೆ ಅವರ ಜೊತೆಯಲ್ಲಿ ಇಲ್ಲದವನಂತೆ ನಟಿಸುತ್ತಿದ್ದನು.

## ೧೬. ಸತ್ಯದ ಹೆಸರಿನಲ್ಲಿ ಅಸತ್ಯ ನಡೆಯುವಾಗ, ಧರ್ಮದ ಹೆಸರಿನಲ್ಲಿ ಅಧರ್ಮ ನಡೆಯುವಾಗ, ಸುಮ್ಮನಿರುವುದು ಹೇಡಿತನ

ಪವಿತ್ರಪುರದ ತಾಲ್ಲೂಕಿನ ಹಳೆಯ ಕಾಂಗ್ರೆಸ್ ಕೆಲಸಗಾರರೆಲ್ಲರೂ, ಮೂಲೆಗೆ ಸೇರಿಹೋಗಿದ್ದರು. ಅಂತೆಯೇ ಹೊಸದಾಗಿ ಕಾಂಗ್ರೆಸ್ಸಿಗೆ ಸೇರಿದ್ದ ನಿಷ್ಠಾವಂತ ಜನರೂ ಸಹ ರಂಗನಾಥ ಮಿತ್ರಮಂಡಳಿಯವರ ಉಪಟಳವನ್ನು ತಡೆಯಲಾರದೆ ನಿಸ್ಸಹಾಯಕರಾಗಿ ಸುಮ್ಮನಿದ್ದರು. ಒಟ್ಟಿನಲ್ಲಿ ಹೇಳುವುದಾದರೆ ಪವಿತ್ರಪುರದ ರಾಜಕಾರಣದಲ್ಲಿ ನಿಷ್ಠಾವಂತ ಕಾಂಗ್ರೆಸ್ಸಿಗರು ಸಂಖ್ಯೆಯಲ್ಲಿ ಹೆಚ್ಚಾಗಿದ್ದರೂ ಹೆಸರಿಲ್ಲದ ದಾಸಯ್ಯಗಳಂತೆ ಆಗಿದ್ದರು. ರಂಗನಾಥನ ಜೊತೆಯಲ್ಲಿ ಶೀತೂರು ಕಲ್ಲಪ್ಪನಂತಹ ಲಂಚಕೋರರೂ, ಸಂಕಪೂಜಾರಿಯಂತಹ ಕಳ್ಳ ವ್ಯವಹಾರಿಗಳೂ, ಕೆಲವು ಗೂಂಡಾ ಜನರೂ ಸೇರಿಕೊಂಡಿದ್ದರು. ಉಳಿದ ಬಹುಮಂದಿ ಕಾಂಗ್ರೆಸ್ ಕಾರ್ಯಕರ್ತರು ಮೋಹನನ ಹಿಂಬಾಲಕರಾಗಿದ್ದರು. ಸಂಖ್ಯೆಯಲ್ಲಿ ನಿಷ್ಠಾವಂತರು ಹೆಚ್ಚಾಗಿದ್ದರೂ ರಾಜಕಾರಣದಲ್ಲಿ ಅವರು ಪ್ರಭಾವ ಕಡಿಮೆಯಾಗಿತ್ತು. ಜೊತೆಗೆ ರಂಗನಾಥನು ಸಜ್ಜನರ ಮೇಲೆ ದುರ್ಜನರನ್ನು ಅಲ್ಲಲ್ಲಿ ಎತ್ತಿ ಕಟ್ಟಿದ್ದನು. ತಾಲ್ಲೂಕಿನ ಆಡಳಿತ ಹದಗೆಟ್ಟು ಹೋಗಿತ್ತು.

ಈ ಎಲ್ಲಾ ಕಾರಣಗಳ ದೆಶೆಯಿಂದ ಕಾಂಗ್ರೆಸ್ ಕೆಲಸಗಾರರು ರೋಷಾವೇಶದಿಂದ ಕೂಡಿದ್ದರು. ಮಾಸ್ತಿಬೀಳು ಜಮೀನಿನ ಪ್ರಕರಣವು ಮೊದಲೇ ಕುಪಿತರಾಗಿದ್ದ ಅವರನ್ನು ಮತ್ತಷ್ಟು ಕೆರಳಿಸಿತ್ತು. ಅವರೆಲ್ಲರೂ ಸೇರಿ ರಂಗನಾಥನ ಮೇಲೂ, ಅವನ ಬೆಂಬಲಿಗರ ಮೇಲೂ ಒಂದು ಚಳವಳಿಯನ್ನು ಹೂಡಲು ಸಿದ್ಧರಾಗಿದ್ದರು. ಅವರಿಗೆ ಅವರೇ ಕಟ್ಟಿದ್ದ ಕಾಂಗ್ರೆಸ್ ಸಂಸ್ಥೆಯನ್ನು ಬಿಡುವುದೂ ಕಷ್ಟವಾಗಿತ್ತು; ಕಾಂಗ್ರೆಸ್ ಸಂಸ್ಥೆಯಲ್ಲಿದ್ದು ದುಷ್ಟಶಕ್ತಿಗಳ ಕಿರುಕುಳಗಳನ್ನು ಸಹಿಸುವುದೂ ಕಷ್ಟವಾಗಿತ್ತು. ನಿಷ್ಠಾವಂತ ಕಾಂಗ್ರೆಸ್ಸಿಗರನ್ನು ಸೇರಿಸಿ ಪ್ರತಿ ಕಾಂಗ್ರೆಸ್ಸನ್ನು ಸ್ಥಾಪಿಸಬೇಕೆಂದು ಕೆಲವರು ಯೋಚಿಸುತ್ತಿದ್ದರು. ಕೆಲವರು ರಾಜಕಾರಣವನ್ನು ಬಿಟ್ಟು ತೆಪ್ಪಗಿರಬೇಕೆಂದು ಯೋಚಿಸುತ್ತಿದ್ದರು. ಆದರೆ ಯಾವ ನಿರ್ಧಾರಕ್ಕೆ ಬರಬೇಕಾಗಿದ್ದರೂ ಮೋಹನನ ಮುಂದಾಳುತನ ಅವರಿಗೆ ಅವಶ್ಯಕವಾಗಿ ಬೇಕಾಗಿತ್ತು. ಅವನ ನಾಯಕತ್ವವಿಲ್ಲದೆ ಅವರೇನೂ ಮಾಡುವಂತಿರಲಿಲ್ಲ. ಆದ್ದರಿಂದ ಎಲ್ಲರೂ ಒಟ್ಟಾಗಿ ಮುಂದಿನ ಕಾರ್ಯಕ್ಕೆ ಮೋಹನನ್ನು ಒಪ್ಪಿಸಬೇಕೆಂದು ನಿಶ್ಚಯಿಸಿದರು.

ರಾಜಕೀಯ ರಂಗದಲ್ಲಿ ಉಳಿಯಬೇಕು ಅಥವಾ ಅಳಿಯಬೇಕು ಎಂಬುದೇ ನಿಷ್ಠಾವಂತ ಕಾಂಗ್ರೆಸ್ಸಿಗರ ಮುಂದಿನ ಪ್ರಶ್ನೆಯಾಗಿತ್ತು. ಅಂತಿಮವಾಗಿ ಈ ಪ್ರಶ್ನೆಯನ್ನು

ಬಗೆಹರಿಸಬೇಕೆಂದೂ, ಅದಕ್ಕಾಗಿ ಒಂದು ಕಡೆ ಸೇರಬೇಕೆಂದೂ ಮೂರ್ತಿಗೂ, ಮೋಹನನಿಗೂ ಅವರ ಪದೇ ಪದೇ ಒತ್ತಾಯಪಡಿಸುತ್ತಿದ್ದರು. ಅವರ ಒತ್ತಾಯದ ಮೇರೆಗೆ ಮೂರ್ತಿಯ ಮನೆಯಲ್ಲಿ ಒಂದು ಸಭೆಯನ್ನು ಸೇರಿಸಲಾಗಿತ್ತು. ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಆಡಳಿತ ವರ್ಗದ ಮೇಲೆ ದಂಗೆ ಏಳಬೇಕೆಂದೇ ಸಭೆಯಲ್ಲಿದ್ದ ಬಹು ಜನರ ಆಸೆಯಾಗಿತ್ತು. ಮೋಹನನನ್ನು ದಂಗೆಯ ನಾಯಕನಾಗಲು ಒಪ್ಪುವಂತೆ ಮಾಡುವುದು ಅವರ ಉದ್ದೇಶವಾಗಿತ್ತು. ಮೋಹನನಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಮಾತನಾಡಬಲ್ಲ ಮೂರ್ತಿಯನ್ನು ಸಭಿಕರು ತಮ್ಮ ಪ್ರತಿನಿಧಿಯನ್ನಾಗಿ ಗೊತ್ತುಮಾಡಿದ್ದರು. ಸಭಿಕರ ಇಚ್ಛೆಯ ಮೇರೆಗೆ ಮೂರ್ತಿ ಮಾತನಾಡತೊಡಗಿದನು. ಅವನ ಮಾತುಗಳು ಈ ರೀತಿ ಇದ್ದುವು.

"ಸ್ವಾತಂತ್ರ್ಯ ಸಂಗ್ರಾಮದ ವೀರರೇ ಮತ್ತು ದೇಶಪ್ರೇಮಿಗಳೇ, ನಾವಿಂದು ಇಲ್ಲಿ ಸೇರಿರುವ ಉದ್ದೇಶ ತಮಗೆ ಗೊತ್ತೇ ಇದೆ. ತಮ್ಮ ಕೋರಿಕೆಯ ಮೇರೆಗೆ ಈ ಸಭೆಯನ್ನು ಸೇರಿಸಲಾಗಿದೆ. ಕೆಲವು ಕಾಲದಿಂದೀಚೆಗೆ ಈ ತಾಲ್ಲೂಕಿನಲ್ಲಿ ಕಾಂಗ್ರೆಸ್ಸಿನ ವ್ಯವಹಾರಗಳು ಯಾವ ರೀತಿ ಜರುಗಿವೆ ಎಂಬುದನ್ನು ತಾವು ತಿಳಿದಿದ್ದೀರಿ. ಕಾಂಗ್ರೆಸ್ ಸಂಸ್ಥೆ ಬಹಳ ಪವಿತ್ರವಾದ ಸಂಸ್ಥೆ. ಸತ್ಯ ಅಹಿಂಸೆಗಳ ಆಧಾರದ ಮೇಲೆ ಬೆಳೆದು ಬಂದ ಸಂಸ್ಥೆ. ಈ ಸಂಸ್ಥೆಗೆ ಶ್ರೇಷ್ಠ ಇತಿಹಾಸವಿದೆ ಮತ್ತು ಉನ್ನತ ಆದರ್ಶವಿದೆ. ಗಾಂಧೀಜಿಯವರ ತಪಸ್ಸು ಮತ್ತು ಹಲವರ ಬಲಿದಾನಗಳು ಈ ಸಂಸ್ಥೆಯ ಹಿನ್ನಲೆಯಲ್ಲಿ ಅಡಗಿದೆ. ಹರಿದು ಹಂಚಿಹೋಗಿದ್ದ ಹಿಂದೂಸ್ಥಾನವನ್ನು ಒಂದುಗೂಡಿಸಿ ಗುಲಾಮಗಿರಿಯ ಶೃಂಖಲೆಗಳನ್ನು ಕಿತ್ತೊಗೆದು ನಮ್ಮನ್ನು ಸ್ವತಂತ್ರರನ್ನಾಗಿ ಮಾಡಿದ ಕೀರ್ತಿ ಈ ಸಂಸ್ಥೆಗೆ ಸೇರತಕ್ಕದ್ದು. ಹಿಮಾಲಯದಿಂದ ಕನ್ಯಾಕುಮಾರಿಯವರಿಗೆ ಒಂದೇ ರಾಷ್ಟ್ರವನ್ನಾಗಿ ಮಾಡಿ, ಒಂದೇ ಆಡಳಿತ ಪದ್ಧತಿಯನ್ನು ಆಚರಣೆಗೆ ತಂದ ಕೀರ್ತಿ ಈ ಸಂಸ್ಥೆಗೆ ಸೇರತಕ್ಕದ್ದು. ಗಂಡಸರು, ಹೆಂಗಸರು, ಹರಿಜನರು, ಬ್ರಾಹ್ಮಣರು ಎಂಬ ಭೇದವಿಲ್ಲದೆ. ಸರ್ವರಿಗೂ ಸರಿಸಮಾನವಾದ ಅವಕಾಶಗಳನ್ನು ಕಲ್ಪಿಸಿಕೊಟ್ಟು, ಕಳೆದ ಹತ್ತು ವರ್ಷಗಳಲ್ಲಿ ಸರ್ವತೋಮುಖವಾಗಿ ಈ ದೇಶದ ಪ್ರಗತಿಯನ್ನು ಸಾಧಿಸಿದ ಕೀರ್ತಿ ಈ ಸಂಸ್ಥೆಗೆ ಸೇರತಕ್ಕದ್ದು.

"ಆದರೆ ಇಂದು ಪವಿತ್ರಪುರದಲ್ಲಿ ಕಾಂಗ್ರೆಸ್ ಏನಾಗಿದೆ? ಅದು ದುಷ್ಟ ಶಕ್ತಿಗಳ ಕೈಗೆ ಸಿಕ್ಕಿ ನರಳುತ್ತಿದೆ. ಕುಡುಕರೂ, ಕಾಳ ಸಂತೆಯವರೂ, ಲಂಚಕೋರರೂ ಮತ್ತು ಗೂಂಡಾ ಜನರೂ ಸೇರಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ವಶಪಡಿಸಿಕೊಂಡಿದ್ದಾರೆ. ಈ ಜನರಿಗೆ ಕಾಂಗ್ರೆಸ್ಸಿನ ರೀತಿ ನೀತಿಗಳಲ್ಲಿ ಮತ್ತು ಧ್ಯೇಯ ಧೋರಣೆಗಳಲ್ಲಿ ಎಳ್ಳಷ್ಟೂ ನಂಬಿಕೆಯಿಲ್ಲ. ಬಡಬಗ್ಗರ ವಿಚಾರದಲ್ಲಿ ಸ್ವಲ್ಪವೂ ಕನಿಕರವಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ, ಕಾಂಗ್ರೆಸ್ಸಿನವರಿಗಿರ ಬೇಕಾದ ಯಾವ ಅರ್ಹತೆಯೂ ಅವರಿಗಿಲ್ಲ. ಆದ್ದರಿಂದ ಅವರನ್ನು ಕಾಂಗ್ರೆಸ್ಸಿನವರೆಂದು ಕರೆಯಲು ನಾನು ಸಿದ್ಧನಾಗಿಲ್ಲ. ನೀವೆಲ್ಲರೂ ದೇಶಕ್ಕೋಸ್ಕರ ದುಡಿದು ತ್ಯಾಗ ಮಾಡಿದವರು. ನಿಮ್ಮಲ್ಲಿ ಹಳಬರಾದವರು ಸ್ವರಾಜ್ಯಕ್ಕೆ

ಪೂರ್ವ ಗಾಂಧೀಜಿಯವರ ಸೈನ್ಯದಲ್ಲಿ ಸೈನಿಕರಾಗಿ ಸೇರಿದ್ದಾಗ ನಿಮಗೆ ಸ್ಥಾನ ಮಾನಗಳ ಆಸೆಯಿರಲಿಲ್ಲ. ಸತ್ಯಕ್ಕಾಗಿ ಮತ್ತು ಜನತೆಯ ಕಲ್ಯಾಣಕ್ಕಾಗಿ ಹೋರಾಟಮಾಡುವ ಸಲುವಾಗಿ, ಅಂದು ನೀವು ಕಾಂಗ್ರೆಸ್ಸಿಗೆ ಸೇರಿದ್ದೀರಿ. ನೀವು ಸೆರೆಮನೆಗಳಿಗೆ ಹೋಗಿ ತ್ಯಾಗ ಮಾಡಿದ್ದು ಕಾಳಸಂತೆಯವರ ಪ್ರಯೋಜನಕ್ಕಾಗಿಯೂ ಅಲ್ಲ; ಲಾಭ ಬಡುಕರ ಏಳಿಗೆಗಾಗಿಯೂ ಅಲ್ಲ; ಲಾಭಕೋರರ ರಕ್ಷಣೆಗಾಗಿಯೂ ಅಲ್ಲ; ಸರ್ವಜನರ ಹಿತಕ್ಕಾಗಿ: ದೀನ ದಲಿತರ ಉದ್ಧಾರಕ್ಕಾಗಿ.

"ಸ್ವಾತಂತ್ರ್ಯ ಸಮರದಲ್ಲಿ ಹೋರಾಡಿ ತ್ಯಾಗಮಾಡಿದವರು ಇಂದು ಕಸಕ್ಕಿಂತಲೂ ಕಡೆಯಾಗಿದ್ದಾರೆ. ಅಷ್ಟೇ ಅಲ್ಲ, ದುಷ್ಟ ಶಕ್ತಿಗಳ ಕಿರುಕುಳದಿಂದ ತತ್ತರಿಸಿ ಹೋಗಿದ್ದಾರೆ. ಸತ್ಯ, ದೇವರು, ಧರ್ಮ ಇವುಗಳಲ್ಲಿ ನಂಬಿಕೆಯನ್ನೂ ಕೂಡ ಕಳೆದುಕೊಳ್ಳುವ ಕಾಲ ಬಂದಿದೆ. ಈ ದುಷ್ಟ ಶಕ್ತಿಗಳನ್ನು ಸ್ಮರಿಸಿಕೊಂಡಾಗ ಪ್ರಜಾಪ್ರಭುತ್ವ ಬೇಡವೆನಿಸುತ್ತದೆ. ಸತ್ಯ ನಶಿಸುತ್ತಾ ಇದೆ; ಅಸತ್ಯ ಹುಲುಸಾಗಿ ಬೆಳೆಯುತ್ತಾ ಇದೆ. ಸತ್ಯ ಮಾನವ ಕಲ್ಯಾಣದ ಉಸಿರು. ಆ ಉಸಿರು ನಿಂತಾಗ ಮಾನವ ಕಲ್ಯಾಣವೆಲ್ಲಿ? ಸತ್ಯಕ್ಕಿಂತ ಸಂಸ್ಥೆ ಹೆಚ್ಚಲ್ಲ. ನಮ್ಮ ನೆಚ್ಚಿನ ನಾಯಕ ಮೋಹನನಿಗಾಗಿ ಇದುವರೆಗೆ ಸಮ್ಮನಿದ್ದುದಾಯಿತು. ದುಷ್ಟರು ಮೋಹನನಿಗೆ ಕೊಡುತ್ತಿರುವ ಕಷ್ಟ ಅವರ್ಣನೀಯವಾದುದು. ಸತ್ಯ ಅಹಿಂಸೆ ಹೆಸರಿನಲ್ಲಿ ಅವರು ಅವುಗಳನ್ನು ಸುಮ್ಮನೆ ಸಹಿಸುತ್ತಿದ್ದಾನೆ. ಸಂಸ್ಥೆಯ ಮತ್ತು ಶಿಸ್ತಿನ ಹೆಸರಿನಲ್ಲಿ ಎಷ್ಟು ಕಾಲ ಈ ಅನ್ಯಾಯ ಪರಂಪರೆಯನ್ನು ಸಹಿಸುವುದು?

"ಸತ್ಯ ಧರ್ಮಗಳಿಗೆ ಚ್ಯುತಿ ಬಂದಾಗ, ಸತ್ಯದ ಹೆಸರಿನಲ್ಲಿ ಅಸತ್ಯ ನಡೆಯುತ್ತಿರುವಾಗ, ಧರ್ಮದ ಹೆಸರಿನಲ್ಲಿ ಅಧರ್ಮ ನಡೆಯುತ್ತಿರುವಾಗ, ಸುಮ್ಮನಿರುವುದು ಹೇಡಿತನ. ಪವಿತ್ರಪುರದಲ್ಲಿ ದುಷ್ಟ ಶಕ್ತಿಗಳ ಕೈಯಲ್ಲಿ ಸೆರೆಯಾಗಿರುವ ಕಾಂಗ್ರೆಸ್ಸನ್ನು ಬಿಡುಗಡೆಮಾಡುವ ಸಲುವಾಗಿ ನಾವಿಂದು ದೃಢ ಪ್ರತಿಜ್ಞೆಯನ್ನು ಮಾಡೋಣ. ಹೋರಾಟ ನಿಮಗೇನೂ ಹೊಸದಲ್ಲ. ಬ್ರಿಟಿಷ್ ಸಾಮ್ರಾಜ್ಯಷಾಹಿ ಯನ್ನು ದಿಟ್ಟತನದಿಂದ ಎದುರಿಸಿದ ನೀವು ರಂಗನಾಥ, ಕಲ್ಲಪ್ಪನಂತಹ ಲಂಚಕೋರ ಹೇಡಿಗಳನ್ನು ಎದುರಿಸುವುದು ಕಷ್ಟವೇನೂ ಅಲ್ಲ. ತಾಲ್ಲೂಕು ಕಾಂಗ್ರೆಸ್ ಸಮಿತಿಯ ವಿರುದ್ಧ ಗಾಂಧೀಜಿಯವರು ನಮಗೆ ಹೇಳಿಕೊಟ್ಟಿರುವ ಅಸಹಕಾರ ಚಳವಳಿ ಅತ್ಯಾವಶ್ಯಕವಾಗಿ ಪರಿಣಮಿಸಿದೆ. ಮೋಹನನು ಈ ಚಳವಳಿಯ ನಾಯಕನಾಗಬೇಕೆಂದು ತಮ್ಮೆಲ್ಲರ ಪರವಾಗಿ ಅವನನ್ನು ಪ್ರಾರ್ಥಿಸುತ್ತೇನೆ. ಗಾಂಧೀಜಿಯವರ ಆತ್ಮ ನಮ್ಮ ಮುಂದಿನ ಹಾದಿಗೆ ಬೆಳಕನ್ನು ತೋರಿಸಲಿ. ನೀಡಲಿ. ಅಣುರೇಣು ತೃಣಕಾಷ್ಠ ಸಮಸ್ತ ಜೀವಿಗಳಲ್ಲಿ ಜೀವಿಸುವ ಜಗನ್ಮಾತೆ ನಮಗೆ ಜಯವನ್ನು ಕರುಣಿಸಲಿ"

ಅಲ್ಲಿ ನೆರೆದಿದ್ದವರು ಮೂರ್ತಿಯ ಸ್ಫೂರ್ತಿದಾಯಕ ಮಾತುಗಳಿಗೆ ಮಾರುಹೋಗಿದ್ದರು. ಪವಿತ್ರಪುರದ ಕಲುಷಿತ ರಾಜಕಾರಣದ ರೋಗಕ್ಕೆ ಮೂರ್ತಿಯ ಸೂತ್ರ ಸಿದ್ಧೌಷಧವೆಂದು ಅವರು ತಲೆದೂಗಿದರು. ಮೋಹನ ಮಾತ್ರ ಯಾವುದೋ ಚಿಂತೆಯಲ್ಲಿ ಮೌನವಾಗಿದ್ದನು. ಮಾತನಾಡುವ ಆಸೆ ಅವನಿಗಿರಲಿಲ್ಲ. ಎಲ್ಲರೂ

ಒತ್ತಾಯಪಡಿಸಿದ್ದರಿಂದ ನಿರ್ವಾಹವಿಲ್ಲದೆ ಮಾತನಾಡಿದನು. ಅವನ ಮಾತುಗಳು ಈ ರೀತಿ ಇದ್ದವು.

"ಮಿತ್ರರೇ, ಮೂರ್ತಿಯ ವೀರಾವೇಶದ ಮಾತುಗಳನ್ನು ಇದುವರೆಗೂ ಕೇಳುತ್ತಿದ್ದೀರಿ. ಬಹುಶಃ ನಿಮ್ಮೆಲ್ಲರ ಅಭಿಪ್ರಾಯಗಳನ್ನು ಅವನು ಪ್ರತಿಬಿಂಬಿಸಿದ್ದಾನೆ. ಅವನು ಹೇಳಿದ್ದರಲ್ಲಿ ಸತ್ಯವಿದೆ. ಪವಿತ್ರಪುರದ ರಾಜಕೀಯ ರೋಗಕ್ಕೆ ಪ್ರಬಲವಾದ ಶಸ್ತ್ರಚಿಕಿತ್ಸೆ ಅವಶ್ಯಕವೆಂಬುದನ್ನು ನಾನು ಒಪ್ಪುತ್ತೇನೆ. ದೇಹದಲ್ಲಿರುವ ಹುಣ್ಣನ್ನು ತೆಗೆಯುವ ಸಲುವಾಗಿ ಶಸ್ತ್ರ ಚಿಕಿತ್ಸೆ ಮಾಡುವಾಗ ಜೀವಕ್ಕೆ ಅಪಾಯವಾಗದ ರೀತಿಯಲ್ಲಿ ಶಸ್ತ್ರ ಪ್ರಯೋಗ ಮಾಡಬೇಕು. ಶಸ್ತ್ರ ಪ್ರಯೋಗದ ನಂತರ ರೋಗಿ ಮೊದಲಿಗಿಂತಲೂ ಆರೋಗ್ಯವಾಗಿ ಬಾಳುವಂತಾಗಿರಬೇಕು. ಅದೇ ರೀತಿಯಲ್ಲಿ ಕಾಂಗ್ರೆಸ್ಸಿನಲ್ಲಿ ಸೇರಿಕೊಂಡಿರುವ ದುಷ್ಟ ಶಕ್ತಿ ಹೊರದೂಡುವಾಗ ಕಾಂಗ್ರೆಸ್ಸಿನ ಮತ್ತು ದೇಶದ ಹಿತಕ್ಕೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದು ಅವಶ್ಯಕ. ಎಂದಾದರೊಂದು ದಿನ ದುಷ್ಟಶಕ್ತಿಗಳನ್ನು ಹೊರದೂಡುವ ಕಾರ್ಯ ನಡೆಯಲೇಬೇಕು. ಅವರನ್ನು ಹೊರದೂಡದಿದ್ದಲ್ಲಿ ಅವರೇ ನಮ್ಮನ್ನು ಕಾಲಕ್ರಮೇಣ ಹೊರದೂಡುತ್ತಾರೆ. ಆದರೆ ಇದು ಕಾಂಗ್ರೆಸ್ಸಿನಲ್ಲಿ ಒಡಕನ್ನುಂಟುಮಾಡುವ ಕಾಲವಲ್ಲ. ನೆರೆಹೊರೆಯ ಕೆಲವು ದೇಶಗಳು ನಮ್ಮ ಪ್ರಗತಿಯನ್ನು ನೋಡಿ ಅಸೂಯೆಯಿಂದ ನಮ್ಮ ವಿರುದ್ಧ ದುರುದ್ದೇಶದ ಭಾವನೆಯನ್ನು ತಾಳಿರುವಾಗ ನಾವು ಬಹಳ ಎಚ್ಚರಿಕೆಯಿಂದ ವರ್ತಿಸಬೇಕು. ನಮ್ಮ ದೇಶದ ಒಗ್ಗಟ್ಟಿಗೆ ಭಂಗ ಬರುವ ಯಾವ ಆಂದೋಳನವನ್ನೂ ಮಾಡಬಾರದು. ನಾನು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಿಗೆ ಈ ದುಷ್ಟ ಶಕ್ತಿಗಳ ದೌರ್ಜನ್ಯಗಳ ವಿಚಾರದಲ್ಲಿ ಸವಿಸ್ತಾರವಾಗಿ ಬರೆದಿರುತ್ತೇನೆ. ಅವರೇನು ಮಾಡುತ್ತಾರೆಂಬುದನ್ನು ಕಾದು ನೋಡೋಣ. ಸ್ವಲ್ಪಕಾಲ ಶಾಂತಿಯಿಂದ ಇರಿ.

"ತನ್ನ ಉದ್ವೇಗದ ಭರದಲ್ಲಿ, ಪ್ರಜಾಪ್ರಭುತ್ವದಲ್ಲಿ ತನಗೆ ನಂಬಿಕೆ ಕಡಿಮೆಯಾಗುತ್ತಾ ಇದೆಯೆಂದು ಮೂರ್ತಿ ಹೇಳಿದನು. ಅವನ ಮಾತಿನ ಧಾಟಿಯನ್ನು ನೋಡಿದರೆ ಅವನ ಮೇಲೆ ನಮ್ಮ ತಾಲ್ಲೂಕಿನ ಕೆಲವು ಕಮ್ಯೂನಿಸ್ಟ್ ಯುವಕರ ಗಾಳಿ ಬೀಸಿರುವಂತೆ ತೋರುತ್ತದೆ. ಜಗತ್ತಿನಲ್ಲಿ ಮಾನವ ಸಂಸ್ಕೃತಿ ಆರಂಭವಾದಂದಿನಿಂದ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳೂ, ಆಡಳಿತವೂ ಹೇಗಿರಬೇಕೆಂಬ ವಿಚಾರದಲ್ಲಿ ಮಾನವರು ನಾನಾ ವಿಧವಾದ ಪ್ರಯೋಗಗಳನ್ನು ಮಾಡುತ್ತಾ ಬಂದಿದ್ದಾರೆ. ಈ ಪ್ರಯೋಗಗಳ ಪರಿಣಾಮವಾಗಿ ಪ್ರಜಾಪ್ರಭುತ್ವವೇ ಶ್ರೇಷ್ಠವಾದ ಆಡಳಿತ ವ್ಯವಸ್ಥೆ ಎಂಬುದನ್ನು ಜಗತ್ತಿನ ಬಹು ಜನರು ಒಪ್ಪಿರುತ್ತಾರೆ. ಮಾನವರು ಅಪರಿಪೂರ್ಣ ಜೀವಿಗಳು. ಅಪರಿಪೂರ್ಣ ಜೀವಿಗಳು ನಿರ್ಮಿಸುವ ವ್ಯವಸ್ಥೆಗಳು ಪರಿಪೂರ್ಣವಾಗಿರಲಾರವು. ಜಗತ್ತಿನಲ್ಲಿ ಹಲವಾರು ರಾಜಕೀಯ ಸಿದ್ಧಾಂತಗಳಿವೆ. ಆದರೆ ಯಾವ ಸಿದ್ಧಾಂತವೂ ಸರ್ವಸಮರ್ಪಕವಾಗಿಲ್ಲ. ಎಲ್ಲಾ ಸಿದ್ಧಾಂತಗಳಲ್ಲಿಯೂ ಸಾಧಕ ಭಾದಕಗಳಿರುತ್ತವೆ. ಮಾನವರಿಗೋಸ್ಕರ ಸಿದ್ಧಾಂತಗಳಿರಬೇಕೇ ಹೊರತು ಸಿದ್ಧಾಂತಗಳಿಗೋಸ್ಕರ ಮಾನವರಿರುವುದಕ್ಕಾಗುವುದಿಲ್ಲ.

"ನಮಗಿಂದು ಬೇಕಾಗಿರುವುದು ನಮ್ಮ ದೇಶದ ಅಸಂಖ್ಯಾತ ಜನರಿಗೆ ಸುಖ, ಶಾಂತಿ ಮತ್ತು ಸ್ವಾತಂತ್ರ್ಯಗಳನ್ನು ನೀಡತಕ್ಕ ಸಿದ್ಧಾಂತ. ಪ್ರಜಾಪ್ರಭುತ್ವದಲ್ಲಿ ಲೋಪದೋಷಗಳಿರುವುದು ಸ್ವಾಭಾವಿಕ. ಆದರೆ ಜನ ಜಾಗೃತಿ ಹೆಚ್ಚಿದ ಹಾಗೆಲ್ಲಾ ಲೋಪದೋಷಗಳು ಕ್ರಮೇಣ ಕಡಿಮೆಯಾಗುತ್ತಾ ಹೋಗುತ್ತವೆ. ಪ್ರಜಾಪ್ರಭುತ್ವದಲ್ಲಿ ಎಷ್ಟೇ ಲೋಪದೋಷಗಳಿದ್ದರೂ ಅದು ಸರ್ವಾಧಿಕಾರ ಪ್ರಭುತ್ವಕ್ಕಿಂತ ಸಾವಿರಪಾಲು ಮೇಲು. ಪ್ರಜಾಪ್ರಭುತ್ವದಲ್ಲಿ ರಂಗನಾಥ ಮತ್ತು ಕಲ್ಲಪ್ಪನಂತಹ ಪುಢಾರಿಗಳನ್ನು ಸುಲಭವಾಗಿ ತೆಗೆದು ಹಾಕಬಹುದು. ಅಂತಹವರಿಗೆ ಪಾಠವನ್ನೂ ಸಹ ಕಲಿಸಬಹುದು. ಸರ್ವಾಧಿಕಾರ ಪದ್ಧತಿಯಲ್ಲಿ ಅವರಂತಹ ದುಷ್ಟರ ಕೈಯಲ್ಲಿ ಅಧಿಕಾರ ಸಿಕ್ಕರೆ ಅವರಿಂದ ಅಧಿಕಾರವನ್ನು ಕಿತ್ತುಕೊಳ್ಳುವುದು ಅಸಾಧ್ಯವಾಗುತ್ತದೆ. ಅಲ್ಲದೆ ಅವರ ರಾಜಕೀಯ ವಿರೋಧಿಗಳು ಜೀವ ಸಮೇತ ಇರುವುದೂ ಕಷ್ಟವಾಗುತ್ತದೆ. ಜಗತ್ತಿನಲ್ಲಿ ಮಾನವರು ಅನುದಿನವೂ ಪ್ರಗತಿಯ ಪಥದಲ್ಲಿ ಮುನ್ನಡೆಯುತ್ತಿದ್ದಾರೆ. ಅನುದಿನವೂ ಜಗತ್ತಿನ ಸನ್ನಿವೇಶವೂ, ಮಾನವರ ಬಯಕೆ ಭಾವನೆಗಳೂ ಬದಲಾವಣೆಯಾಗುತ್ತಾ ಹೋಗುತ್ತವೆ. ಈ ಬದಲಾವಣೆಗನುಣವಾಗಿ ರಾಜಕೀಯ ಮತ್ತು ಆರ್ಥಿಕ ಸಿದ್ಧಾಂತಗಳು ಬದಲಾವಣೆ ಹೊಂದಬೇಕು. ಇಂದು ಹೊಸದೆಂದು ಪರಿಗಣಿಸಲ್ಪಟ್ಟ ಸಿದ್ಧಾಂತ ನಾಳೆ ಹಳೆಯದಾಗುತ್ತದೆ ಯಾವುದೋ ಕಾಲದಲ್ಲಿ ಯಾವುದೋ ದೇಶಕ್ಕೆ ಸರಿಯೆನಿಸಿಕೊಂಡಿದ್ದ ಸಿದ್ಧಾಂತ ಎಲ್ಲ ಕಾಲಕ್ಕೂ, ಎಲ್ಲ ದೇಶಗಳಿಗೂ ಸರಿಹೋಗುತ್ತದೆ ಎಂಬುದು ಶುದ್ಧ ತಪ್ಪು ನಾವಿಂದು ವೈಜ್ಞಾನಿಕ ಯುಗದಲ್ಲಿದ್ದೇವೆ. ಈ ಯುಗಕ್ಕೆ ಹೊಂದುವ, ಈ ಯುಗದ ಜನರ ಆಸೆ ಆಕಾಂಕ್ಷೆಗಳನ್ನು ತೃಪ್ತಿಪಡಿಸುವ ಸಿದ್ಧಾಂತವನ್ನು ರೂಪಿಸುವುದು ಅವಶ್ಯಕ."

ಮೋಹನನ ಮಾತುಗಳನ್ನು ಕೇಳಿದ ಗೆಳೆಯರು ಮನಸ್ಸಿನಲ್ಲಿ ಸ್ವಲ್ಪ ಗೊಣಗಿದರೂ ಮರುಮಾತನಾಡಲಿಲ್ಲ. ಅವನ ಮಾತುಗಳನ್ನು ಅಲ್ಲಗಳೆಯುವ ಹಾಗೆಯೂ ಇರಲಿಲ್ಲ. ಅಲ್ಲದೆ ಅವನ ಮಾತನ್ನು ಮೀರಿ ಅವರೇನಾದರೂ ಮಾಡಬೇಕೆಂದು ಹೊರಟಿದ್ದರೆ ಅವರಿಗೆ ಜನಬೆಂಬಲವೂ ಸಿಕ್ಕುತ್ತಿರಲಿಲ್ಲ. ಆದ್ದರಿಂದ ಪುನಃ ಚರ್ಚೆಗೆ ಆಸ್ಪದ ಕೊಡದೆ ಸಭೆಯ ಕಾರ್ಯಕಲಾಪಗಳನ್ನು ಮುಗಿಸಿದರು.

# ೧೭. ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ವಿಸರ್ಜನೆ

ರಂಗನಾಥನೂ, ಅವನ ಸ್ನೇಹಿತರೂ ಕಾಂಗ್ರೆಸ್ಸಿಗೆ ಮತ್ತು ಸಾರ್ವಜನಿಕರ ಹಿತಕ್ಕೆ ವಿರುದ್ಧವಾಗಿ ಮಾಡಬಾರದ ಕೆಲಸಗಳನ್ನು ಮಾಡುತ್ತಿದ್ದಾರೆಂಬ ದೂರುಗಳು ಪದೇ ಪದೇ ಅಖಿಲ ಭಾರತ ಕಾಂಗ್ರೆಸ್ ಕಛೇರಿಗೆ ಹೋಗುತ್ತಿದ್ದವು. ಈ ದೂರುಗಳ ನಿಜಾಂಶವನ್ನು ಕಂಡು ಹಿಡಿಯಲು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರು ಒಬ್ಬ ಹಿರಿಯ ಕಾಂಗ್ರೆಸ್ ಕಾರ್ಯಕರ್ತರನ್ನು ಗುಟ್ಟಾಗಿ ಪವಿತ್ರಪುರಕ್ಕೆ ಕಳುಹಿಸಿದ್ದರು. ಆ ಕಾರ್ಯಕರ್ತರು ತಾವಾರೆಂಬುದನ್ನು ಯಾರಿಗೂ ತಿಳಿಸದೆ, ತಾಲ್ಲೂಕಿನ ಆದ್ಯಂತ ಪ್ರವಾಸ ಮಾಡಿ ಜನಾಭಿಪ್ರಾಯವನ್ನು ಸಂಗ್ರಹಿಸಿ, ಕಾಂಗ್ರೆಸ್ ಅಧ್ಯಕ್ಷರಿಗೆ ಗುಪ್ತ ವರದಿಯೊಂದನ್ನು ಕಳುಹಿಸಿದ್ದರು. ಅವರು ತಮ್ಮ ವರದಿಯಲ್ಲಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯಲ್ಲಿರತಕ್ಕ ಜನರು ಕಾಂಗ್ರೆಸ್ಸಿನಲ್ಲಿರಲು ಯೋಗ್ಯರಲ್ಲವೆಂದೂ, ಅವರನ್ನು ಕಾಂಗ್ರೆಸ್ಸಿನಿಂದ ತೆಗೆದುಹಾಕದಿದ್ದರೆ ಪವಿತ್ರಪುರ ತಾಲ್ಲೂಕಿನ ಜನರು ಕಾಂಗ್ರೆಸ್ಸನ್ನೇ ತೆಗೆದು ಹಾಕಿಬಿಡುತ್ತಾರೆಂದೂ, ಆದ್ದರಿಂದ ರಂಗನಾಥ ಮುಂತಾದವರನ್ನು ವಿಚಾರಣೆಗೆ ಗುರಿಪಡಿಸಬೇಕೆಂದೂ, ವಿಚಾರಣೆಗೆ ಪೂರ್ವಭಾವಿಯಾಗಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ವಿಸರ್ಜನೆ ಮಾಡಿ ಮೋಹನನ ಅಧ್ಯಕ್ಷತೆಯಲ್ಲಿ ಒಂದು ತಾತ್ಕಾಲಿಕ ಸಮಿತಿಯನ್ನು ನೇಮಕ ಮಾಡಬೇಕೆಂದೂ ಶಿಫಾರಸ್ಸು ಮಾಡಿದ್ದರು.

ಕಾಂಗ್ರೆಸ್ ಅಧ್ಯಕ್ಷರು ಆ ವರದಿಯನ್ನು ಒಪ್ಪಿಕೊಂಡು, ಮುಂದಿನ ತನಿಖೆಗೆ ಪೂರ್ವಭಾವಿಯಾಗಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ವಿಸರ್ಜನೆ ಮಾಡಿ, ಮೋಹನನ ಅಧ್ಯಕ್ಷತೆಯಲ್ಲಿ ತಾತ್ಕಾಲಿಕ ಸಮಿತಿಯೊಂದನ್ನು ನೇಮಕ ಮಾಡಿದರು. ಕಾಂಗ್ರೆಸ್ ಅಧ್ಯಕ್ಷರ ಈ ಅನಿರೀಕ್ಷಿತ ನಿರ್ಧಾರವು ರಂಗನಾಥ ಮಿತ್ರಮಂಡಳಿಯವರಿಗೆ ಸಿಡಿಲು ಬಡಿದಂತೆ ಆಗಿತ್ತು. ಅವರು ಆ ನಿರ್ಧಾರಕ್ಕೆ ತಲೆಬಾಗುವುದು ವಿನಾ ಇನ್ನಾವ ಮಾರ್ಗವೂ ಇರಲಿಲ್ಲ. ಕಾಂಗ್ರೆಸ್ ಅಧ್ಯಕ್ಷರ ನಿರ್ಧಾರದಿಂದ ಅವರಿಗೆ ಬಹಳ ಅವಮಾನವಾಗಿತ್ತು. ಈ ಅವಮಾನಕರ ಪ್ರಸಂಗದಿಂದ ಹೇಗೆ ಪಾರಾಗಬೇಕೆಂಬುದನ್ನು ಯೋಚಿಸಿದರು. ಮೋಹನನು ರಾಜಿ ಸಂಧಾನಕ್ಕೆ ಒಪ್ಪುವುದಾದರೆ ಅವನೊಡನೆ ರಾಜಿಮಾಡಿಕೊಳ್ಳಲು ಅವರು ಸಿದ್ಧವಾಗಿದ್ದರು. ಮೋಹನನೊಡನೆ ಮಾತುಕತೆ ನಡೆಸುವುದಕ್ಕಾಗಿ ಅವರು ಕಲ್ಲಪ್ಪನನ್ನು ಕಳಿಸಿಕೊಟ್ಟರು. ಕಲ್ಲಪ್ಪನು "ಕೆಳಗೆ ಬಿದ್ದಾಗ ಕಾಲು ಹಿಡಿ, ಮೇಲಕ್ಕೆ ಎದ್ದಾಗ ಜುಟ್ಟು ಹಿಡಿ" ಎಂಬ ಗಾದೆಗೆ ಅನುಸಾರವಾಗಿ ನಡೆಯುವ ವ್ಯಕ್ತಿಯಾಗಿದ್ದನು. ಸಮಯ ಬಂದಾಗ ಯಾರ ಕಾಲುಗಳನ್ನಾದರೂ ಹಿಡಿಯಲು ಅವನು ಹಿಂಜರಿಯುತ್ತಿರಲಿಲ್ಲ. ತನ್ನ ಕಾರ್ಯಸಾಧನೆಗಾಗಿ ದುಃಖವಿಲ್ಲದೆ ಕಣ್ಣೀರು ಹಾಕುವುದನ್ನು ಅಭ್ಯಾಸ ಮಾಡಿದ್ದನು.

ಎಂದೂ ಪಂಜರವಳ್ಳಿಯನ್ನು ನೋಡದಿದ್ದ ಕಲ್ಲಪ್ಪನು ಮೋಹನನ ಭೇಟಿಗಾಗಿ ಪಂಜರವಳ್ಳಿಗೆ ಹೋದನು. ಪಂಜರವಳ್ಳಿಯಲ್ಲಿ ಮೊದಲು ನಾಗೇಂದ್ರನ ಮನೆಗೆ ಹೋಗಿ, ರಾಜಿ ಸಂಧಾನಕ್ಕಾಗಿ ತನ್ನೊಡನೆ ಮೋಹನನ ಮನೆಗೆ ಬರಬೇಕೆಂದು ನಾಗೇಂದ್ರನನ್ನು ಪ್ರಾರ್ಥಿಸಿದನು. ನಾಗೇಂದ್ರನಿಗೆ ದುಷ್ಟರ ಸಹವಾಸದಿಂದ ಸಾಕಾಗಿ ಹೋಗಿತ್ತು. ಕಾಂಗ್ರೆಸ್ ಅಧ್ಯಕ್ಷರು ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ವಿಸರ್ಜನೆ ಮಾಡಿದ್ದು ನಾಗೇಂದ್ರನಿಗೆ ಬಹಳ ಒಳ್ಳೆಯದಾಗಿ ತೋರಿತ್ತು. ಅವನು ಸನ್ನಿವೇಶವನ್ನುಪಯೋಗಿಸಿಕೊಂಡು ರಾಜಕಾರಣವನ್ನು ಬಿಡಬೇಕೆಂದು ತೀರ್ಮಾನಮಾಡಿದ್ದನು. ಕಲ್ಲಪ್ಪನನ್ನು ಕುರಿತು ವ್ಯಂಗ್ಯವಾಗಿ ತಾನು ತಾಲ್ಲೂಕಿನ ನಾಯಕನಾಗುವ ಹಂಬಲದಲ್ಲಿ ಇಲ್ಲವಾಗಿಯೂ, ಕಾಂಗ್ರೆಸ್ ಅಧ್ಯಕ್ಷರ ಆದೇಶ ಬಂದ ದಿನವೇ ತಾನು ರಾಜಕಾರಣವನ್ನು ಬಿಟ್ಟಿರುವುದಾಗಿಯೂ ಹೇಳಿದನು. ನಾಗೇಂದ್ರನು ಇಷ್ಟು ನಿಷ್ಠುರವಾಗಿ ಮಾತನಾಡುವನೆಂದು ಕಲ್ಲಪ್ಪನು ತಿಳಿದಿರಲಿಲ್ಲ. ಹಿಂದೆ ರಂಗನಾಥನ ಮನೆಯಲ್ಲಿ ಟೋಪಿಯನ್ನು ತಿರುಗಿಸಿ ಹಾಕಬಾರದೆಂದು ಕಲ್ಲಪ್ಪನು ಹೇಳಿದ್ದನ್ನು ನಾಗೇಂದ್ರನು ಮರೆತಿಲಿಲ್ಲ. ಆದ್ದರಿಂದಲೇ ಆ ದಿನ ಆ ರೀತಿ ಅವನು ಕಂಠೋಕ್ತನಾಗಿ ಮಾತನಾಡಿದ್ದನು. ತನ್ನನ್ನೂ, ರಂಗನಾಥನನ್ನೂ ಕೈಬಿಡಬಾರದೆಂದು ಕಲ್ಲಪ್ಪನು ನಾಗೇಂದ್ರನನ್ನು ಅತಿವಿನಯದಿಂದ ಪ್ರಾರ್ಥಿಸಿದನು. ನಾಗೇಂದ್ರನು ಕೇಳುವಷ್ಟು ಕೇಳಿ "ನಿಮ್ಮ ಸಹವಾಸ ಸಾಕು" ಎಂದನು.

ನಾಗೇಂದ್ರನ ಜವಾಬನ್ನು ಕೇಳಿ ಕಲ್ಲಪ್ಪನಿಗೆ ಆಶ್ಚರ್ಯವೂ, ಕೋಪವೂ ಉಂಟಾಯಿತು. ಆದರೆ ಅವನು ನಾಗೇಂದ್ರನಿಗೆ ಏನು ಮಾಡುವ ಹಾಗೆಯೂ ಇರಲಿಲ್ಲ. ನಾಗೇಂದ್ರನೊಡನೆ ಮುನಿಸಿಕೊಂಡು ಕಲ್ಲಪ್ಪನು ತಾನೊಬ್ಬನೇ ಮೋಹನನ ಮನೆಗೆ ಹೋದನು. ಹಿಂದೆ ಯಾವಾಗಲೂ ಅವನು ಮೋಹನನನ್ನು ತಿರಸ್ಕಾರ ಭಾವನೆಯಿಂದ ನೋಡುತ್ತಿದ್ದನು. ಆ ದಿನ ಬಹಳ ಗೌರವದಿಂದ ಮೋಹನನೊಡನೆ ವರ್ತಿಸಿದನು. ತಾಲ್ಲೂಕಿನ ಹಿತದೃಷ್ಟಿಯಿಂದ ಉಭಯ ಗುಂಪುಗಳೂ ಭಿನ್ನಾಭಿಪ್ರಾಯವನ್ನು ಮರೆತು ಒಂದುಗೂಡಿಸುವುದು ಅವಶ್ಯಕವೆಂದು ಕಂಡು ಬಂದಿದ್ದರಿಂದ ತಾನು ಪಂಜರವಳ್ಳಿಗೆ ಬಂದಿರುವುದಾಗಿ ತನ್ನ ಮಾತನ್ನು ಪ್ರಾರಂಭಿಸಿ, ಆನಂತರ ಗುಂಪುಗಳ ವಿಚಾರವನ್ನೇ ಬಿಟ್ಟು ತಾವಿಬ್ಬರೂ ಒಂದಾದರೆ ಚಿಲ್ಲರೆ ಜನರೆಲ್ಲರೂ ಮೂಲೆ ಸೇರುತ್ತಾರೆಂದೂ, ಇಬ್ಬರೂ ಸೇರಿ ತಾಲ್ಲೂಕನ್ನು ನಿರಾತಂಕವಾಗಿ ಆಳಬಹುದೆಂದೂ, ಮೋಹನನನ್ನು ಪುಸಲಾಯಿಸತೊಡಗಿದನು. ಮೋಹನನು ಕಲ್ಲಪ್ಪನ ವಿಚಾರವನ್ನು ಸಂಪೂರ್ಣವಾಗಿ ಅರಿತಿದ್ದನು. ಆದ್ದರಿಂದ ಅವನ ಮಾತಿಗೆ ಮರುಳಾಗುವಂತಿರಲಿಲ್ಲ. ಕಾಂಗ್ರೆಸ್ ಅಧ್ಯಕ್ಷರ ಆದೇಶದಂತೆ ಉಭಯ ಗುಂಪುಗಳೂ ನಡೆಯುವುದು ಅತ್ಯಾವಶ್ಯಕವೆಂದು ಹೇಳಿ, ಕಲ್ಲಪ್ಪನನ್ನು ಬಹಳ ಗೌರವದಿಂದ ಕಳುಹಿಸಿಕೊಟ್ಟನು.

ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ವಿಸರ್ಜನೆಯಾಗಿ ಅದರ ಬದಲು ಮೋಹನನ ಅಧ್ಯಕ್ಷತೆಯಲ್ಲಿ ಹಂಗಾಮಿ ಸಮಿತಿಯೊಂದು ನೇಮಕವಾಗಿದೆಯೆಂಬ ಸುದ್ದಿ ಒಂದೆರಡು ದಿನಗಳಲ್ಲಿಯೇ ತಾಲ್ಲೂಕಿನ ಆದ್ಯಂತ ಹಬ್ಬಿತ್ತು. ಅನೀರಿಕ್ಷಿತವಾಗಿ ತಮಗೆ ದೊರೆತ

ಜಯಕ್ಕಾಗಿ ನಿಷ್ಠಾವಂತರಾದ ಕಾಂಗ್ರೆಸ್ ಕೆಲಸಗಾರರು ಆನಂದಭರಿತರಾಗಿದ್ದರು. ಈ ಜಯಕ್ಕೆ ಮೋಹನನೇ ಕಾರಣಕರ್ತನೆಂದು ಅವನನ್ನು ಅಭಿನಂದಿಸಿದರು. ಹಿಂದೆ ಅವನನ್ನು ಹೇಡಿಯೆಂದು ಕರೆಯುತ್ತಿದ್ದವರೂ ಸಹ ಇಂದು ಅವನ ಮಾರ್ಗವೇ ಸರಿಯೆಂದು ಒಪ್ಪಿಕೊಂಡರು. ಜಯ ಲಭಿಸಿದಾಗ ಮೆರೆಯುವುದು ಒಳ್ಳೆಯದಲ್ಲವೆಂತಲೂ, ಎದುರಾಳಿಗಳನ್ನು ತಿರಸ್ಕಾರಭಾವನೆಯಿಂದ ನೋಡಬಾರದೆಂತಲೂ ಮೋಹನನು ತನ್ನ ಸ್ನೇಹಿತರಿಗೆ ಎಚ್ಚರಿಸುತ್ತಿದ್ದನು.

ಇತ್ತ ರಂಗನಾಥನ ಮತ್ತು ಅವನ ಸ್ನೇಹಿತರ ಪಾಡು ನಾಯಿಯ ಪಾಡಾಗಿತ್ತು. ಅವರನ್ನು ಕಾಂಗ್ರೆಸ್ಸಿನಿಂದ ತೆಗೆದುಹಾಕುತ್ತಾರೆಂಬ ವದಂತಿ ಬಲವಾಗಿ ಹಬ್ಬಿತ್ತು. ಜೀವನದಲ್ಲಿ ಎಂದೂ ಕಾಣದ ಅವಮಾನವನ್ನು ಅವರು ಸಹಿಸಬೇಕಾಯಿತು. ಮೋಹನನ ರಾಜಕೀಯ ಸಮಾಧಿಯನ್ನು ಮಾಡಲು ಹೋಗಿ ಆ ಸಮಾಧಿಯಲ್ಲಿ ತಾವೇ ಬಿದ್ದಿದ್ದರು. ಅವರನ್ನು ಅಧಿಕಾರಿಗಳು ಅಸಡ್ಡೆಯಿಂದ ಕಾಣುತ್ತಿದ್ದರು; ಸಾರ್ವಜನಿಕರು ತಿರಸ್ಕಾರದಿಂದ ನೋಡುತ್ತಿದ್ದರು. ಪೋಲಿಸ್ ಇನ್‌ಸ್ಪೆಕ್ಟರು ಮಾತ್ರ ಅವರೊಡನೆ ಆಗಾಗ ಗುಟ್ಟಾಗಿ ಸೇರುತ್ತಿದ್ದರು. ಪ್ರತಿದಿನವೂ ಕ್ಲಬ್ಬಿಗೆ ಹೋಗುತ್ತಿದ್ದಾಗ ರಂಗನಾಥನು ಅಲ್ಲಿಗೆ ಹೋಗುವುದನ್ನೇ ನಿಲ್ಲಿಸಿದನು. ದಿನಕ್ಕೆ ಎರಡು ಬಾರಿಯಾದರೂ ಅಮಲ್ದಾರರ ಕಛೇರಿಗೆ ಹೋಗುತ್ತಿದ್ದ ಕಲ್ಲಪ್ಪನು ತನ್ನ ಮನೆಯನ್ನು ಬಿಟ್ಟು ಹೊರಡುತ್ತಿರಲಿಲ್ಲ. ಅವನ ಹತ್ತಿರ ಗಿರಾಕಿಗಳಾರೂ ಸುಳಿಯುತ್ತಿರಲಿಲ್ಲ. ರಂಗನಾಥನೂ, ಪೋಲಿಸ್ ಇನ್‌ಸ್ಪೆಕ್ಟರೂ, ಸಂಕಪೂಜಾರಿಯೂ ತಮಗಾದ ಪರಾಭವವನ್ನು ಮರೆಯುವುದಕ್ಕಾಗಿ ಧಾರಾಳವಾಗಿ ಕುಡಿಯುತ್ತಿದ್ದರು. ತನ್ನ ಕಳ್ಳಭಟ್ಟಿ ಉದ್ಯಮದ ಭವಿಷ್ಯದ ವಿಚಾರದಲ್ಲಿಯೂ ಇನ್‌ಸ್ಪೆಕ್ಟರ್ ಇರುವವರೆಗೆ ಸಂಕಪೂಜಾರಿಗೆ ಭರವಸೆಯಿತ್ತು.

ಅನಿಷ್ಟ ಕೂಟದ ರಾಹುಕೇತುಗಳೆಲ್ಲಾ, ಒಂದುಕಡೆ ಸೇರಿ ತಮ್ಮ ಭವಿಷ್ಯವನ್ನು ಕುರಿತು ಮಾತುಕತೆ ನಡೆಸಿದರು. ಕಾಂಗ್ರೆಸ್ ಅಧ್ಯಕ್ಷರು ತಮ್ಮ ಮೇಲೆ ವಿಚಾರಣೆ ಪ್ರಾರಂಭವಾಗುವ ಮುಂಚೆಯೇ ಕಾಂಗ್ರೆಸ್ಸಿಗೆ ರಾಜೀನಾಮೆ ಕೊಡಬೇಕೆಂದು ತೀರ್ಮಾನಮಾಡಿ ಎಲ್ಲರೂ ಸೇರಿ ರಾಜೀನಾಮೆ ಕೊಟ್ಟರು.

ರಂಗನಾಥನೂ, ಅವನ ಸ್ನೇಹಿತರೂ, ಕಾಂಗ್ರೆಸ್ಸಿಗೆ ರಾಜೀನಾಮೆಯನ್ನು ಸಲ್ಲಿಸಿದನಂತರ ಸುಮ್ಮನೆ ಕುಳಿತಿರುವುದು ಅವರಿಗೆ ಬಹಳ ಕಷ್ಟವಾಗಿತ್ತು. ಅಲ್ಲದೆ ಮೋಹನನು ತಾಲ್ಲೂಕಿನ ಏಕೈಕನಾಯಕನಾಗಿ ಮೆರೆಯುತ್ತಿರುವುದನ್ನು ಅವರು ಎಳ್ಳಷ್ಟೂ ಸಹಿಸುತ್ತಿರಲಿಲ್ಲ. ಮೋಹನನಿಗೆ ವಿರುದ್ಧವಾಗಿ ಒಂದು ರಾಜಕೀಯ ಪಕ್ಷವನ್ನು ಸ್ಥಾಪಿಸುವುದು ಬಹಳ ಅವಶ್ಯಕವೆಂದು ಅವರಿಗೆ ತೋರಿತು. ಪಕ್ಷದ ಬೆಂಬಲವಿಲ್ಲದೆ ವ್ಯಕ್ತಿಗಳು ಬಿಡಿಬಿಡಿಯಾಗಿ ಮೋಹನನನ್ನೂ ಅವರ ಕಡೆಯವರನ್ನೂ ಎದುರಿಸುವುದು ಸುಲಭವಲ್ಲವೆಂದು ಅವರು ತಿಳಿಸಿದ್ದರು. ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟನಂತರ ಮೋಹನನ ಮೇಲೆ ಕುಪಿತರಾಗಿದ್ದ ಕೆಲವು ಭೂಮಾಲೀಕರನ್ನೂ, ಇತರ ಆಸಕ್ತ ಹಿತಶಕ್ತಿಗಳನ್ನೂ ಸೇರಿಸಿಕೊಂಡು "ಜನತಾ ಪಕ್ಷ" ಎಂಬ ಹೆಸರಿನಿಂದ ಅವರು ಹೊಸ

ರಾಜಕೀಯ ಪಕ್ಷವೊಂದನ್ನು ಸ್ಥಾಪಿಸಿದರು. ರಂಗನಾಥನು ಆ ಹೊಸ ಪಕ್ಷದ ಅಧ್ಯಕ್ಷನಾದನು. ಕಲ್ಲಪ್ಪನು ಕಾರ್ಯದರ್ಶಿಯಾದನು. ಕಾಂಗ್ರೆಸ್ ಪಕ್ಷದಲ್ಲಿ ನಿಷ್ಠಾವಂತರಿಗೆ ಸ್ಥಳವಿಲ್ಲವೆಂದೂ, ಆದ್ದರಿಂದ ಆ ಪಕ್ಷಕ್ಕೆ ತಾನೂ ತನ್ನ ಸ್ನೇಹಿತರೂ ರಾಜೀನಾಮೆಯನ್ನು ಕೊಡಬೇಕಾಗಿ ಬಂತೆಂದೂ, ಕಾಂಗ್ರೆಸ್ ಪಕ್ಷದ ನ್ಯೂನತೆಗಳನ್ನು ಹೋಗಲಾಡಿಸುವುದಕ್ಕಾಗಿ ಜನತಾ ಪಕ್ಷವನ್ನು ಸ್ಥಾಪಿಸಬೇಕಾಗಿ ಬಂತೆಂದೂ, ರಂಗನಾಥನು ಪತ್ರಿಕೆಗಳಲ್ಲಿ ಹೇಳಿಕೆಯನ್ನು ಕೊಟ್ಟಿದ್ದನು. ಮಂಗಳದಾಸನ ಹೆಸರಿನಲ್ಲಿ ಹೊರಡುತ್ತಿದ್ದ ಪತ್ರಿಕೆಯು ಹಿಂದೆ ಕಾಂಗ್ರೆಸ್ ಪಕ್ಷವನ್ನು ಹೊಗಳುತ್ತಿತ್ತು. ಇಂದು ಅದೇ ಪತ್ರಿಕೆ, ಅದೇ ಕಾಂಗ್ರೆಸ್ ಪಕ್ಷವನ್ನು ತೆಗಳಲಾರಂಭಿಸಿತು. ಪ್ರತಿದಿನವೂ ಆ ಪತ್ರಿಕೆಯಲ್ಲಿ ಮೋಹನನ ವಿರುದ್ಧ ಮತ್ತು ಕಾಂಗ್ರೆಸ್ಸಿನ ವಿರುದ್ಧ ಲೇಖನಗಳು ಬರತೊಡಗಿದವು. ದುಷ್ಟ ಶಕ್ತಿಗಳು ಕಾಂಗ್ರೆಸ್ಸಿನಲ್ಲಿ ಹೆಚ್ಚಾಗಿದ್ದುದರಿಂದ ನಿಷ್ಠಾವಂತರಾದ ರಂಗನಾಥನೂ, ಕಲ್ಲಪ್ಪನೂ ಜಿಗುಪ್ಸೆಯಿಂದ ಕಾಂಗ್ರೆಸ್ಸಿಗೆ ರಾಜಿನಾಮೆ ಕೊಟ್ಟಿದ್ದಾರೆಂದೂ, ಜನತಾ ಪಕ್ಷಕ್ಕೆ ಜನರು ಬೆಂಬಲ ನೀಡಬೇಕೆಂದೂ ಆ ಪತ್ರಿಕೆಯಲ್ಲಿ ಬರೆಯಲಾಗಿತ್ತು.

ಹೊಸ ಪಕ್ಷದ ರಚನೆಯಾದ ನಂತರ ತಾಲ್ಲೂಕಿನ ಕೆಲವು ಮುಖ್ಯ ಸ್ಥಳಗಳಲ್ಲಿ ಸಾರ್ವಜನಿಕ ಸಭೆಗಳನ್ನು ಸೇರಿಸಿ ಕಲ್ಲಪ್ಪನೂ, ರಂಗನಾಥನೂ ಆ ಪಕ್ಷದ ಧ್ಯೇಯ ಧೋರಣೆಗಳನ್ನು ಜನರಿಗೆ ವಿವರಿಸುತ್ತಾ ಇದ್ದರು. ಆ ಸಭೆಗಳಲ್ಲಿ ಅವರಿಬ್ಬರೂ ಸರ್ಕಾರವನ್ನೂ ಅಧಿಕಾರಗಳನ್ನೂ ತೀವ್ರವಾಗಿ ಟೀಕಿಸುತ್ತಿದ್ದರು. ಅಧಿಕಾರಿಗಳು ತಮ್ಮನ್ನು ಮೊದಲಿನಂತೆ ಗೌರವಿಸದೆ ಹೋದದ್ದರಿಂದ ಅವರನ್ನು ಹೆದರಿಸಬೇಕೆಂಬ ಉದ್ದೇಶದಿಂದ ಅವರು ಅಧಿಕಾರಿಗಳನ್ನು ಟೀಕಿಸುತ್ತಿದ್ದರು. ಮೋಹನನನ್ನು ಕುರಿತು ಬಾಯಿಗೆ ಬಂದಂತೆ ಮಾತನಾಡುತ್ತಿದ್ದರು. ಜನತಾ ಪಕ್ಷದವರು ಏರ್ಪಡಿಸುತ್ತಿದ್ದ ಸಭೆಗಳಿಗೂ ಜನರು ಸಾಕಷ್ಟು ಸೇರುತ್ತಿದ್ದರು. ಸಭೆಗಳಿಗೆ ಬರುತ್ತಿದ್ದ ಜನಗಳನ್ನು ನೋಡಿ ತಮ್ಮ ಹೊಸ ಪಕ್ಷಕ್ಕೆ ಜನಬೆಂಬಲವಿದೆಯೆಂದು ರಂಗನಾಥನೂ, ಕಲ್ಲಪ್ಪನೂ ಕೊಚ್ಚಿಕೊಳ್ಳುತ್ತಿದ್ದರು. ದುಷ್ಟ ಶಕ್ತಿಗಳು ಏನು ಹೇಳುತ್ತಾರೆಂಬುದನ್ನು ಕೇಳುವ ಸಲುವಾಗಿ ಜನರು ಕುತೂಹಲದಿಂದ ಬರುತ್ತಿದ್ದರೆಂಬುದು ಅವರಿಗೆ ಗೊತ್ತಾಗಲಿಲ್ಲ.

## ೧೮. ಕೊಲ್ಲನ ಕೊಲೆ : ಮೋಹನನ ಸೆರೆ

ಚೆನ್ನಮ್ಮನಿಗೆ ಒಂದು ದಿನ ರಾತ್ರಿ ಮಲಗಿದ್ದಾಗ ಒಂದು ವಿಚಿತ್ರ ಕನಸಾಗಿತ್ತು. ಕನಸಿನಲ್ಲಿ ತನ್ನ ಮಗ ಮೋಹನನು ಕೊಲೆ ಮೊಕದ್ದಮೆಯೊಂದರಲ್ಲಿ ಅಪರಾಧಿಯಾಗಿ ಸೆರೆಮನೆಯಲ್ಲಿರುವುದನ್ನು ಆಕೆ ಕಂಡಿದ್ದಳು. ತನಗಾದ ಕನಸನ್ನು ನೆನೆದು ಅವಳು ಆಗಾಗ ಕಳವಳ ಪಡುತ್ತಿದ್ದಳು. ಹಿಂದೆ ಒಂದೆರಡುಸಾರಿ ಆಕೆಯು ಕನಸಿನಲ್ಲಿ ಕಂಡಿದ್ದ ಘಟನೆಗಳು ವಾಸ್ತವಿಕವಾಗಿ ಸಂಭವಿಸಿದ್ದವು. ಆದ್ದರಿಂದ ಅವಳು ಕಳವಳಪಡುತ್ತಿದ್ದಳು.

ಕನಸಾದ ತರುವಾಯ ಸುಮಾರು ಎಂಟು ದಿನಗಳಲ್ಲಿ ಶೀತೂರಿನ ಹತ್ತಿರ ಗೊರಗೋಡು ಎಂಬಲ್ಲಿ ಕೊಲ್ಲ ಎಂಬ ರೈತನೊಬ್ಬನ ಕೊಲೆ ನಡೆಯಿತು. ಕೊಲೆಯಾದ ಕೊಲ್ಲನಿಗೂ, ಶೀತೂರು ಕಲ್ಲಪ್ಪನ ಭಾವ ಗೊರಗೋಡು ಬಸಪ್ಪನಿಗೂ ಬಹಳ ಕಾಲದ ವೈರವಿತ್ತು. ಕೆಲವು ತಿಂಗಳ ಹಿಂದೆ ಕಲ್ಲಪ್ಪನು ಗೊರಗೋಡಿಗೆ ಹೋಗಿದ್ದಾಗ, ಭಾವ ನಂಟರಿಬ್ಬರೂ ಮಾತನಾಡುತ್ತಿದ್ದಾಗ, ಕೊಲ್ಲ ಎಂಬುವನು ತನಗೆ ಬಹಳ ಕಿರುಕುಳ ಕೊಡುತ್ತಿದ್ದಾನೆಂದು ಬಸಪ್ಪನು ಕಲ್ಲಪ್ಪನಿಗೆ ಹೇಳಿದನು. ಕಲ್ಲಪ್ಪನು ಬಹಳ ಲಘುವಾಗಿ "ಅವನ್ನ ಹೊಡ್ದು ಹಳೀಗೆ ಹಾಕೂದ್ಬಿಟ್ಟು ಕೈಲಿ ಸಾಗ್ದವನಾಂಗೆ ನನ್ ಕೈಲಿ ಹೇಳ್ತೀಯಪ್ಪಾ" ಎಂದು ಹೇಳಿದನು. ತನ್ನ ಬೇಜವಾಬ್ದಾರಿಯ ಸಲಹೆಯನ್ನು ಬಸಪ್ಪನು ಕಾರ್ಯಗತಮಾಡಬೇಕೆಂಬ ಉದ್ದೇಶದಿಂದ ಕಲ್ಲಪ್ಪನು ಆ ರೀತಿ ಹೇಳಿರಲಿಲ್ಲ. ಹುಡುಗಾಟಿಕೆಯ ರೀತಿಯಲ್ಲಿ ಹೇಳಿದ್ದನು. ಆದರೆ ಬಸಪ್ಪನು ಮಾತ್ರ ತನ್ನ ಭಾವನ ಸಲಹೆ ಹುಡುಗಾಟಿಕೆಯ ಸ್ವಭಾವದ್ದೆಂದು ಭಾವಿಸಿರಲಿಲ್ಲ.

ಈ ಸಂಭಾಷಣೆಯಾದ ಕೆಲವು ತಿಂಗಳುಗಳ ತರುವಾಯ ಕೊಲ್ಲನು ಏಕಾಂಗಿ ಯಾಗಿ ಕಾಡಿನಲ್ಲಿ ಬರುತ್ತಿರುವಾಗ, ಬಸಪ್ಪನು ದಾರಿಯ ಪಕ್ಕದಲ್ಲಿ ಕಾದು ನಿಂತು, ತನ್ನ ಒಂಟಿನಲ್ಲಿ ಕೇಪಿನ ಬಂದೂಕದಿಂದ ಕೊಲ್ಲನನ್ನು ಕೊಂದು, ಅವನ ಹೆಣವನ್ನು ಹಳುವಿಗೆ ಎಳೆದು ಹಾಕಿದನು. ಮರುದಿನ ಯಾರೋ ಸೊಪ್ಪನ್ನು ಕೊಯ್ಯಲು ಕಾಡಿಗೆ ಹೋಗಿದ್ದವರು ಕೊಲ್ಲನ ಹೆಣವನ್ನು ನೋಡಿ ಅವನ ಮನೆಯವರಿಗೆ ವರ್ತಮಾನ ಕೊಟ್ಟರು. ಕೊಲ್ಲನ ದುರ್ಮರಣ ಗೊರಗೋಡು ಗ್ರಾಮದಲ್ಲಿ ಬಹಳ ಗಾಬರಿಯನ್ನುಂಟುಮಾಡಿತ್ತು. ಈ ಗಾಬರಿ ವಾತಾವರಣವನ್ನು ನೋಡಿದ ಬಸಪ್ಪನು ಮೆಲ್ಲಗೆ ಸದ್ದಿಲ್ಲದೆ ಗ್ರಾಮದಿಂದ ನುಣುಚಿಕೊಂಡು ಶೀತೂರಿಗೆ ಹೋದನು. ಶೀತೂರಿನಲ್ಲಿ ತನ್ನ ಭಾವನನ್ನು ಕಂಡು ತಾನು ಮಾಡಿದ ಸಾಹಸದ ಕೃತ್ಯವನ್ನು ಅವನಿಗೆ ವರದಿ ಮಾಡಿದನು.

ಸಮಾಚಾರವನ್ನು ಕೇಳಿದ ಕಲ್ಲಪ್ಪನು ಕೆಲವು ನಿಮಿಷಗಳ ಕಾಲ ಮೌನವಾಗಿ ಕಲ್ಲಿನಂತೆ ಕುಳಿತು ಬಿಟ್ಟನು. ಸ್ವಲ್ಪ ಸಮಯದ ನಂತರ ಅವನು "ಅಯ್ಯೋ ಪುಣ್ಯಾತ್ಮಾ,

ಆ ಹೊತ್ತು ನಾ ಏನೋ ಹುಡುಗಾಟ್ಗೀಗೆ ಅಂತ ಹೇಳಿದ್ರೆ ನಿಜವಾಗೂ ಕೊಂದು ನನ್ನ ನಿನ್ನ ಇಬ್ಬರ ತಲೀಗೂ ತಂದ್ಬಿಟ್ಯಲ್ಲೋ" ಎಂದು ಹೇಳಿ ಮತ್ತು ಮೌನವಾಗಿ ಕುಳಿತನು. ಕಾಲು ಘಂಟೆಯ ಕಾಲ ಕಲ್ಲಪ್ಪನು ಮನಸ್ಸಿನಲ್ಲೇ ಏನೇನೋ ಲೆಕ್ಕಾಚಾರ ಹಾಕುತ್ತಿದ್ದನು. ಅನಂತರ ಮಾತನ್ನು ಮುಂದುವರಿಸಿ "ನೋಡು ನಂಗೊಂದು ಉಪಾಯ ಹೊಳೀತು ಈಗ ನಿನ್ನೆ ಪಂಜ್ರೊಳ್ಳಿ ಮೋಹನ ನಿಮ್ಮೂರಿಗೆ ಬಂದಿದ್ನಂತೆ. ನಿಮ್ ದಾಯಾದಿ ಮಲ್ಲಪ್ಪನ ಮನೇಲಿ ಅವ ಇದ್ನಂತೆ. ಅವ ನಿಮ್ಮೂರಿಗೆ ಹೋದದ್ದಕ್ಕೆ ರುಜುವಾತು ಇದೆ. ಈಗ ನೀವೊಂದು ಕೆಲ್ಸಾ ಮಾಡ್ಬೇಕು. ಕೊಲ್ಲನ ಖೂನೀಗೆ ಮೋಹನ ಮತ್ತು ನಿನ್ನ ದಾಯಾದಿ ಮಲ್ಲಪ್ಪ ಕಾರಣ ಅಂತ ಇಬ್ಬರ ಮೇಲೂ ಪೋಲಿಸ್ ಇನ್‌ಸ್ಪೆಕ್ಟರಿಗೆ ಇಂದೇ ಒಂದು ಪಿರ್ಯಾದಿ ಕೊಡ್ಸು. ಇನ್‌ಸ್ಪೆಕ್ಟರು ನಮ್ಮೋರು. ಮುಂದಿನ ಕೆಲಸಾ ನಾ ನೋಡ್ಕೋತೀನಿ. ಖರ್ಚಿಗೆ ಮಾತ್ರ ಮೂರು ಸಾವಿರ ಬೇಕು. ಇಂದೇ ತಂದು ಕೊಡು"ಎಂದು ಬಸಪ್ಪನು ಕಿವಿಯಲ್ಲಿ ಉಸುರಿದನು. ಭಾವ ಹೇಳಿದಂತೆ ಬಸಪ್ಪನು ಮೋಹನನ ಮೇಲೂ, ದಾಯಾದಿ ಮಲ್ಲಪ್ಪನ ಮೇಲೂ, ಇನ್‌ಸ್ಪೆಕ್ಟರಿಗೆ ಫಿರ್ಯಾದನ್ನು ಕೊಡಿಸಿದನು. ಅನಂತರ ಅದೇ ದಿನ ಮೂರು ಸಾವಿರ ರೂಪಾಯಿಗಳನ್ನು ತಂದು ಕಲ್ಲಪ್ಪನಿಗೆ ಒಪ್ಪಿಸಿದನು.

ಆ ದಿನ ರಾತಿ ಕಲ್ಲಪ್ಪನು ಪವಿತ್ರಪುರಕ್ಕೆ ಹೋಗಿ ಸುಮಾರು ಎರಡು ಘಂಟೆಗಳ ಕಾಲ ಪೋಲಿಸ್ ಇನ್‌ಸ್ಪೆಕ್ಟರ ಮನೆಯಲ್ಲಿ ಮಾತನಾಡುತ್ತಾ ಇದ್ದನು. ಅವರಿಬ್ಬರೂ ಏನು ಮಾತನಾಡಿದರೆಂಬುದು ಯಾರಿಗೂ ಗೊತ್ತಾಗಲಿಲ್ಲ. ಮರುದಿನ ರಾತ್ರಿ ಮೋಹನನು ಪವಿತ್ರಪುರದಿಂದ ಪಂಜರವಳ್ಳಿಗೆ ಹೋಗುವಾಗ ಪೋಲಿಸಿನವರು ಅವನನ್ನು ದಾರಿಯಲ್ಲಿ ಬಂಧಿಸಿ ರಾತ್ರಿಯೇ ಸೆರೆಮನೆಗೆ ಕೊಂಡೊಯ್ದರು. ಅದಕ್ಕೆ ಮುಂಚಿತವಾಗಿ, ಆ ದಿನ ಸಾಯಂಕಾಲ ಪೋಲಿಸಿನವರು ಗೊರಗೋಡು ಮಲ್ಲಪ್ಪನನ್ನು ಪವಿತ್ರಪುರದ ಸಂತೆಯಲ್ಲಿ ಬಂಧಿಸಿ, ಸೆರೆಮನೆಯನ್ನು ಸೇರಿಸಿದ್ದರು. ಎರಡು ದಿನಗಳಾದನಂತರ ತನ್ನ ಮಗನು ಸೆರೆಮನೆಯಲ್ಲಿದ್ದಾನೆಂಬ ವಿಚಾರ ಚೆನ್ನಮ್ಮನಿಗೆ ಗೊತ್ತಾಯಿತು. ಅಲ್ಲಿಯವರೆಗೂ ಅವನು ಮೂರ್ತಿಯ ಮನೆಯಲ್ಲಿ ಎಂದಿನಂತೆ ಇರಬಹುದೆಂದು ಅವಳು ತಿಳಿದುಕೊಂಡಿದ್ದಳು. ಮೂರ್ತಿ ಪವಿತ್ರಪುರದಲ್ಲೇ ಇದ್ದರೂ ಕೂಡ ಅವನ ಸ್ನೇಹಿತನ ಬಂಧನದ ವಿಚಾರ ಅವನಿಗೆ ಒಂದು ದಿನವಾದ ನಂತರ ಗೊತ್ತಾಯಿತು. ಹಿಂದಿನ ಸಾರಿ ಮೋಹನನನ್ನು ಬಂಧಿಸಿದ್ದಾಗ ಗುಂಪು ಸೇರಿದಂತೆ ಈ ಸಾರಿಯೂ ಜನರು ಗುಂಪು ಸೇರಬಹುದೆಂಬ ಭಯದಿಂದ ಪೋಲಿಸಿನವರು ಮೋಹನನನ್ನು ಗುಪ್ತವಾಗಿ ದಸ್ತಗಿರಿ ಮಾಡಿ ಗುಪ್ತವಾಗಿ ಸೆರೆಮನೆಯಲ್ಲಿಟ್ಟಿದ್ದರು. ಸೆರೆಮನೆಯ ಸುತ್ತಲೂ ಶಸ್ತ್ರಸಜ್ಜಿತ ಪೋಲಿಸಿನವರ ಕಾವಲಿತ್ತು.

ಮೋಹನರ ಬಂಧನವನ್ನು ಅರಿತ ಪವಿತ್ರಪುರದ ಜನರು ಅಚ್ಚರಿಗೊಂಡರು. ರಾಜಕಾರಣ ಈ ಮಟ್ಟವನ್ನು ಮುಟ್ಟುವುದೆಂದು ಅವರು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ರಂಗನಾಥ ಮತ್ತು ಆತನ ಸ್ನೇಹಿತರು ದುರ್ಜನರೆಂಬುದು ಜನತೆಗೆ ಗೊತ್ತಾಗಿತ್ತು. ಆದರೆ ಮೋಹನನಂತಹ ಸಜ್ಜನ ದೇಶಪ್ರೇಮಿಯ ಮೇಲೆ ಸುಳ್ಳು ಕೊಲೆ ಆಪಾದನೆಯನ್ನು

ಹೊರಿಸುವ ದೌರ್ಜನ್ಯಕ್ಕೆ ಇಳಿಯುತ್ತಾರೆಂದು ಯಾರೂ ಭಾವಿಸಿರಲಿಲ್ಲ. ಸಭ್ಯತೆಯ ಸೋಗಿನಲ್ಲಿ ರಾಜಕಾರಣದ ನೆಪದಲ್ಲಿ, ಯಾವ ನೀಚ ಕೆಲಸವನ್ನಾದರೂ ಮಾಡಲು ರಂಗನಾಥನೂ ಕಲ್ಲಪ್ಪನೂ ಹೇಸರೆಂಬುದೂ ಜನರಿಗೆ ಮನದಟ್ಟಾಯಿತು. ಮೋಹನನು ನಿರಪರಾಧಿಯೆಂಬುದು ಜನಜನಿತವಾಗಿತ್ತು. ಆದರೆ ಜನರು ನಿಸ್ಸಹಾಯಕರಾಗಿದ್ದರು. ಸಮಯ ಸಿಕ್ಕಾಗ ದುಷ್ಟರಿಗೆ ತಕ್ಕ ಪಾಠವನ್ನು ಕಲಿಸಬೇಕೆಂದು ಅವರು ಯೋಚಿಸುತ್ತಿದ್ದರು. ಮೋಹನನ ಕಡೆಯವರಂತೂ ಹಲ್ಲು ಕಡಿಯುತ್ತಿದ್ದರು. ಇತ್ತ ರಂಗನಾಥನೂ, ಕಲ್ಲಪ್ಪನೂ ಮೋಹನನ ಗತಿ ಮುಗಿಯಿತೆಂದು ತಿಳಿದಿದ್ದರು. ಮೋಹನನ ಮೇಲೆ ಹೂಡಿದ್ದ ಮೊಕದ್ದಮೆ ಸ್ಥಿರವಾಗಿ ನಿಲ್ಲಬೇಕಾದರೆ ಸರಿಯಾದ ರುಜುವಾತು ಅವಶ್ಯಕವಿತ್ತು. ಮೋಹನನೇ ಕೊಲೆಗೆ ಕಾರಣವೆಂದು ಸ್ಥಿರಪಡಿಸುವ ಸಲುವಾಗಿ ಇನ್‌ಸ್ಪೆಕ್ಟರೂ ಕಲ್ಲಪ್ಪನೂ, ರಂಗನಾಥನೂ ದಿನವಹಿ ಸುಳ್ಳು ರುಜುವಾತನ್ನು ಸೃಷ್ಟಿಸುತ್ತಿದ್ದರು.

ನಿರಾಪರಾಧಿಯಾದ ತನ್ನ ಮಗನು ಕೊಲೆ ಮೊಕದ್ದಮೆಯಲ್ಲಿ ಅಪರಾಧಿಯಾಗಿ ಸೆರೆಮನೆಯನ್ನು ಸೇರಿದ ಸಮಾಚಾರ ಗೊತ್ತಾದಂದಿನಿಂದ ಚೆನ್ನಮ್ಮನಿಗೆ ಮನಸ್ಸಾಗಲಿ ದೇಹವಾಗಲಿ ಸ್ವಸ್ಥವಿರಲಿಲ್ಲ. ಆಕೆಗೆ ಬಾಳು ಬೇಕಾಗಿರಲಿಲ್ಲ. ಮಾನವ ಜೀವನದಲ್ಲಿ ಜೀವನ ರಥ ಒಮ್ಮೆ ದುರ್ಗಮ ದಾರಿಯಲ್ಲಿ ಮುಗ್ಗರಿಸಿದರೆ ಮತ್ತೊಮ್ಮೆ ಹೆದ್ದಾರಿಯಲ್ಲಿ ಸುಗಮವಾಗಿ ಸಾಗುವುದು. ಆದರೆ ಚೆನ್ನಮ್ಮನ ಜೀವನ ರಥ ಇತ್ತೀಚಿನ ವರ್ಷಗಳಲ್ಲಿ ಯಾವಾಗಲೂ ಹಳ್ಳ ಕೊಳ್ಳಗಳಲ್ಲೇ ಮುಗ್ಗರಿಸಿ ಬೀಳುತ್ತಿತ್ತು. ಗಂಡನನ್ನು ದಾರುಣ ಪ್ರಸಂಗದಲ್ಲಿ ಕಳೆದುಕೊಂಡಳು. ಮಗನು ಪದವೀಧರನಾದನಂತರ ತಾನೊಬ್ಬ ಅಧಿಕಾರಿ ಅಥವಾ ಹಣವಂತನ ತಾಯಿಯಾಗಿ ಸುಖವಾಗಿ ಬಾಳಬೇಕೆಂದಿದ್ದ ಆಕೆಯ ಆಸೆ ನಿರಾಶೆಯಾಯಿತು. ಮಗನ ಮಂತ್ರಿಯಾದನೆಂಬ ಆಕೆಯ ಬಹುದೂರದ ಆಸೆ ಬಹುದೂರದ ಕನಸಾಗಿಯೆ ಉಳಿಯಿತು. ಅಧಿಕಾರ ಅಥವಾ ಹಣವಿಲ್ಲದಿದ್ದರೂ, ಮಗನು ಸುಖವಾಗಿದ್ದರೆ ಆಕೆಗೆ ಸಾಕಾಗಿತ್ತು. ವಿಧಿ ಆಕೆಯ ಬಯಕೆಯ ಕುಡಿಗಳನ್ನು ಒಂದೊಂದಾಗಿ ಕತ್ತರಿಸಿ ಬಿಡುತ್ತಿತ್ತು. ಕೆಲವು ವರ್ಷಗಳಿಂದ ನಿಟ್ಟುಸಿರೇ ಆಕೆಯ ಜೀವದ ಉಸಿರಾಗಿತ್ತು. ಆಕೆಯ ಪಾಲಿಗೆ ದೇವರು ಸಹ ಉಳಿದಿರಲಿಲ್ಲ. ತಾನು ಸಾಯಬೇಕೆಂದು ನಿಶ್ಚಯಿಸಿದಳು. ನಿಶ್ಶಕ್ತಳಾಗಿ ಹಾಸಿಗೆ ಹಿಡಿದಳು.

ಕರಿಯಪ್ಪನ ತಾಯಿ ಸಿದ್ಧಿ ಚೆನ್ನಮ್ಮನ ಶುಶ್ರೂಷೆ ಮಾಡುತ್ತಿದ್ದಳು. ಮೋಹನನ ಬಂಧನವನ್ನು ಕೇಳಿ ಚೆನ್ನಮ್ಮನ ತಮ್ಮನೂ, ಅವನ ಹೆಂಡತಿಯೂ ಅಮೃತೂರಿನಿಂದ ಪಂಜರವಳ್ಳಿಗೆ ಬಂದಿದ್ದರು. ಅವರಿಬ್ಬರೂ ಚೆನ್ನಮ್ಮನನ್ನು ಅಮೃತೂರಿಗೆ ಬರಹೇಳಿ ಒತ್ತಾಯಪಡಿಸಿದರು. ಆದರೆ ಚೆನ್ನಮ್ಮನು ಮನೆಯನ್ನು ಬಿಡಲು ಒಪ್ಪಲಿಲ್ಲ. ಅವರಿಬ್ಬರೂ ಕೆಲವು ದಿನಗಳು ಪಂಜರವಳ್ಳಿಯಲ್ಲಿದ್ದು ಆಕೆಯನ್ನು ಸಂತೈಸುತ್ತಿದ್ದರು. ಮೂರ್ತಿಯೂ ತನ್ನ ತಾಯಿಯನ್ನು ಚೆನ್ನಮ್ಮನ ಶುಶ್ರೂಷೆಗಾಗಿ ಕಳುಹಿಸಿಕೊಟ್ಟನು. ಮೋಹನನ ಬೆಂಬಲಿಗರು ನೂರಾರು ಜನರು ಚೆನ್ನಮ್ಮನ ದರ್ಶನಾರ್ಥವಾಗಿ ಪಂಜರವಳ್ಳಿಗೆ ಬಂದು ಅವರ ಯೋಗಕ್ಷೇಮವನ್ನು ವಿಚಾರಿಸಿ ಆಕೆಗೆ ಸಮಾಧಾನ ಹೇಳುವ ಪ್ರಯತ್ನ

ಮಾಡುತ್ತಿದ್ದರು. ಆದರೆ ಯಾರ ಮಾತಿನಿಂದಲೂ ಆಕೆಯ ಬೆಂದ ಹೃದಯಕ್ಕಾಗಲಿ, ನೊಂದ ಮನಸ್ಸಿಗಾಗಲಿ ಶಾಂತಿ ದೊರೆಯಲಿಲ್ಲ. ಆಕೆಯ ದೇಹಸ್ಥಿತಿ ದಿನದಿನಕ್ಕೂ ಘಂಟೆಘಂಟೆಗೂ ವಿಷಮಿಸುತ್ತಿತ್ತು. ಮೋಹನನ ಸ್ನೇಹಿತರಾದ ಕೆಲವರು ವೈದ್ಯರು ಪವಿತ್ರಪುರದಿಂದ ಬಂದು ಆಕೆಗೆ ಚಿಕಿತ್ಸೆ ನಡೆಸುತ್ತಿದ್ದರು. ಆ ಚಿಕಿತ್ಸೆಯಿಂದ ಆಕೆಗೆ ಯಾವ ಪ್ರಯೋಜನವೂ ಆಗಿರಲಿಲ್ಲ. ಆಕೆಯ ಸ್ಥಿತಿ ಬರಬರುತ್ತಾ ಚಿಂತಾಜನಕವಾಗಿತ್ತು. ಒಂದೆರಡು ದಿನಗಳಿಂದ ಮೋಹನನ ಹುಲ್ಲು ಜೋಪಡಿ ಒಂದು ಯಾತ್ರಾಸ್ಥಳವಾದಂತೆ ಇತ್ತು. ಆಕೆಯ ಅಂತ್ಯದರ್ಶನಕ್ಕಾಗಿ ಜನರು ತಂಡೋಪತಂಡವಾಗಿ ಬರುತ್ತಿದ್ದರು. ಚೆನ್ನಮ್ಮನು ಯಾವುದೋ ಬೇರೊಂದು ಜಗತ್ತಿನಲ್ಲಿರುವಂತೆ ತೋರುತ್ತಿದ್ದಳು. ಆಗಾಗ "ಮಗನೇ ಮೋಹ್ನಾ ಬಂದ್ಯಾ" ಎನ್ನುತ್ತಿದ್ದಳು.

ಮೋಹನನು ಸೆರೆಮನೆಯನ್ನು ಸೇರಿದ ವಾರ್ತೆಯನ್ನು ಕೇಳಿ ಮೈಸೂರಿನಲ್ಲಿದ್ದ ಶಾಸ್ತ್ರಿಯೂ, ವಕೀಲ್ ಸೂರ್ಯನಾರಾಯಣರಾಯರೂ ಮೋಹನನ ಪರವಾಗಿ ಕೊಲೆ ಮೊಕದ್ದಮೆಯಲ್ಲಿ ವಕಾಲತ್ತು ವಹಿಸಲು ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳುವ ಸಲುವಾಗಿ ಬಂದಿದ್ದರು. ಪವಿತ್ರಪುರಕ್ಕೆ ಬಂದನಂತರ ಚೆನ್ನಮ್ಮನ ಸ್ಥಿತಿ ಚಿಂತಾಜನಕವಾಗಿದೆಯೆಂದು ಗೊತ್ತಾಯಿತು. ಸೂರ್ಯನಾರಾಯಣರಾಯರನ್ನು ಪವಿತ್ರಪುರದಲ್ಲೇ ಬಿಟ್ಟು, ಮೂರ್ತಿಯೂ ಶಾಸ್ತ್ರಿಯೂ ಪಂಜರವಳ್ಳಿಗೆ ಹೋದರು. ಅರೆಪ್ರಜ್ಞೆಯಲ್ಲಿ ಅರಿವಿಲ್ಲದೆ ಮಲಗಿದ್ದ ಚೆನ್ನಮ್ಮನಿಗೆ, ಕರಿಯಪ್ಪನು ಮೋಹನನ ಸ್ನೇಹಿತರಾದ ಶಾಸ್ತ್ರಿಯೂ ಮೂರ್ತಿಯೂ ಬಂದಿದ್ದಾರೆಂದು ತಿಳಿಸಿದನು. ಮಗನನ್ನು ನೋಡಬೇಕೆಂದು ಹಾತೊರೆಯುತ್ತಿದ್ದ ಆಕೆಯ ಮನಸ್ಸಿಗೆ ಮಗನ ಸ್ನೇಹಿತರನ್ನಾದರೂ ನೋಡತಕ್ಕ ಅವಕಾಶ ಸಿಕ್ಕಿದ್ದಕ್ಕಾಗಿ ಸಮಾಧಾನವಾಯಿತು. ಕಣ್ತೆರೆದು ನೋಡಿದಳು. ಕಣ್ಣುಗಳಲ್ಲಿ ಹನಿ ತುಂಬಿತ್ತು.

ನೊಂದ ಹೃದಯದಿಂದ ಚೆನ್ನಮ್ಮನು ಶಾಸ್ತ್ರಿಯನ್ನು ಕುರಿತು "ಶಾಸ್ತ್ರಿಗಳೇ ನನ್ನೋಳ್ ನೋಡ್ಡೋಕೆ ಅಂತ ಬಂದ್ರ್ಯಾ? ಅಯ್ಯೋ ನನ್ಮಗ್ನನ್ನ ದುಷ್ಟರು ಅನ್ಯಾಯವಾಗಿ ಜೈಲಾಗೆ ಹಾಕ್ಸದ್ರು. ಯಜಮಾನ್ರನ್ನಂತೂ ಕಳ್ಕಂಡೆ. ನನ್ಮಗನ ಜೊತಿಗೆ ಸುಖವಾಗಿ ಇರಾನ ಅಂತ ಮಾಡಿದ್ದೆ. ಭಗವಂತ ಅದಕ್ಕೆ ಕಲ್ಲು ಹಾಕ್ದ. ಜೈಲಾಗೆ ಆ ಪಾಪಿಗಳು ನನ್ಮಗಗೆ ಏನ್ ಬಂದಾನ ಕೊಡ್ತಾರೊ. ಅವನ್ನೋಳ ನೋಡ್ತಾ ನಾ ಇರಬಾರ್ದು. ನನ್ಮಗ ನಿರಪರಾಧಿ, ಹಸ್ಗೂಸು. ಅಯ್ಯೋ ಮಗ್ನೇ ಮೋಹ್ನಾ, ನಾ ಹೋತೀನೋ ಮಗ್ನೆ. ಭಗವಂತಾ ನಿನಗೆ ಕಣ್ಣಿಲ್ಲೇನೊ" ಎಂದು ಹೇಳಿ ಪುನಃ ಪ್ರಜ್ಞಾಶೂನ್ಯಳಾದಳು.

ಸ್ವಲ್ಪಕಾಲದ ನಂತರ ಶಾಸ್ತ್ರಿ ಚೆನ್ನಮ್ಮನನ್ನು ಕುರಿತು "ಚೆನ್ನಮ್ಮಾ ನಾನು ಶಾಸ್ತ್ರಿ. ಮೋಹನನ ಸ್ನೇಹಿತ. ನಿಮ್ಮನ್ನು ನೋಡಲು ಬಂದಿದ್ದೇನೆ" ಎಂದನು. ಚೆನ್ನಮ್ಮನು ಪುನಃ ಕಣ್ತೆರೆದು "ಹೌದು ಶಾಸ್ತ್ರಿಗಳೇ ಮರ್ತಿದ್ದೆ. ನನ್ಮಗನ್ನ ಯಾವಾಗ ಬಿಡಿಸ್ತೀರಿ ಹೇಳಿ. ನನ್ಮಗ ಮಂತ್ರಿ ಆಗ್ಬೇಕು ಅಂತ ಆಸೆ ಮಾಡಿದ್ದೆ. ಸಾಸ್ತ್ರಿಗಳೇ ನನ್ನ ಆಸೆ ಮಣ್ಣಾಪಾಲಾತು" ಎಂದಳು.

ಶಾಸ್ತ್ರಿಗಳಿಗೂ ಮನನೊಂದಿತು. ಶಾಸ್ತ್ರಿ ಚೆನ್ನಮ್ಮನನ್ನು ಕುರಿತು "ಚೆನ್ನಮ್ಮ, ದೇವ್ರು ವಳ್ಳೇದು ಮಾಡ್ತಾನೆ. ನಿಮ್ಮ ಮಗ ಸತ್ಯವಂತ ಸತ್ಯಕ್ಕೆ ಜಯವಿದೆ. ಮಂತ್ರಿಯಾಗೋದು

ಯಾವ ದೊಡ್ಡ ಕೆಲಸ, ಈಗಿನ ಕಾಲದಲ್ಲಿ ಎಂತೆಂತವರೋ ಮಂತ್ರಿಗಳಾಗ್ತಾರೆ. ಮಂತ್ರಿಗಳಾದೋರೆಲ್ಲಾ ಶ್ರೇಷ್ಠ ವ್ಯಕ್ತಿಗಳು ಅಂತ ಹೇಳುವುದಕ್ಕೆ ಆಗುವುದಿಲ್ಲವಮ್ಮ. ನಿಮ್ಮ ಮಗನಿಗೆ ಆಸ್ತಿಯಿಲ್ಲದೆ ಇರಬಹುದು. ಇಂದು ಕ್ರಿಮಿನಲ್ ಕೇಸಿನಲ್ಲಿ ಅವನು ಅಪರಾಧಿಯಾಗಿರಬಹುದು ಆದರೆ ಅವನು ಮಂತ್ರಿಯಾದವರಿಗಿಂತ ಶ್ರೇಷ್ಠನಾದವನು. ಅವನ ಹೆಸರು ಆಚಂದ್ರಾರ್ಕವಾಗಿ ಉಳಿಯುತ್ತದೆ. ನಿಮ್ಮ ವಂಶಕ್ಕೆ ಅವನು ಕೀರ್ತಿಯನ್ನು ತರುತ್ತಾನೆ" ಎಂದನು.

"ಸಾಸ್ತ್ರಿಗಳೇ ನನ್ಮನಸ್ಸು ತಣ್ಣಾಗ್ತು. ನನ್ಮಗ ಸ್ರೇಷ್ಠ ಅಂತ ಅಂದಿರಿ ನೀವ್ ಹೇಳೂದು ಸುಳ್ಳಾಗೂಕಿಲ್ಲ. ಮೋಹ್ನಾ, ನಾ ಇನ್ನು ಹೋತೀನಿ ಮಗ್ನೇ, ಸ್ವರ್ಗದಾಗೆ ನಿಮ್ಮಪ್ಪ, ನಾನು, ನೀನು ಯಲ್ಲಾ ಒಟ್ಟಾಗಾನ" ಎಂದು ಹೇಳಿ ಚೆನ್ನಮ್ಮನು, ಕಣ್ಮುಚ್ಚಿದಳು.

ಶಾಸ್ತ್ರಿಯು "ಚೆನ್ನಮ್ಮಾ ಚೆನ್ನಮ್ಮಾ" ಎನ್ನುವಷ್ಟರಲ್ಲಿ ಚೆನ್ನಮ್ಮನ ಪ್ರಾಣ ಪಕ್ಷಿ ಹಾರಿಹೋಗಿತ್ತು. ಕೊನೆಯ ಗಳಿಗೆಯಲ್ಲಿ ತನ್ನ ಸ್ನೇಹಿತನ ತಾಯಿಯೊಡನೆ ಸಂಭಾಷಣೆ ಮಾಡುವ ಅವಕಾಶ ಸಿಕ್ಕಿದ್ದಕ್ಕಾಗಿ ಶಾಸ್ತ್ರಿ ಸಂತೋಷಪಟ್ಟನು. ಚೆನ್ನಮ್ಮನ ಅಂತ್ಯಕ್ರಿಯೆಯು ಬಹಳ ವೈಭವದಿಂದ ನಡೆಯುವಂತೆ ಮೂರ್ತಿಯೂ, ಶಾಸ್ತ್ರಿಯು ಏರ್ಪಡಿಸಿದ್ದರು. ಮೋಹನನ ಹಿಂಬಾಲಕರು ನೂರಾರು ಮಂದಿ ತಮ್ಮ ನಾಯಕನ ತಾಯಿಗೆ ಅಂತ್ಯ ಗೌರವವನ್ನು ಸಲ್ಲಿಸಿದರು.

ಅಂತ್ಯಕ್ರಿಯೆ ಮುಗಿದನಂತರ ಮೂರ್ತಿಯೂ, ಶಾಸ್ತ್ರಿಯೂ ಕಾಲು ನಡಿಗೆಯಲ್ಲಿ ಪವಿತ್ರಪುರಕ್ಕೆ ಹೊರಟರು. ಸ್ನೇಹಿತರಿಬ್ಬರೂ ಏನನ್ನೋ ಯೋಚಿಸುತ್ತಾ ಮೌನವಾಗಿ ನಡೆಯುತ್ತಿದ್ದರು. ಪಂಜರವಳ್ಳಿಯಿಂದ ಪವಿತ್ರಪುರಕ್ಕೆ ಮೂರು ಮೈಲಿಗಳ ಹಾದಿ. ಅದೊಂದು ಹಳ್ಳಕೊಳ್ಳಗಳಿಂದ ಕೂಡಿದ ಗಾಡಿಯ ಹಾದಿಯಾಗಿತ್ತು. ಹಾದಿಯ ಎಡಬಲಗಳಲ್ಲಿ ದಟ್ಟವಾದ ಕಾಡಿತ್ತು. ಸಾಯಂಕಾಲ ಹೊತ್ತು ಇಳಿಬಿಸಿಲು ಕಾಯುತ್ತಿತ್ತು. ಸ್ನೇಹಿತರಿಬ್ಬರೂ ಪಂಜರವಳ್ಳಿಯಿಂದ ಒಂದು ಮೈಲಿ ದೂರ ಸಾಗಿರಬೇಕು. ಅಲ್ಲಿಂದ ಸ್ವಲ್ಪ ದೂರ ಗುಡ್ಡದ ಮೇಲೆ ಹಾಯ್ದು ಹೋಗಬೇಕಾಗಿತ್ತು. ಗುಡ್ಡದ ಸಮೀಪಕ್ಕೆ ಬಂದೊಡನೆ ಒಂದು ಕಾಡುಕುರಿ ಅವರಿಬ್ಬರೂ ಬರುತ್ತಿದ್ದ ಕಡೆಗೆ ಓಡಿ ಬರುತ್ತಿತ್ತು. ಆ ಕಾಡುಕುರಿ ಮನಷ್ಯರಿಬ್ಬರನ್ನು ನೋಡಿದರೂ ಸಹ ಹೆದರದೆ ಅವರ ಪಕ್ಕದಲ್ಲೇ ಮಿಂಚಿನಂತೆ ಹಾಯ್ದು ಹೊಳೆದು ಹೋಯಿತು. ಸಾಮಾನ್ಯವಾಗಿ ಕಾಡು ಮೃಗಗಳು ಮನುಷ್ಯರ ಹತ್ತಿರ ಬರುವುದಿಲ್ಲ. ಬಹುಶಃ ಮನುಷ್ಯರ ಮೇಲಿದ್ದ ಹೆದರಿಕೆಗಿಂತ ಮಿಗಿಲಾದ ಹೆದರಿಕೆಯೊಂದು ಆ ಕುರಿಯನ್ನು ಮನುಷ್ಯರಿದ್ದೆಡೆಗೆ ದೌಡಾಯಿಸಿ ಓಡಿಸಿರಬೇಕೆಂದು ಮೂರ್ತಿ ಭಾವಿಸಿದರು. ಹುಲಿಯೋ, ಕುರ್ಕನೋ ಅಥವಾ ಸೀಳುನಾಯಿಗಳೋ ಆ ಕುರಿಯನ್ನು ಅಟ್ಟಿಸಿಕೊಂಡು ಬಂದಿರಬೇಕೆಂದು ಅವನು ಊಹಿಸಿದ್ದನು. ಮಾತನಾಡದೆ ಸುಮ್ಮನೆ ನಿಲ್ಲಬೇಕೆಂದು ಅವನು ಶಾಸ್ತ್ರಿಗೆ ಸನ್ನೆ ಮಾಡಿ ಸೂಚಿಸಿದನು. ಅವರಿಬ್ಬರ ಕೈಗಳಲ್ಲೂ ಒಂದು ದೊಣ್ಣೆಯೂ ಸಹ ಇರಲಿಲ್ಲ.

ಅಷ್ಟರಲ್ಲಿ ಪಟ್ಟೆಯ ಹಳದಿ ಬಣ್ಣದ ಪ್ರಾಣಿಯೊಂದು ಅವರಿದ್ದ ಕಡೆಗೇ ಓಡಿ ಬರುತ್ತಿದ್ದುದು ಕಾಣಿಸಿತು. ನೋಡಿದ ಕೊಡಲೇ ಅದು ಹುಲಿ ಎಂದು ಮೂರ್ತಿಗೆ ಗೊತ್ತಾಯಿತು. ಅವನು ಗಟ್ಟಿಯಾಗಿ ಕಾಡು ಮೊಳಗುವಂತೆ ಕೂಗಿದನು. ಶಾಸ್ತ್ರಿಯ ಮೈ ಜುಮ್ಮೆಂದಿತು. ಅವನ ದೇಹದಲ್ಲಿ ಬೆವರು ಧಾರಾಕಾರವಾಗಿ ಸುರಿಯುತ್ತಿತ್ತು. ಗಂಟಲು ಒಣಗಿತ್ತು. ಇಬ್ಬರು ಮಾನವ ವ್ಯಕ್ತಿಗಳನ್ನು ನೋಡಿದ ತಕ್ಷಣ ಹುಲಿ ಓಡುವುದನ್ನು ಬಿಟ್ಟು ಹಾಗೆಯೇ ದಾರಿಯಲ್ಲಿ ಇಬ್ಬರನ್ನೂ ದುರದುರನೆ ನೋಡುತ್ತಾ ನಿಂತಿತ್ತು. ಐದು ನಿಮಿಷಗಳ ಕಾಲ ಹಾಗೆಯೇ ನಿಂತಿತ್ತು. ಶಾಸ್ತ್ರಿಗೆ ಐದು ನಿಮಿಷಗಳು ಐದು ಘಂಟೆಗಳ ಅವಧಿಯಂತೆ ಆಗಿತ್ತು. ಮೈಸೂರಿನಲ್ಲಿ ಹೆಂಡತಿ ಮಕ್ಕಳನ್ನು ಬಿಟ್ಟು ಪಂಜರವಳ್ಳಿಯ ಕಾಡಿನಲ್ಲಿ ಹುಲಿಯ ಬಾಯಿಗೆ ಆಹಾರವಾಗುವ ಕಾಲ ಸನ್ನಿಹಿತವಾಯಿತೆಂದು ಅವನು ಯೋಚಿಸುತ್ತಿದ್ದನು. ಅಷ್ಟು ಹೊತ್ತಿಗೆ ಹುಲಿ ನಿಧಾನವಾಗಿ ಎಡಗಡೆ ಇರುವ ಕಣಿವೆಗೆ ಹಾರಿ ಕಣಿವೆಯಲ್ಲಿ ಮಾಯವಾಯಿತು.

ಹುಲಿ ಹಾರಿಹೋದ ನಂತರ ಸ್ನೇಹಿತರಿಬ್ಬರೂ ಕೆಲವು ಕಾಲ ನಿಂತ ಸ್ಥಳದಲ್ಲಿಯೇ ನಿಂತಿದ್ದರು. "ಏನಪ್ಪಾ ಶಾಸ್ತ್ರಿ, ತುಂಬಾ ಭಯವಾಗಿತ್ತೇನಯ್ಯಾ" ಎಂದು ಮೂರ್ತಿ ಕೇಳಿದನು. ಶಾಸ್ತ್ರಿಯು "ಏನಯ್ಯಾ ನೀನು ಹೇಳುವುದು. ಭಯವಾಗದೆ ಇನ್ನೇನು? ನನ್ನ ನಿನ್ನ ಭವಿಷ್ಯ ಮುಗಿಯಿತು ಅಂತ ನಾ ಭಾವಿಸಿದ್ದೆ" ಎಂದನು.

"ನನಗೇನೂ ಭಯವಾಗಿಲ್ಲಪ್ಪ. ಮೋಹನ ಮತ್ತು ನಾನು ಎಷ್ಟೋ ಹೊತ್ತು. ರಾತ್ರಿಯ ಹೊತ್ತು ಈ ದಾರಿಯಲ್ಲಿ ಹೋಗ್ತಾಬರ್ತಾ ಹುಲಿ ಹತ್ತಿರದಲ್ಲೇ ಕೂಗಿದ್ದನ್ನು ಕೇಳಿದ್ದೇನೆ. ಸಾಮಾನ್ಯವಾಗಿ ಹುಲಿ ಮನುಷ್ಯರ ತಂಟೆಗೆ ಬರುವುದಿಲ್ಲ. ಗಾಯದ ಹುಲಿಯಾಗಿದ್ದರೆ ಅಥವಾ ಮರಿಗಳ ಸಮೇತವಿರುವ ಹೆಣ್ಣು ಹುಲಿಯಾದರೆ ಮಾತ್ರ ಅಪಾಯ. ಇಲ್ಲವಾದರೆ ಯಾವ ಅಪಾಯವೂ ಇಲ್ಲ, ಬಾ ಹೋಗೋಣ. ಹೆದರಬೇಡ." ಎಂದು ಮೂರ್ತಿ ನುಡಿದನು.

ಕಣ್ಮೇಲೆ ಕಣ್ಣಿಟ್ಟು ಎಡಬಲಗಳಲ್ಲಿ ತಿರುತಿರುಗಿ ನೋಡುತ್ತಾ ಸ್ನೇಹಿತರಿಬ್ಬರೂ ದಾರಿಯಲ್ಲಿ ಮುಂದೆ ಸಾಗಿದರು. ಶಾಸ್ತ್ರಿಯು ಬೆದರಿ ಮೊದಲೇ ಬಳಲಿದ್ದನು. ಜೊತೆಗೆ ಬಾಯಾರಿಕೆಯಾಗಿತ್ತು. ಹತ್ತಿರದಲ್ಲಿ ಸರಕಲ್ಲಿನಲ್ಲಿ ನೀರು ಯಥೇಚ್ಛವಾಗಿ ಹರಿಯುತ್ತಿತ್ತು. ಆದರೆ ಸರಕಲಿಗಿಳಿಯುವ ಧೈರ್ಯ ಅವನಿಗಿರಲಿಲ್ಲ. ಇಬ್ಬರೂ ಗುಡ್ಡವನ್ನು ಪ್ರಯಾಸದಿಂದ ಹತ್ತಿ ಕೆಳಗಿಳಿದರು. ಗುಡ್ಡವನ್ನಿಳಿದು ಸ್ವಲ್ಪದೂರ ನಡೆದಿರಬೇಕು. ಅಷ್ಟರಲ್ಲಿಯೇ ಮುಂದೆ ದಾರಿಯ ಪಕ್ಕದಲ್ಲೇ ಒಂದು ಕೆರೆ ಕಾಣಿಸಿತು. ಆ ಕೆರೆಯಲ್ಲಿ ನೀರು ಕುಡಿಯಬಹುದೆಂದು ಶಾಸ್ತ್ರಿ ಎಣಿಸಿದ್ದನು. ಆದರೆ ವಿಚಿತ್ರ ಸನ್ನಿವೇಶ ಅವನ ಗಮನವನ್ನು ತಕ್ಷಣ ಸೆಳೆಯಿತು. ಕೆರೆಯ ಅಂಗಳದಲ್ಲಿ ನೀರಿಗೆ ಹತ್ತಿರದಲ್ಲೆ ಕಪ್ಪು ಬಣ್ಣದ ಉದ್ದವಾಗಿರುವ ಕೋಲುಗಳೆರಡು ದ್ವಂದ್ವ ಯುದ್ಧ ಮಾಡುತ್ತಿರುವಂತೆ ದೂರಕ್ಕೆ ಶಾಸ್ತ್ರಿಯ ಕಣ್ಣಿಗೆ ಕಾಣಿಸಿತು. "ಇದೇನು ಇಂದ್ರಜಾಲವೋ ಅಥವಾ ಮಲೆನಾಡಿನ ದೆವ್ವಗಳ ಆಟವೋ" ಎಂದು ಶಾಸ್ತ್ರಿ ಯೋಚಿಸುತ್ತಿದ್ದನು. ಮೂರ್ತಿಯನ್ನು ಕುರಿತು "ಓ ಅಲ್ಲಿ ಕಾಣುವುದೇನಯ್ಯಾ" ಎಂದು

ಆ ಕಡೆ ಕೈ ತೋರಿಸಿ, ಮೂರ್ತಿಯನ್ನು ಕೇಳಿದನು. "ಅವು ಕಾಳಿಂಗ ನಾಗರ ಹಾವುಗಳು! ಎಣೆಯಾಡುತ್ತಿವೆ" ಎಂದು ಮೂರ್ತಿ ಹೇಳಿದನು.

"ಹಾಗೆಂದರೇನಯ್ಯಾ" ಎಂದು ಶಾಸ್ತ್ರಿಯು ಪುನಃ ಪ್ರಶ್ನಿಸಿದನು.

"ನೋಡು. ಅವು ಭಯಂಕರ ಘಟಸರ್ಪಗಳು. ಅವು ಕಡಿದರೆ ಕಡಿಸಿಕೊಂಡವರು ಅರ್ಧ ಘಂಟೆಯೊಳಗೆ ಪರಲೋಕವನ್ನು ಮುಟ್ಟುತ್ತಾರೆ. ಅವು ನಮ್ಮ ಕಡೆ ಮಲೆನಾಡಿನಲ್ಲಿ ಹೆಚ್ಚಾಗಿವೆ. ಎಣೆಯೆಂದರೆ ಪ್ರಣಯವೆಂದರ್ಥ. ಅವು ಮೈಥುನ ಕಾರ್ಯದಲ್ಲಿ ಈಗ ತೊಡಗಿವೆ. ನಾವೀಗ ಅವುಗಳ ಹತ್ತಿರ ಹೋಗುವುದು ಅಪಾಯ. ಕೆರೆಯ ದಂಡೆಯನ್ನು ಬಿಟ್ಟು ಗದ್ದೆಯ ಕೋಗಿನಲ್ಲೇ ನಾವೀಗ ಹೋಗೋಣ" ಎಂದು ಮೂರ್ತಿ ನುಡಿದನು.

"ಕಾಳಿಂಗನಾಗರಗಳು ಎಷ್ಟೇ ಅಪಾಯಕಾರಿಯಾಗಿದ್ದರೂ ರಂಗನಾಥ, ಕಲ್ಲಪ್ಪ ಇವರುಗಳಷ್ಟು ಅಪಾಯಕಾರಿ ಜಂತುಗಳಲ್ಲ. ಆಗಲಿ. ನೀನು ಹೇಳುವ ಹಾಗೆ ಗದ್ದೆಯ ಕೋಗಿನಲ್ಲೇ ಹೋಗೋಣ" ಎಂದು ಶಾಸ್ತ್ರಿ ಹೇಳಿದನು.

ಸ್ವಲ್ಪ ದೂರ ಗದ್ದೆಯಲ್ಲಿ ಹೋಗಿ ನಂತರ ದಾರಿಗೆ ಬಂದು ಸೇರಿದರು. ಪವಿತ್ರಪುರಕ್ಕೆ ಒಂದು ಮೈಲಿಯಷ್ಟು ದೂರ ನಡೆಯಬೇಕಾಗಿತ್ತು. ಕಾಡು ದಟ್ಟವಾಗಿರಲಿಲ್ಲ. ಆದ್ದರಿಂದ ಕಾಡುಪ್ರಾಣಿಗಳ ಭಯವಿಲ್ಲದೆ ಸ್ನೇಹಿತರಿಬ್ಬರೂ ಮುಂದೆ ಸಾಗಬಹುದಾಗಿತ್ತು. ಇಬ್ಬರ ತಲೆಯಲ್ಲಿಯೂ ಮೋಹನನ ವಿಚಾರವೇ ತುಂಬಿತ್ತು.

ಮೂರ್ತಿ ಮೌನವನ್ನು ಕೊನೆಗಾಣಿಸಿ ಶಾಸ್ತ್ರಿಯನ್ನು ಕುರಿತು "ಶಾಸ್ತ್ರೀ, ಏನಿದು ಅನ್ಯಾಯ! ಮೋಹನ ಸಕಲ ಸದ್ಗುಣಗಳ ಶಕ್ತಿಯಂತಿದ್ದಾನೆ. ಆದರೆ ಅವನ ಜೀವನ ಮುಳ್ಳಿನ ಹಾಸಿಗೆಯಾಗಿದೆ. ರಂಗನಾಥ ಸಕಲ ದುರ್ಗುಣಗಳ ಪ್ರತಿಮೆಯಂತಿದ್ದಾನೆ. ಆದರೆ ಅವನು ಬಾಳು ಹೂವಿನ ಸುಪ್ಪತ್ತಿಗೆಯಾಗಿದೆ. ದೇವರಿರುವುದು ನಿಜವಾದರೆ ಅವನಿಗೆ ಕಣ್ಣಿಲ್ಲವೇನಯ್ಯಾ" ಎಂದನು.

"ಮೂರ್ತಿ, ನೀನು ಶತದಡ್ಡನಂತೆ ಮಾತನಾಡುತ್ತಿದ್ದೀಯ. ಒಂದರ ಮೇಲೊಂದು ಕಷ್ಟ ಪ್ರಾಪ್ತಿಯಾದಾಗ ಮಾನವನಲ್ಲಡಗಿರುವ ಪ್ರತಿಭೆ ಪ್ರಜ್ವಲಿಸುತ್ತದೆ. ಒಂದರಮೇಲೊಂದು ದುಃಖ ಪ್ರಾಪ್ತಿಯಾದಾಗ ಮಾನವನ ಮನಸ್ಸು ಆತ್ಮೋದ್ಧಾರದ ಕಡೆಗೆ ಹೊರಳುತ್ತದೆ. ಸಾವಿರ ಉಳಿ ಪೆಟ್ಟುಗಳು ಬಿದ್ದರೆ ಮಾತ್ರ ಒಂದು ಸುಂದರ ವಿಗ್ರಹವಾಗುವುದು. ಮೋಹನ ಒಬ್ಬ ಆದರ್ಶ ವ್ಯಕ್ತಿ. ಜಗತ್ತಿನ ಇತಿಹಾಸವನ್ನು ನೋಡು. ಆದರ್ಶ ವ್ಯಕ್ತಿಗಳೆಲ್ಲರೂ ಜೀವನದಲ್ಲಿ ಜೀವನದಲ್ಲಿ ವರ್ಣಿಸಲಾಗದ ಕಷ್ಟಗಳನ್ನನುಭವಿಸಿ ಸತ್ತವರು. ಹಂದಿಗಳಂತೆ ಬೊಜ್ಜು ಬೆಳೆಯಿಸಿ ಬಾಳಬೇಕಾದರೆ ಮೋಸ ಮಾಡಿ ಸಂಪಾದಿಸಬೇಕು. ಮೂರು ದಿನದ ಬಾಳ್ವೆಗಾಗಿ ಮಾಡಬಾರದ ಕೆಲಸ ಮಾಡಿ ಹೂವಿನ ಸುಪ್ಪತ್ತಿಗೆಯಲ್ಲಿ ಸುಖನಿದ್ರೆ ಮಾಡುವುದಕ್ಕಿಂತ, ಮೋಹನನಂತೆ ಆದರ್ಶಮೂರ್ತಿಯಾಗಿ, ಬಡಬಗ್ಗರ ಆರಾಧ್ಯದೇವತೆಯಾಗಿ, ಮುಳ್ಳಿನ ಮಂಚದಲ್ಲಿ ಹೊರಳಾಡುವುದು ಮೇಲು. ಏನಯ್ಯಾ ಬಾಳು. ಮೊನ್ನೆಯಿದ್ದವನು ನಿನ್ನೆ ಇಲ್ಲ. ನಿನ್ನೆ ಇದ್ದವನು ಇಂದಿಲ್ಲ. ಇಂದಿದ್ದವನು ನಾಳೆಯಿಲ್ಲ. ಮೋಹನನೂ ಸಾಯುತ್ತಾನೆ, ಲಕ್ಷಾಧಿಪತಿ ರಂಗನಾಥನೂ ಸಾಯುತ್ತಾನೆ.

ಮೋಹನ ಸಾಯುವಾಗ ಯೋಗಿಯಂತೆ ನಿಶ್ಚಿಂತೆಯಿಂದ ಸಾಯುತ್ತಾನೆ. ರಂಗನಾಥ ಸಾಯುವಾಗ ಹಣವನ್ನೂ, ದುಶ್ಚಟಗಳನ್ನೂ, ಬಿಟ್ಟು ಹೋಗಲಾರದೆ ವಿಲಿ ವಿಲಿ ಒದ್ದಾಡಿ, ಸಾಯಲಾರದೆ ಸಾಯುತ್ತಾನೆ. ರಂಗನಾಥ ಸತ್ತಾಗ 'ಮಾಡಬಾರದ ಕೆಲಸ ಮಾಡುತ್ತಿದ್ದ ಶನಿ ತೊಲಗಿತು' ಎಂದು ಜನರು ತೃಪ್ತಿ ಪಡುತ್ತಾರೆ. ಮೋಹನ ಸತ್ತಾಗ ಜನ ಮಮತೆಯಿಂದ ಮರುಗುತ್ತಾರೆ."

"ಶಾಸ್ತ್ರೀ. ವಿಜ್ಞಾನಯುಗದಲ್ಲಿ ನೀನು ಈ ರೀತಿ ಮಾತನಾಡುವುದು ನನಗೆ ಎಳ್ಳಷ್ಟೂ ಹಿಡಿಸುವುದಿಲ್ಲ. ಇದ್ದಾಗ ಸುಖಪಡದೆ ಸತ್ತ ಮೇಲೆ ಸುಖ ಲಭಿಸುತ್ತದೆ ಎಂದರೆ ಯಾರು ತಾನೆ ಈ ಕಾಲದಲ್ಲಿ ನಂಬುತ್ತಾರೆ? ರಷ್ಯಾ ದೇಶದಲ್ಲಿ ಜನರು ದೇವರನ್ನು ನಂಬುವುದೇ ಇಲ್ಲವಂತೆ. ಆದರೆ ಅವರು ನಮಗಿಂತ ಸುಖವಾಗಿದ್ದಾರಂತೆ. ದೇವರನ್ನೂ, ಒಣ ವೇದಾಂತವನ್ನೂ ಕಟ್ಟಿಕೊಂಡು ನಮ್ಮ ಮೋಹನ ಸೆರೆಮನೆಯನ್ನು ಸೇರಿದ. ಅವನು ಗಟ್ಟಿಯಾಗಿ ಆರ್ಭಟ ಮಾಡಿದ್ದರೆ ನಮ್ಮ ತಾಲ್ಲೂಕಿನ ಜನರು ರಂಗನಾಥನನ್ನೂ ಅವನ ಸ್ನೇಹಿತರನ್ನೂ ಗಂಟು ಮೂಟೆಗಳ ಸಮೇತ ಪವಿತ್ರಪುರವನ್ನು ಬಿಡುವಂತೆ ಮಾಡುತ್ತಿದ್ದರು. ವೇದಾಂತಿಯಾಗಿ ಈಗ ಸೆರೆಮನೆಯಲ್ಲಿದ್ದಾನೆ. ಸಾಕಪ್ಪಾ ನಿನ್ನ ಒಣ ವೇದಾಂತ."

"ಮೂರ್ತಿ, ನೀ ಯಾವಾಗ ನಾಸ್ತಿಕನಾದ್ದು? ಕಾಲೇಜಿನಲ್ಲಿದ್ದಾಗ ಆಸ್ತಿಕನಂತೆ ಮಾತನಾಡುತ್ತಿದ್ದೆ. ಈಗೇಕೆ ಹೀಗಾದೆ? ನಾನು ವೈಜ್ಞಾನಿಕ ದೃಷ್ಟಿಯಿಂದಲೇ ಮಾತನಾಡುತ್ತೇನೆ ಕೇಳು. ವಿಜ್ಞಾನಕ್ಕೂ ಆತ್ಮಜ್ಞಾನಕ್ಕೂ ಪರಸ್ಪರ ವಿರೋಧವೇನೂ ಇಲ್ಲ. ವಿಜ್ಞಾನಿಯಲ್ಲಿರುವ ಆತ್ಮವೇ ವೈಜ್ಞಾನಿಕ ಸಂಶೋಧನೆಗೂ, ವೈಜ್ಞಾನಿಕ ಪ್ರಗತಿಗೂ ಕಾರಣವೆಂಬುದನ್ನು ನೀನು ಮರೆಯಬಾರದು. ಕಳೆದ ಅರ್ಧ ಶತಮಾನದಲ್ಲಿ ವಿಜ್ಞಾನಿಗಳು ಮಾನವರ ಸುಖಕ್ಕಾಗಿ ಅದ್ಭುತ ಸಂಶೋಧನೆಗಳನ್ನು ಮಾಡಿ, ಹಲವು ಸಾಧನಗಳನ್ನು ಕಂಡುಹಿಡಿದಿದ್ದಾರೆ. ವೈದ್ಯಶಾಸ್ತ್ರದಲ್ಲಂತೂ ಅತ್ಯಾಶ್ಚರ್ಯಕರವಾದ ಪ್ರಯೋಗಗಳೂ, ಪ್ರಗತಿಯೂ ನಡೆದಿದೆ. ಆದರೆ ವೈದ್ಯರಾಗಲಿ, ಶಸ್ತ್ರಚಿಕಿತ್ಸಾ ಪ್ರವೀಣರಾಗಲಿ ಮಾನವರನ್ನು ತಾತ್ಕಾಲಿಕವಾಗಿ ರೋಗ ರುಜಿನಗಳಿಂದ ಪಾರುಮಾಡಬಲ್ಲರೇ ಹೊರತು ಅವರನ್ನು ಅಮರರನ್ನಾಗಿ ಮಾಡಲಾರರು. ವಿಜ್ಞಾನಿಗಳಾಗಲಿ, ವೈದ್ಯರಾಗಲಿ ಮಾನವರಿಗೆ ಶಾಶ್ವತ ಸುಖ ಶಾಂತಿಗಳನ್ನು ಕೊಡಲು ಅಸಮರ್ಥರಾಗಿದ್ದಾರೆ. ವಿಜ್ಞಾನಿಗಳಗೂ, ವೈದ್ಯರೂ ಕೂಡ ರೋಗ ರುಜಿನಗಳಿಂದ ಮಾನಸಿಕ ಅಶಾಂತಿಯಿಂದ ತಲ್ಲಣಿಸುತ್ತಾರೆ. ಜಗತ್ತಿನಲ್ಲಿ ಜನಿಸುವ ಎಲ್ಲ ಮಾನವರೂ ಒಂದಲ್ಲ ಒಂದು ದಿನ ಸಾಯಲೇ ಬೇಕು. ದುಡ್ಡಿದ್ದವರಿಗೆ ಒಂದು ವಿಧವಾದ ದುಃಖ ಚಿಂತೆಯಾದರೆ ದುಡ್ಡಿಲ್ಲದವರಿಗೆ ಇನ್ನೊಂದು ವಿಧವಾದ ಚಿಂತೆ. ದುಡ್ಡಿಲ್ಲದವನು ನಾಳೆಯ ಊಟದ ಗತಿಯೇನೆಂಬುದನ್ನು ಚಿಂತಿಸುತ್ತಿದ್ದರೆ ದುಡ್ಡಿದ್ದವನು ವರಮಾನ ತೆರಿಗೆಯಿಂದ ಹೇಗೆ ತಪ್ಪಿಸಿಕೊಳ್ಳಬೇಕೆಂಬುದನ್ನು ಚಿಂತಿಸುತ್ತಾನೆ.

"ಮಾನವರ ಕಲ್ಯಾಣಕ್ಕೆ ವಿಜ್ಞಾನ ಅತ್ಯಗತ್ಯ. ಆದರೆ ವಿಜ್ಞಾನದಿಂದಲೇ ಮಾನವರಿಗೆ ಸಂಪೂರ್ಣ ಸುಖ ಶಾಂತಿಗಳು ಲಭಿಸುತ್ತವೆ. ಎಂದರೆ ಅದು ಮೂರ್ಖತನವಾಗುತ್ತದೆ.

ಶಾಶ್ವತ ಸುಖವೆಲ್ಲಿ ಬಂತು? ಜೀವನದಲ್ಲಿ ಒಂದು ಘಟನೆ ಸಂತೋಷವನ್ನುಂಟು ಮಾಡುತ್ತದೆ. ಜಗತ್ತಿನ ನಿಯಮಗಳನ್ನು ವಿಜ್ಞಾನಿಗಳು ಬದಲಾಯಿಸಲಾರರು. ಎಲ್ಲರ ಹೃದಯದಲ್ಲಿಯೂ ದೈವೀಶಕ್ತಿಯ ಕಿಡಿ ಅಡಗಿರುವುದರಿಂದಲೇ ಒಬ್ಬರನ್ನೊಬ್ಬರು ಪ್ರೀತಿಸುತ್ತಾರೆ; ಅನುತಾಪ ಅನುಕಂಪಪಡುತ್ತಾರೆ. ಈ ಕಾರಣದಿಂದಲೇ ಒಂದು ಜೀವಿ ಇನ್ನೊಂದು ಜೀವಿಗೆ ಹಿಂಸೆ ಕೊಡಬಾರದೆಂಬುದು. ಆದ್ದರಿಂದ ಮಾನವರಿಗಿಂತ ಮಿಗಿಲಾದ ಶಕ್ತಿಯೊಂದು ಜಗತ್ತಿನ ಆಗುಹೋಗುಗಳನ್ನು ನಿರ್ಧರಿಸುತ್ತದೆಂಬುದನ್ನು ಮರೆಯಬಾರದು."

"ಶಾಸ್ತ್ರೀ, ನಿನ್ನ ವೇದಾಂತ ಮೋಹನನಿಗೆ ಅರ್ಥವಾಗುತ್ತದೆ. ಆದರೆ ಆ ದುಡ್ಡಿದ್ದ ಮೃಗಗಳಾದ ರಂಗನಾಥನಿಗೂ, ಕಲ್ಲಪ್ಪನಿಗೂ ಅದು ಅರ್ಥವಾಗಿಲ್ಲ. ಮೋಹನನಿಗೆ ಅರ್ಥವಾದ ವೇದಾಂತ ಆ ಮೃಗಗಳಿಗೆ ಅರ್ಥವಾಗದೆ ಹೋಗಿರುವುದರಿಂದ ಇಷ್ಟೆಲ್ಲಾ ಅನರ್ಥಕ್ಕೆ ಕಾರಣವಾಯಿತು. 'ದಡ್ಡರಿಗೆ ದೊಣ್ಣೆ ಪೆಟ್ಟು, ಜಾಣರಿಗೆ ಮಾತಿನ ಪೆಟ್ಟು' ಎಂಬ ಗಾದೆಯೇ ಇದೆ. ರಂಗನಾಥನಿಗೂ, ಕಲ್ಲಪ್ಪನಿಗೂ ಅರ್ಥವಾಗುವುದು ಪೆಟ್ಟು, ವೇದಾಂತವಲ್ಲ. ಮೋಹನ ಮನಸ್ಸು ಮಾಡಿದ್ದರೆ ಬಹಳ ಹಿಂದೆಯೇ ಅವರಿಗೆ ಪೆಟ್ಟು ಬೀಳುತ್ತಿತ್ತು. ಆ ರೀತಿಯಾಗಿದ್ದರೆ ಮೋಹನ ಇಂದು ಈ ರೀತಿ ಇರುತ್ತಿರಲಿಲ್ಲ."

"ರಂಗನಾಥ ಅಂಡ್ ಕಂಪೆನಿ ಆಗಲೇ ಲಿಕ್ವಿಡೇಶನ್‌ಗೆ ಬಂದಿದೆ. ಮೂರ್ತಿ, ಇನ್ನು ಕೆಲವೇ ವರ್ಷಗಳಲ್ಲಿ ಆ ಕಂಪೆನಿಯ ಹಿಸ್ಸೆದಾರರು ದಿವಾಳಿಯಾಗುತ್ತಾರೆ. ಅವರೇ ತೋಡಿದ ಪಾಪದ ಕೂಟದಲ್ಲಿ ಅವರು ಮುಳುಗಿ ಸಾಯುತ್ತಾರೆ. ನನಗೇನೂ ಜ್ಯೋತಿಷ್ಯ ಬರುವುದಿಲ್ಲ. ಆದರೆ ನನ್ನ ಮನಸ್ಸು ಆ ರೀತಿ ಹೇಳುತ್ತದೆ."

ಮೂರ್ತಿ ಶಾಸ್ತ್ರಿಯರಿಬ್ಬರೂ ಪವಿತ್ರಪುರವನ್ನು ತಲುಪಿದನಂತರ ಸೆರೆಮನೆಯ ಅಧಿಕಾರಿಗಳ ಅಪ್ಪಣೆ ಪಡೆದು ವಕೀಲ್ ಸೂರ್ಯನಾರಾಯಣರಾಯರೊಡನೆ ಮೋಹನನನ್ನು ನೋಡಲು ಸೆರೆಮನೆಗೆ ಹೋದರು. ಅವರು ಸೆರೆಮನೆಯನ್ನು ತಲುಪುವುದಕ್ಕಿಂತ ಮುಂಚಿತವಾಗಿ ತಾಯಿಯ ಸಾವಿನ ಸುದ್ದಿ ಸೆರೆಮನೆಯ ಸಿಪಾಯಿಗಳಿಂದ ಮೋಹನನಿಗೆ ಗೊತ್ತಾಗಿದ್ದಿತು. ತನ್ನ ಕೊಠಡಿಯಲ್ಲಿ ಕುಳಿತು ಅವನು ಬಹಳ ಹೊತ್ತು ಅತ್ತನು. ತಾಯಿಯ ಮರಣದಿಂದ ಹೊರಹೊರಟ ದುಃಖಾಶ್ರುಗಳ ಪ್ರವಾಹ ವೇದಾಂತದ ಕೋಟೆಯನ್ನು ಸುಲಭವಾಗಿ ಭೇದಿಸಿತ್ತು. ಎಷ್ಟೇ ವೇದಾಂತಿಯಾದರೂ ಭೌತಿಕ ದೇಹದಲ್ಲಿರುವವರೆಗೆ ಭೌತಿಕ ನಿಯಮಗಳಿಗೆ ಒಳಗಾಗಿರಬೇಕು. ಮೋಹನನು ಬ್ರಹ್ಮಚಾರಿಯಾಗಿ ಗಾಂಧೀಜಿಯವರ ಉಪದೇಶಗಳಿಗನುಣವಾಗಿ ಬಾಳುತ್ತಿದ್ದರೂ ಜಗತ್ತಿನ ಮೋಹಪಾಶಗಳಿಂದ ಅವನು ಸಂಪೂರ್ಣವಾಗಿ ಬಿಡುಗಡೆ ಹೊಂದಿರಲಿಲ್ಲ. ತಾಯ್ತಂದೆಗಳು ಸತ್ತಾಗ ದುಃಖಪಡುವುದು ಮಾನವ ಸ್ವಭಾವ. ಮಾನವ ಸ್ವಭಾವಕ್ಕನುಗುಣವಾಗಿ ಮೋಹನನು ದುಃಖಿಸುತ್ತಿದ್ದನು. ಅವನು ಅಳುತ್ತಿರುವಾಗ, ಸೆರೆಮನೆಯ ಸಿಪಾಯಿಯೊಬ್ಬನು ಅವನ ಕೊಠಡಿಗೆ ಬಂದು, ಅವನ ಸ್ನೇಹಿತರು ನೋಡಲು ಬಂದಿದ್ದಾರೆಂದು ತಿಳಿಸಿ, ಅವನನ್ನು ಬಂಧಿಗಳು

ಅವರ ಬಂಧುವರ್ಗದವರನ್ನೂ ಸ್ನೇಹಿತರನ್ನೂ ಭೇಟಿಮಾಡುವ ಕೊಠಡಿಗೆ ಕರೆದೊಯ್ದನು. ಸ್ನೇಹಿತರನ್ನು ನೋಡಿದೊಡನೆ ಮೋಹನನು ಬಿಕ್ಕಿ ಬಿಕ್ಕಿ ಅಳುತ್ತಾ ಈ ರೀತಿ ಹೇಳಿದನು.

"ಖೂನಿ ಕೇಸಿನಲ್ಲಿ ಅಪರಾಧಿಯಾಗಿ ಕೈದಿಯಾಗಿರುವ ನನ್ನನ್ನು ನೋಡಲು ಬಂದಿರಾ? ಪೂರ್ವಜನ್ಮದಲ್ಲಿ ನಾನು ಎಷ್ಟು ಜನರಿಗೆ ಕಷ್ಟಗಳನ್ನು ಕೊಟ್ಟಿದ್ದೆನೋ! ಅದಕ್ಕಾಗಿ ಈ ಕಷ್ಟಗಳನ್ನು ಅನುಭವಿಸುತ್ತ ಇದ್ದೇನೆ. ರಾಜಕೀಯ ಕೈದಿಯಾಗಿದ್ದಾಗ ತಂದೆ ಕೈಬಿಟ್ಟು ಹೋದರು. ಕ್ರಿಮಿನಲ್ ಕೈದಿಯಾದಾಗ ತಾಯಿ ಕೈಬಿಟ್ಟು ಹೋದಳು. ಜಗತ್ತಿನಲ್ಲಿ ನನಗೆ ಇನ್ನಾರು ಉಳಿದಿದ್ದಾರೆ? ವಿಧವಿಲಾಸ ನನಗೆ ಅರ್ಥವಾಗುವುದಿಲ್ಲ. ನನ್ನ ತಾಯಿ ನನಗಾಗಿ ಬಹಳ ಕಷ್ಟಪಟ್ಟಳು; ಮಿತಿಮೀರಿ ದುಃಖಪಟ್ಟಳು. ಆಕೆಯು ನನಗಾಗಿ ಕನಸಿನ ಸಾಮ್ರಾಜ್ಯ ಒಂದನ್ನು ಕಟ್ಟಿದ್ದಳು. ನಾನು ಸೆರೆಮನೆಯನ್ನು ಸೇರಿದ ಮೇಲೆ ಆಕೆಯು ತನ್ನ ಮನಸ್ಸಿನಲ್ಲಿ ಕಟ್ಟಿದ್ದ ಕನಸಿನ ಸಾಮ್ರಾಜ್ಯ ಕುಸಿದು ಬಿದ್ದಿತು. ಆದ್ದರಿಂದ ಜೀವನದಲ್ಲಿ ನಿರಾಶೆಯಾಗಿ ಆಕೆ ನನ್ನನ್ನು ಅಗಲಿ ಹೋದಳು. ಶಾಸ್ತ್ರೀ, ನಮ್ಮ ತಾಯಿಗೆ ವೇದಾಂತ ತಿಳಿಯುತ್ತಿರಲಿಲ್ಲ. ಮಗನು ಗಣ್ಯವ್ಯಕ್ತಿಯಾಗಿ ಸುಖವಾಗಿರಬೇಕೆಂಬುದೇ ಆಕೆಯ ವೇದಾಂತವಾಗಿತ್ತು. ತಾಯಿಯಾದವಳಿಗೆ ಅದಕ್ಕಿಂತ ಹೆಚ್ಚಿನ ವೇದಾಂತ ಏಕೆಬೇಕು? ನನ್ನ ಜೀವನ ಒಂದು ದುರಂತ ನಾಟಕವಾಯಿತು. ಚಿಕ್ಕಂದಿನಿಂದಲೂ ಗಾಂಧೀಜಿಯವರ ಉಪದೇಶಗಳನ್ನು ಅನುಷ್ಠಾನಕ್ಕೆ ತರುವ ಪ್ರಯತ್ನ ಮಾಡಿದೆ. ಸ್ಥಿತಪ್ರಜ್ಞನಾಗಬೇಕೆಂದು ಹೆಣಗಿದೆ. ಆದರೆ ಜಗತ್ತಿನಲ್ಲಿ ಮೋಹಪಾಶದಿಂದ ನಾನಿನ್ನೂ ಬಿಡುಗಡೆ ಹೊಂದಿಲ್ಲ. ಇಹಲೋಕದ ಸುಖವನ್ನು ಅನುಭವಿಸಲಿಲ್ಲ. ಅಧ್ಯಾತ್ಮಿಕ ಶಾಂತಿಯನ್ನು ಪಡೆಯಲಿಲ್ಲ. ಎಡಬಿಡಂಗಿಯಾಗಿ ಅತೃಪ್ತಿಯ ಜ್ವಾಲಾಮುಖಿಯಾಗಿದ್ದೇನೆ. ಇಂದ್ರಿಯಗಳನ್ನು ಸಂಪೂರ್ಣವಾಗಿ ಜಯಿಸಲಿಲ್ಲ. ನಿರಾಪರಾಧಿಯಾದ ನಾನು ಕೊಲೆ ಮೊಕದ್ದಮೆಯಲ್ಲಿ ಅಪರಾಧಿಯಾದ ಮೇಲೆ ದೇವರಲ್ಲಿಯೂ ಕೂಡ ನಂಬಿಕೆ ಹೊರಟುಹೋಗಿದೆ. ನಾನು ಕಷ್ಟಪಡುತ್ತಿರುವುದು ನನಗೆ ದುಃಖವಾಗಿಲ್ಲ; ಸತ್ಯಕ್ಕೆ ಜಯ ಲಭಿಸದೆ ಇರುವುದು ನನಗೆ ಬಹಳ ದುಃಖವನ್ನುಂಟುಮಾಡಿದೆ."

ಆಗ ಶಾಸ್ತ್ರಿಯು ಮೋಹನನ್ನು ಕುರಿತು "ಮೋಹನಾ, ನೀನು ಇಂದ್ರಿಯಗಳನ್ನು ಸಂಪೂರ್ಣವಾಗಿ ನಿಗ್ರಹಿಸದೆ ಇರಬಹುದು. ಕೊಲೆ ಮೊಕದ್ದಮೆಯಲ್ಲಿ ನೀನಿಂದು ಅಪರಾಧಿಯಾಗಿರಬಹುದು. ಆಸ್ತಿಯಿಲ್ಲದ ಬೀದಿ ಭಿಕಾರಿಯಾಗಿರಬಹುದು. ಆದರೆ ನೀನೊಬ್ಬ ಶ್ರೇಷ್ಠ ವ್ಯಕ್ತಿ. ನಿನ್ನ ಮುಖಸ್ತುತಿಗೋಸ್ಕರ ನಾನು ಇದನ್ನು ಹೇಳುತ್ತಾ ಇಲ್ಲ. ಅಥವಾ ನೀನು ನನ್ನ ಸ್ನೇಹಿತನೆಂಬ ವಾತ್ಸಲ್ಯದಿಂದಲೂ ಹೇಳುತ್ತಾ ಇಲ್ಲ. ವಾಸ್ತವಿಕ ವಿಚಾರವನ್ನು ಹೇಳುತ್ತಾ ಇದ್ದೇನೆ. ಇಂದ್ರಿಯಗಳನ್ನು ನಿಗ್ರಹಿಸುವುದು ಅಷ್ಟೊಂದು ಸುಲಭವಾದ ಕೆಲಸವೇನೂ ಅಲ್ಲ. ಮಾನವ ಶರೀರ ಭೌತಿಕ ನಿಯಮಗಳಿಗೆ ಒಳಪಟ್ಟಿದೆ. ಜೀವವು ಶರೀರದಲ್ಲಿ ಇರುವವರೆಗೆ ಅದು ಸ್ವಲ್ಪಮಟ್ಟಿಗಾದರೂ ಭೌತಿಕ ನಿಯಮಗಳಿಗೆ ಅಧೀನವಾಗಿರಬೇಕು. ಹಸಿವು, ತೃಷೆ, ಕಾಮ, ಕ್ರೋಧ ಮುಂತಾದ ಹುಟ್ಟು ಪ್ರವೃತ್ತಿಗಳು

ಭೌತಿಕ ನಿಯಮಗಳಿಗನುಗುಣವಾಗಿರುವ ಸ್ವಭಾವಗಳು. ಸಂಪೂರ್ಣ ಸಿದ್ಧಿಯನ್ನು ಪಡೆದ ಪೂರ್ಣ ಯೋಗಿಗಳು ಮಾತ್ರ ಈ ಪ್ರವೃತ್ತಿಗಳನ್ನು ನಿಗ್ರಹಿಸಲು ಸಮರ್ಥರಾಗುತ್ತಾರೆ. ಉಳಿದವರು ಎಷ್ಟೇ ತತ್ವಜ್ಞಾನಿಗಳಾಗಿದ್ದರೂ, ಒಮ್ಮೊಮ್ಮೆ ಆಕಸ್ಮಿಕವಾಗಿ, ಇಂದ್ರಿಯಗಳ ವ್ಯಾಪಾರದ ಬೊಂಬೆಗಳಾಗುತ್ತಾರೆ. ಆದ್ದರಿಂದ ಇಂದ್ರಿಯಗಳನ್ನು ನಿಗ್ರಹಿಸಿಲ್ಲವೆಂದು ನೀನು ವ್ಯಥೆಪಡಬೇಕಾಗಿಲ್ಲ. ಕೆಲವು ವರ್ಷಗಳ ಆಗುಹೋಗುಗಳನ್ನು ಗಮನದಲ್ಲಿಟ್ಟುಕೊಂಡು ಸತ್ಯಕ್ಕೆ ಜಯ ದೊರೆಯಲಿಲ್ಲವೆಂದು ನಿನ್ನಂತಹವರು ಹೇಳಬಾರದು. ನಿನ್ನೆ ಇಲ್ಲದ ಇಂದಿಲ್ಲ; ಇಂದಿಲ್ಲದ ನಾಳೆಯಿಲ್ಲ. ನಮ್ಮ ಇಂದಿನ ಬಾಳಿಗೆ ಹಿಂದೆಮುಂದೆಗಳೆರಡೂ ಇರಲೇಬೇಕು. ಹಿಂದಿನದು ನಮ್ಮ ಸ್ಮೃತಿಪಥದಲ್ಲಿಲ್ಲ; ಮುಂದಿನದು ನಮ್ಮ ದೃಷ್ಟಿಗೆ ಅಗೋಚರವಾಗಿದೆ. ಇಂದಿನ ಬಾಳಿನ ಕಥೆ ಮಾತ್ರ ನಮಗೆ ತಿಳಿದಿದೆ. ಇಂದು ಫಲಿಸದ ಸತ್ಯ ಮುಂದೆ ಫಲಿಸಬಹುದು. ಆದ್ದರಿಂದ ಬಹಳ ಸುಲಭವಾಗಿ ಸತ್ಯಕ್ಕೆ ಜಯ ಲಭಿಸಲಿಲ್ಲವೆಂದು ಹೇಳಬಾರದು. ನಿಮ್ಮ ತಾಯಿಯ ಮರಣಕ್ಕಾಗಿ ಸಾಮಾನ್ಯ ಜನರಂತೆ ಅಳುವುದು ನಿನಗೆ ಸಲ್ಲದು. ಹುಟ್ಟಿದವರು ಸಾಯಲೇಬೇಕು. ನೀನು ಧೈರ್ಯವಾಗಿರು. ದೇವರು ಒಳ್ಳೆಯದನ್ನು ಮಾಡುತ್ತಾನೆ. ಸೂರ್ಯನಾರಾಯಣರಾಯರು ನಿನ್ನ ಪರ ವಕಾಲತ್ತನ್ನು ವಹಿಸಲು ಸಿದ್ಧತೆಗಳಿಗಾಗಿ ಇಲ್ಲಿಗೆ ಬಂದಿದ್ದಾರೆ. ಅವರ ಹತ್ತಿರ ಏನಾದರೂ ಮಾತನಾಡುವುದಿದ್ದರೆ ಮಾತನಾಡು" ಎಂದನು

"ಶಾಸ್ತ್ರಿ, ಸೂರ್ಯನಾರಾಯಣರಾಯರೊಡನೆ ನಾನೇನು ಹೇಳಲಿ? ನಾನು ನಿರಾಪರಾಧಿಯೆಂಬುದನ್ನು ಮಾತ್ರ ಅವರೊಡನೆ ಹೇಳಬಲ್ಲೆ. ಇನ್ನೇನೂ ಹೇಳಲಾರೆ. ನನಗೆ ಕೋರ್ಟಿನ ವ್ಯವಹಾರವೂ ತಿಳಿಯದು" ಎಂದು ಮೋಹನ ನುಡಿದನು.

ಕೊಲೆ ಮೊಕದ್ದಮೆಯಲ್ಲಿ ಮೋಹನನ ಪರವಾಗಿ ಏನೇನು ಮಾಡಬೇಕೆಂಬುದನ್ನು ಅಂದು ರಾತ್ರಿ ಮೋಹನನ ಸ್ನೇಹಿತರೆಲ್ಲರೂ ಸೇರಿ ಸಮಾಲೋಚನೆ ನಡೆಸಿದರು. ಮೊಕದ್ದಮೆಯನ್ನು ನಡೆಸುವ ಸಲುವಾಗಿ ಬೇಕಾದಷ್ಟು ಹಣವನ್ನು ಮೋಹನನ ಕಡೆಯವರು ಸಂಗ್ರಹಿಸಿದ್ದರು. ಆದ್ದರಿಂದ  ಹಣದ ಕೊರತೆಯೇನೂ ಇರಲಿಲ್ಲ. ಮೋಹನನ ಸ್ನೇಹಿತರಿಗೆ ಅವನು ಸೆರೆಮನೆಯಲ್ಲಿರುವುದೇ ಒಂದು ದೊಡ್ಡ ಕೊರತೆಯಾಗಿತ್ತು. ಸರ್ಕಾರದ ಪರವಾಗಿ ಪೋಲಿಸಿನವರು ಐವತ್ತು ಜನ ಸಾಕ್ಷಿಗಳನ್ನು ತಯಾರು ಮಾಡಿದ್ದರು. ಮೋಹನನ ಪರವಾಗಿ ಮೊಕದ್ದಮೆಯಲ್ಲಿ ಮೂರ್ತಿಯನ್ನು ಕರಿಯಪ್ಪನನ್ನೂ ವಿಚಾರ ಮಾಡಬೇಕೆಂದು  ವಕೀಲ್ ಸೂರ್ಯನಾರಾಯಣರಾಯರು ತೀರ್ಮಾನಿಸಿದರು. ಮೊಕದ್ದಮೆ ವಿಚಾರಣೆಗೆ ಬಂದೊಡನೆ ಸೂರ್ಯನಾರಾಯಣರಾಯರು ಮೈಸೂರಿನಿಂದ ಬರತಕ್ಕದ್ದೆಂದು ನಿರ್ಧಾರವಾಯಿತು.

ಮರುದಿನ ಸೂರ್ಯನಾರಾಯಣರಾಯರೂ, ಶಾಸ್ತ್ರಿಯೂ ಮೈಸೂರಿಗೆ ತೆರಳಿದರು. ಮೂರ್ತಿಯೊಬ್ಬನೇ ಏಕಾಂಗಿಯಾಗಿ ಚಿಂತಾಕ್ರಾಂತನಾಗಿ ಪವಿತ್ರಪುರದಲ್ಲಿ ಉಳಿದನು.

ಮೂರ್ತಿಯ ಜವಾಬ್ದಾರಿ ಹೆಚ್ಚಾಗಿತ್ತು. ಮೊಕದ್ದಮೆಯ ಸಂಬಂಧ ಅವನು ತಕ್ಕ ಸಿದ್ಧತೆಗಳನ್ನು ಮಾಡಬೇಕಾಗಿತ್ತು. ಮುಖ್ಯವಾಗಿ ಪೋಲಿಸಿನವರು ಹಾಜರು ಮಾಡಬಹುದಾದ ಸುಳ್ಳು ಸಾಕ್ಷಿಗಳನ್ನು ಸುಳ್ಳು ರುಜುವಾತುಗಳನ್ನೂ, ಅಲ್ಲಗಳೆಯುವ ಸಲುವಾಗಿ ಅವನು ಅವಶ್ಯಕ ವಿಷಯಗಳನ್ನು ಸಂಗ್ರಹಿಸಬೇಕಾಗಿತ್ತು. ಜೊತೆಗೆ ಮೋಹನನ ಯೋಗಕ್ಷೇಮವನ್ನು ವಿಚಾರಿಸುವ ಸಲುವಾಗಿ ಪ್ರತಿದಿನವೂ ಹಳ್ಳಿಗಳಿಂದ ಬರುವ ಜನರಿಗೆ ಅವನು ಸಮಾಧಾನ ಹೇಳಿ ಕಳುಹಿಸಬೇಕಾಗಿತ್ತು. ಎಲ್ಲಕ್ಕಿಂತ ಮಿಗಿಲಾಗಿ ರೊಚ್ಚಿಗೆದ್ದ ಮೋಹನನ ಅನುಯಾಯಿಗಳು ಪೋಲಿಸಿನವರ ಮೇಲೆ ದಂಗೆಯೇಳ ದಂತೆಯೂ, ರಂಗನಾಥ ಮಿತ್ರಮಂಡಳಿಯವರು ಮೇಲೆ ಧಾಳಿಯನ್ನು ನಡೆಯಿಸ ದಂತೆಯೂ ನೋಡಿಕೊಳ್ಳಬೇಕಾಗಿತ್ತು. ಅಪ್ರತಿಮ ಜನನಾಯಕನಾದ ಮೋಹನನು ಸೆರೆಮನೆಯಲ್ಲಿ ಕೊಳೆಯುತ್ತಿರುವುದನ್ನು ಜನರು ಸಹಿಸುವಂತಿರಲಿಲ್ಲ. ಅವರು ಸೆರೆಮನೆಯ ಮೇಲೆ ಧಾಳಿಯನ್ನು ನಡೆಯಿಸುವುದಕ್ಕೂ, ರಂಗನಾಥನನ್ನೂ ಕಲ್ಲಪ್ಪನನ್ನೂ ಸದೆ ಬಡಿಯುವುದಕ್ಕೂ ಹಿಂದೆಗೆಯುತ್ತಿರಲಿಲ್ಲ. ಮೋಹನನ ಕಡೆಯವರಿಂದ ಕಾನೂನು ಭಂಗವಾಯಿತೆಂದು ಅಖಿಲ ಭಾರತ ಕಾಂಗ್ರೆಸ್ ಮುಖಂಡರು ಭಾವಿಸಲು ಆಸ್ಪದವಿಲ್ಲದಂತೆ ನೋಡಿಕೊಳ್ಳುವ ಹೊಣೆ ಮೂರ್ತಿಯದಾಗಿತ್ತು.

## ೧೯. ಕೊಲೆ ಮೊಕದ್ದಮೆಯಲ್ಲಿ ವಿಚಾರಣೆ

ಮೋಹನನು ಸೆರೆಮನೆಯನ್ನು ಸೇರಿ ಮೂರು ತಿಂಗಳು ಮತ್ತು ಐದು ದಿನಗಳಾದ ತರುವಾಯ ಪವಿತ್ರಪುರದ ಮೊದಲನೆಯ ದರ್ಜೆಯ ಮ್ಯಾಜಿಸ್ಟ್ರೇಟರ ಸಮ್ಮುಖದಲ್ಲಿ ಗೊರಗೋಡು ಮೊಕದ್ದಮೆಯ ವಿಚಾರಣೆ ಪ್ರಾರಂಭವಾಯಿತು. ಕೋರ್ಟಿನ ಬಳಿ ಮೋಹನನನ್ನು ನೋಡಲು ಪ್ರತಿದಿನವೂ ನೂರಾರು ಜನರು ಬರುತ್ತಿದ್ದರು. ಮೋಹನನು ಗಡ್ಡವನ್ನು ಬೆಳೆಸಿ ಸಂನ್ಯಾಸಿಯಂತೆ ಕಾಣುತ್ತಿದ್ದನು. ಅವನ ಮುಖದಲ್ಲಿ ಅಪೂರ್ವವಾದ ತೇಜಸ್ಸಿದ್ದರೂ ದೇಹದಲ್ಲಿ ನಿಶ್ಶಕ್ತಿ ತಲೆದೋರಿತ್ತು. ಸ್ವರಾಜ್ಯಕ್ಕೋಸ್ಕರ ನಡೆದ ಚಳವಳಿಯ ಕಾಲದಲ್ಲಿ ಅವನು ಸೆರೆಮನೆಯಲ್ಲಿದ್ದಾಗ, ಹಠಯೋಗ ಮತ್ತು ರಾಜಯೋಗಗಳಲ್ಲಿ ಸ್ವಲ್ಪಮಟ್ಟಿಗೆ ಕೈ ಹಾಕಿದ್ದನು. ಸೆರೆಮನೆಯಿಂದ ಬಿಡುಗಡೆಯಾದ ನಂತರ ಅವನು ಆ ಸಾಧನೆಗಳನ್ನು ಬಿಟ್ಟಿರಲಿಲ್ಲ. ಕಳೆದ ಮೂರು ತಿಂಗಳುಗಳಿಂದ ಸೆರೆಮನೆಯಲ್ಲಿ ಅವನು ತೀವ್ರಗತಿಯಲ್ಲಿ ಆ ಸಾಧನೆಗಳಲ್ಲಿ ತೊಡಗಿದ್ದನು. ಗುರುವಿನ ಅನುಗ್ರಹವಿಲ್ಲದೆ ಸಾಧಕನಾದವನು. ರಾಜಯೋಗದಲ್ಲಿ ಸಿದ್ಧಿಯನ್ನು ಪಡೆಯುವುದು ಬಹಳ ಕಷ್ಟ. ಗುರುವಿನ ಸಹಾಯವಿಲ್ಲದೆ ಮಾಡಿದ್ದ ಸಾಧನೆಗಳ ಪರಿಣಾಮವಾಗಿ ಮೋಹನನ ಶಕ್ತಿ ಬಹಳ ಕುಗ್ಗಿತ್ತು. ಯೋಗಾಭ್ಯಾಸವು ಅವನ ಮೆದುಳಿನ ಮೇಲೂ ನರಗಳ ಮೇಲೂ ಸಾಕಾದಷ್ಟು ದುಷ್ಪರಿಣಾಮವನ್ನುಂಟುಮಾಡಿತ್ತು.

ಅಭ್ಯಾಸದ ಫಲವಾಗಿ ಪ್ರತಿದಿನವೂ ಅವನಿಗೆ ಜ್ವರ ಬರುತ್ತಾ ಇತ್ತು. ಆದರೂ ಅವನು ಸಾಧನೆಯನ್ನು ಬಿಟ್ಟಿರಲಿಲ್ಲ. ಸೆರೆಮನೆಯ ಆಹಾರವೂ ಅವನಿಗೆ ಹಿಡಿಸುತ್ತಿರಲಿಲ್ಲ. ಜೊತೆಗೆ ಅವನ ಜೀವನದಲ್ಲಿ ಇತ್ತೀಚೆಗೆ ನಡೆದ ಘಟನೆಗಳಿಂದ ಅವನ ಮೂಲಭೂತ ನಂಬಿಕೆಗಳಿಗೆ ಗದಾಪ್ರಹಾರವಾದಂತಾಗಿತ್ತು. ದೇವರಿದ್ದಾನೆಂದೂ, ಅಂತಿಮದಲ್ಲಿ ಸತ್ಯಕ್ಕೆ ಜಯ ಲಭಿಸುವುದೆಂದೂ ಅವನು ಅಚಲವಾದ ನಂಬಿಕೆಯನ್ನು ಹೊಂದಿದ್ದನು. ರಂಗನಾಥ ಮಂತಾದವರು ನಿರಪರಾಧಿಯಾದ ತನಗೆ ಇಷ್ಟೊಂದು ಕಷ್ಟಗಳನ್ನು ಕೊಟ್ಟರೂ ದೇವರು ತನ್ನ ಸಹಾಯಕ್ಕೆ ಬರದಿದ್ದುದರಿಂದ ದೇವರ ಇರುವಿಕೆಯಲ್ಲೇ ಅವನಿಗೆ ಅನುಮಾನ ಹುಟ್ಟಿತ್ತು. ಅಲ್ಲದೆ ಇತ್ತೀಚಿನ ಪವಿತ್ರಪುರದ ರಾಜಕಾರಣದಲ್ಲಿ ಸತ್ಯವಂತರಾದವರು ಪದೇ ಪದೇ ಕಷ್ಟಕ್ಕೀಡಾಗುತ್ತಿದ್ದರು. ಆದ್ದರಿಂದ ಸತ್ಯಕ್ಕೆ ಅಂತಿಮದಲ್ಲಿ ಜಯ ಲಭಿಸುವುದೆಂಬ ಅವನ ನಂಬಿಕೆ ಅಲುಗಾಡುತ್ತಿತ್ತು. ಅವನ ಮೂಲಭೂತ ನಂಬಿಕೆಗಳಿಗೆ ಕೊಡಲಿಯ ಪೆಟ್ಟು ಬಿದ್ದಿದ್ದರಿಂದ ಅವನ ದೇಹವೂ, ಮನಸ್ಸೂ ಜರ್ಝರಿತವಾಗಿದ್ದವು. ಸಾಧನೆಯ ಕಾಲದಲ್ಲಿ ಮನಸ್ಸನ್ನು ಹಿಡಿತದಲ್ಲಿಡಲು ಅವನು ಮಾಡುತ್ತಿದ್ದ ಪ್ರಯತ್ನಗಳೆಲ್ಲವೂ ವಿಫಲವಾಗುತಿದ್ದವು. ಒಂದೊಂದು ದಿನ ಸಾಧನೆಯಿಂದ ಶಾಂತಿ ದೊರೆಯುತ್ತಿತ್ತು.

ಆದರೆ ಆ ಶಾಂತಿ ತಾತ್ಕಾಲಿಕವಾಗಿತ್ತು. ತಕ್ಷಣವೆ ಅಶಾಂತಿಯ ಬಿರುಗಾಳಿಯೆದ್ದು ಶಾಂತಿಯನ್ನು ಕಲಕುತ್ತಿತ್ತು. ಈಚೆಗೆ ಅವನ ಗಮನವೆಲ್ಲವೂ ಅಂತರ್ಮುಖವಾಗಿತ್ತು. ಆದರೆ ಅದು ಸಿದ್ಧಪುರುಷನಿಗೆ ಲಭಿಸುವ ಶಾಂತಿ ಸಂಕೇತವಾಗಿರಲಿಲ್ಲ. ಬಾಹ್ಯ ಜಗತ್ತು ಬೇಡವಾಗಿದ್ದರಿಂದ ಮನಸ್ಸು ಅಂತರ್ಮುಖವಾಗಿತ್ತು. ಎಷ್ಟು ಕಾಲ ಬಾಳಿದರೂ ಕಳವಳ ಕಾಡುತ್ತದೆ ಎಂಬುದು ಅವನ ಜೀವನದ ಅನುಭವವಾಗಿತ್ತು.

ಆದ್ದರಿಂದ ಅವನು ಜಗತ್ತಿನಲ್ಲಿ ಜೀವಿಸಿ ದುಃಖಪಡುವುದಕ್ಕಿಂತ ಜಗತ್ತನ್ನು ಬಿಡುವುದೇ ಕ್ಷೇಮವೆಂಬ ನಿರ್ಧಾರಕ್ಕೆ ಬಂದಿದ್ದನು. ಅವನು ಬದುಕುವುದಾದರೆ ಯಾರಿಗೋಸ್ಕರ ಬದುಕಬೇಕು? ತಂದೆತಾಯಿಗಳೂ ಇರಲಿಲ್ಲ; ಬಂಧುಬಳಗದವರೂ ಇರಲಿಲ್ಲ. ಮಹಾಜನರೇ ಅವನ ಬಂಧು ಬಳಗದವರಾಗಿದ್ದರು. ಮಹಾಜನರ ಸೇವೆಗಾಗಿ ಬದುಕಬೇಕೆಂದು ಅವನು ಒಮ್ಮೊಮ್ಮೆ ಯೋಚಿಸುತ್ತಿದ್ದನು. ಆದರೆ ಆ ಸೇವೆಯ ಹಾದಿಯಲ್ಲಿ ಅದುವರೆಗೆ ಬಂದಿದ್ದ ವಿಘ್ನಗಳನ್ನು ನೆನೆದಾಗ ಅವರ ಸೇವೆಯೂ ಅವನಿಗೆ ಬೇಡವೆನಿಸುತ್ತಿತ್ತು. ದೇವರು ನಂಬಿದವರನ್ನು ಕೈಬಿಡುವುದಿಲ್ಲವೆಂಬುದು ಎಲ್ಲಾ ಧರ್ಮಗ್ರಂಥಗಳೂ ಸಾರಿರುವುದನ್ನು ಮೋಹನನು ಓದಿದ್ದನು. "ಆದರೆ ದೇವರು ನನ್ನನ್ನು ಏಕೆ ಕೈಬಿಟ್ಟಿದ್ದಾನೆ" ಎಂಬ ಪ್ರಶ್ನೆಯನ್ನು ಅವನು ಮನಸ್ಸಿನಲ್ಲಿ ಪದೇ ಪದೇ ಕೇಳುತ್ತಿದ್ದನು.

ಮೊಕದ್ದಮೆಯಲ್ಲಿ ಸರ್ಕಾರದ ಪರವಾಗಿ ಹಾಜರುಮಾಡಿದ ಸಾಕ್ಷಿಗಳ ವಿಚಾರಣೆಯಾದ ನಂತರ ಮ್ಯಾಜಿಸ್ಟ್ರೇಟರು ಮೋಹನನನ್ನೂ, ಮಲ್ಲಪ್ಪನನ್ನೂ ಸೆಷನ್ಸ್ ವಿಚಾರಣೆಗೆ ಗುರಿಪಡಿಸಿದರು. ಪೋಲಿಸಿನವರು ಕೋರ್ಟಿನಲ್ಲಿ ಸಾಕ್ಷಿಗಳ ಮೂಲಕ ಸುಳ್ಳಿನ ಸುರಿಮಳೆಯನ್ನೇ ಸುರಿಸಿದ್ದರು. ಮ್ಯಾಜಿಸ್ಟ್ರೇಟರ ತೀರ್ಪಿನಿಂದ ರಂಗನಾಥನಿಗೂ, ಕಲ್ಲಪ್ಪನಿಗೂ ಆದ ಸಂತೋಷಕ್ಕೆ ಪಾರವೆ ಇರಲಿಲ್ಲ. ಸುಳ್ಳು ಮೊಕದ್ದಮೆಯನ್ನು ಹೂಡುವ ಸಲುವಾಗಿ ಹೇರಳವಾಗಿ ಹಣವನ್ನು ಪಡೆದಿದ್ದ ಪೋಲಿಸ್ ಇನ್‌ಸ್ಪೆಕ್ಟರು ಜಗತ್ತನ್ನೇ ಜಯಿಸಿದವರಂತೆ ವರ್ತಿಸುತ್ತಿದ್ದರು. ಇನ್ನೂ ಹೆಚ್ಚು ಹಣವನ್ನು ಕೀಳುವ ಉದ್ದೇಶದಿಂದ ಮೋಹನನಿಗೆ ಮರಣದಂಡನೆಯಾಗುತ್ತದೆಯೆಂದು ಅವರು ಆಗಾಗ ರಂಗನಾಥನಿಗೂ, ಕಲ್ಲಪ್ಪನಿಗೂ ಹೇಳುತ್ತಿದ್ದರು. ಮೋಹನನ ಇಹಲೋಕದ ಯಾತ್ರೆ ಇಷ್ಟರಲ್ಲೇ ಮುಗಿಯುವುದೆಂದು ರಂಗನಾಥನೂ, ಕಲ್ಲಪ್ಪನೂ ಸಂತಸಗೊಂಡಿದ್ದರು.

ಎರಡು ತಿಂಗಳ ನಂತರ ಸೆಷನ್ಸ್ ವಿಚಾರಣೆ ಪ್ರಾರಂಭವಾಯಿತು. ವಿಶೇಷ ಕಾರಣಗಳ ದೆಸೆಯಿಂದ ಸೆಷನ್ಸ್ ಜಡ್ಜರು ವಿಚಾರಣೆಯನ್ನು ಪವಿತ್ರಪುರದಲ್ಲೇ ನಡೆಯಿಸುವುದೆಂದೂ ಗೊತ್ತಾಗಿದ್ದಿತು. ವಿಚಾರಣೆ ಹದಿನೈದು ದಿನಗಳ ಕಾಲ ಹಿಡಿಯಿತು. ಪೋಲಿಸಿನವರ ಪರ ಸಾಕ್ಷಿ ನುಡಿದವರೆಲ್ಲರೂ ಕೆಳಕೋರ್ಟಿನಲ್ಲಿ ಹೇಳಿದ್ದಂತೆ ಬಾಯಿ ತುಂಬಾ ಸುಳ್ಳು ಹೇಳಿದ್ದರು. ಆದರೆ ಮೋಹನನ ವಕೀಲರಾದ ಸೂರ್ಯನಾರಾಯಣ ರಾಯರು ಪಾಟಿಸವಾಲಿನಲ್ಲಿ ಆ ಸುಳ್ಳು ಸಾಕ್ಷಿಗಳ ಹೇಳಿಕೆಗಳಿಂದಲೇ ಕೆಲವು ಸತ್ಯಾಂಶಗಳು ಹೊರಬೀಳುವಂತೆ ಮಾಡಿದ್ದರು.

ಫಿರ್ಯಾದಿಯ ಪರ ಸಾಕ್ಷಿಗಳ ವಿಚಾರಣೆಯಾದನಂತರ ಅಪರಾಧಿಗಳ ಪರವಾಗಿ ಸಾಕ್ಷಿಗಳ ವಿಚಾರಣೆಯಾಗಬೇಕಿತ್ತು. ಆದರೆ ಫಿರ್ಯಾದಿಯ ಸಾಕ್ಷಿಗಳು ಹೇಳಿದ್ದನ್ನು ಕೇಳಿದ ಮೇಲೆ ನ್ಯಾಯಾಧೀಶ ಮನಸ್ಸಿನಲ್ಲಿ ಕೆಲವು ಸಂಶಯಗಳು ಉದ್ಭವಿಸಿದವು. ಪೊಲೀಸಿನವರು ನ್ಯಾಯಾಲಯಕ್ಕೆ ಕೊಟ್ಟ ಆಪಾದನೆಯ ಪಟ್ಟಿಯಲ್ಲಿ ಕೊಲ್ಲನ ಕೊಲೆಯಾದ ದಿನ ಮೋಹನನು ಗೊರಗೋಡಿಗೆ ಹೋಗಿದ್ದನೆಂದೂ, ಆ ದಿನ ಅವನು ಗೊರಗೋಡು ಮಲ್ಲಪ್ಪನ ಮನೆಯಲ್ಲಿದ್ದನೆಂದೂ ಅವನು ಮಲ್ಲಪ್ಪನ ಮನೆಯಲ್ಲಿದ್ದಾಗ ಮನೆಯ ಮುಂಭಾಗದಲ್ಲಿ ಕೊಲ್ಲನಿಗೂ ಮಲ್ಲಪ್ಪನಿಗೂ ಜಗಳವಾಯಿತೆಂದೂ, ಆಗ ಮೋಹನನ ಪ್ರೋತ್ಸಾಹದಿಂದ ಮಲ್ಲಪ್ಪನು ತನ್ನ ಒಂಟಿನಲ್ಲಿ ಕೇಪಿನ ಬಂದೂಕಿನಿಂದ ಕೊಲ್ಲನನ್ನು ಕೊಂದನೆಂದೂ ಹೇಳಲಾಗಿತ್ತು. ಬಸಪ್ಪನು ಮಲ್ಲಪ್ಪನ ನೆರೆಮನೆಯವನೆಂದು ಸಾಕ್ಷಿಗಳ ಹೇಳಿಕೆಯಿಂದ ವ್ಯಕ್ತವಾಗಿತ್ತು. ಮಲ್ಲಪ್ಪನ  ಮನೆಯಲ್ಲಿ ಮಲ್ಲಪ್ಪನಿಂದ ಕೋವಿಯನ್ನು ವಶಪಡಿಸಿಕೊಳ್ಳಲಾಯಿತೆಂದು ಪೊಲೀಸಿನವರು ತಯಾರುಮಾಡಿದ್ದ ಸುಳ್ಳು ಮಹಜರಿನಲ್ಲಿ ಬರೆಯಲಾಗಿತ್ತು. ಆ ಮಹಜರಿನಲ್ಲಿ ಬಸಪ್ಪನ ರುಜುವಿತ್ತು. ಫಿರ್ಯಾದಿಯ ಪರವಾಗಿ ಸಾಕ್ಷಿನುಡಿದವರಲ್ಲಿ ಕೆಲವರು ಕೊಲ್ಲನ ಕೊಲೆಯಾದ ಕಾಲದಲ್ಲಿ ಬಸಪ್ಪನು ಹಾಜರಿದ್ದನೆಂದು ಪಾಟಿಸವಾಲಿನಲ್ಲಿ ಹೇಳಿದ್ದರು. ಪೋಲಿಸಿನವರು ಬಸಪ್ಪನನ್ನು ತಮ್ಮ ಪರ ಸಾಕ್ಷಿಯಾಗಿ ವಿಚಾರಣೆ ಮಾಡಬೇಕಾಗಿತ್ತು. ಬಸಪ್ಪನು ಪುಕ್ಕಲು ಸ್ವಭಾವದವನಾಗಿದ್ದರಿಂದ ಅವನು ಕೇಸಿಗೆ ವಿರೋಧವಾಗಿ ಏನಾದರೂ ಹೇಳಿ ಕೇಸನ್ನು ಕೆಡಿಸಬಹುದೆಂದು ಹೆದರಿಕೆಯಿಂದ ಪೊಲೀಸಿನವರು ಸಾಕ್ಷಿ ಪಟ್ಟಿಯಲ್ಲಿ ಅವನ ಹೆಸರನ್ನು ನಮೂದಿಸಲಿಲ್ಲ. ಜೊತೆಗೆ ನ್ಯಾಯಾಲಯಕ್ಕೆ ಹಾಜರುಪಡಿಸಿದ ಬಂದೂಕಿಗೆ ಲೈಸನ್ಸ್ ಇರಲಿಲ್ಲ. ಮಲ್ಲಪ್ಪನು ಲೈಸನ್ಸ್ ಇಲ್ಲದ  ಕಳ್ಳಕೋವಿಯನ್ನು ಇಟ್ಟುಕೊಂಡಿದ್ದನೆಂದು ಪೊಲೀಸಿನವರು ಮೊಕದ್ದಮೆಯಲ್ಲಿ ಸಾಕ್ಷಿಗಳಿಂದ ಹೇಳಿಸಿದ್ದರು. ಆ ಕೋವಿ ಬಸಪ್ಪನಿಗೆ ಸೇರಿದ ಕೋವಿಯೆಂದು ಸೂಚಿಸುವ ರೀತಿಯಲ್ಲಿ ಸಾಕ್ಷಿಗಳ ಪಾಟಿಸವಾಲು ಕಾಲದಲ್ಲಿ ಸೂರ್ಯನಾರಾಯಣರಾಯರು ಪ್ರಶ್ನೆಗಳನ್ನು ಕೇಳುತ್ತಿದ್ದರು. ಆದ್ದರಿಂದಲೇ ನ್ಯಾಯಾಧೀಶರಿಗೆ ಕೆಲವು ಅನುಮಾನಗಳುಂಟಾಗಿದ್ದವು. ಅನುಮಾನ ಪರಿಹಾರಕ್ಕಾಗಿ ಅವರು ಬಸಪ್ಪನನ್ನು ನ್ಯಾಯಾಲಯದ ಪರವಾಗಿ ಸಾಕ್ಷಿಯನ್ನಾಗಿ ವಿಚಾರಣೆ ಮಾಡಬೇಕೆಂದು ತೀರ್ಮಾನಿಸಿ, ಮೊಕದ್ದಮೆಯನ್ನು ಮುಂದಕ್ಕೆ ಹಾಕಿ, ಬಸಪ್ಪನು ವಿಚಾರಣೆಗೋಸ್ಕರ ತನ್ನ ಬಂದೂಕ ಲೈಸನ್ಸ್ ಸಮೇತ ನ್ಯಾಯಾಲಯಕ್ಕೆ ಬರಬೇಕೆಂದು ಅವನಿಗೆ ಸಮನ್ಸ್ ಕಳುಹಿಸಿದರು.

ನ್ಯಾಯಾಲಯದಿಂದ ಬಸಪ್ಪನಿಗೆ ಸಮನ್ಸ್ ಹೊರಟೊಡನೆ ಪೊಲೀಸ್ ಇನ್ಸ್‌ಪೆಕ್ಟರಿಗೆ ಗಾಬರಿಯಾಯಿತು. ಬಸಪ್ಪನು ಅರ್ಧ ಸತ್ತವನಂತಾಗಿದ್ದನು. ಅವನು ನಿಜವಾದ ಕೊಲೆಪಾತಕಿಯಾದುದ್ದರಿಂದ ಅವನ ಆತ್ಮಸಾಕ್ಷಿ ಪ್ರತಿನಿಮಿಷವೂ ಅವನನ್ನೂ ಚುಚ್ಚುತ್ತಿತ್ತು. ಬಸಪ್ಪನು ನ್ಯಾಯಾಧೀಶರ ಕೈಯಲ್ಲಿ  ಸಿಕ್ಕಿ ಸತ್ಯ ಹೊರಬಿದ್ದರೆ, ತಾವು ಗಂಡಾಂತರದಲ್ಲಿ ಬೀಳುತ್ತೇವೆಂಬ ಭಯ ಇನ್‌ಸ್ಪೆಕ್ಟರನ್ನೂ ಕಲ್ಲಪ್ಪನನ್ನೂ ಭಾಧಿಸುತ್ತಿತ್ತು. ಅವರಿಬ್ಬರೂ ಸೇರಿ ನಾನಾ ಉಪಾಯಗಳನ್ನು ಯೋಚಿಸಿದರು. ಬಸಪ್ಪನು ನ್ಯಾಯಾಲಯಕ್ಕೆ

ಹೋಗದಂತೆ ಮಾಡುವುದೇ ಉತ್ತಮ ಮಾರ್ಗವೆಂದು ಅವರಿಬ್ಬರೂ ನಿರ್ಧರಿಸಿ ನ್ಯಾಯಾಲಯದಿಂದ ಬಂದ ಸಮನ್ಸಿನಲ್ಲಿ ಬಸಪ್ಪನು ಊರಲಿಲ್ಲವೆಂದು ಸುಳ್ಳು ಷರಾ ಬರೆಯಿಸಿದರು. ಹೀಯರಿಂಗು ದಿನ ಕೇಸನ್ನು ಕೂಗಿಸಿದಾಗ ಬಸಪ್ಪನು ಹಾಜರಿರಲಿಲ್ಲ. ವಾಪಸ್ಸು ಬಂದ ಸಮನ್ಸಿನಲ್ಲಿ ಬಸಪ್ಪನು ಊರಲಿಲ್ಲವೆಂದು ಷರಾ ಬರೆಯಲಾಗಿತ್ತು. ಸೂರ್ಯನಾರಾಯಣರಾಯರು, ಬಸಪ್ಪನು ಊರಿನಲ್ಲೇ ಇದ್ದಾನೆಂದೂ, ಪೊಲೀಸಿನವರು ಸುಳ್ಳು ಷರಾ ಬರೆಯಿಸಿದ್ದಾರೆಂದೂ ವಾದಿಸಿದರು. ನ್ಯಾಯಾಧೀಶರು ಕೋಪಗೊಂಡು ಬಸಪ್ಪನ ದಸ್ತಗಿರಿಗಾಗಿ ವಾರಂಟನ್ನು ಹೊರಡಿಸಿದರು. ವಾರಂಟನ್ನು ಜಾರಿ ಮಾಡತಕ್ಕ ಜವಾಬ್ದಾರಿಯನ್ನು ಸಬ್‌ಇನ್‌ಸ್ಪೆಕ್ಟರಿಗೆ ವಹಿಸಿ, ಅವರು ಬಸಪ್ಪನನ್ನು ಹಿಡಿದು ತರದಿದ್ದರೆ ಬೇರೆ ತಾಲ್ಲೂಕಿನಿಂದ ಪೋಲಿಸಿನವರನ್ನು ಕರೆಯಿಸಿ ಅವರಿಂದ ಬಸಪ್ಪನನ್ನು ಹಿಡಿಯಿಸುವುದಾಗಿಯೂ, ಆ ರೀತಿಯಾದಲ್ಲಿ ಮುಂದಿನ ಪರಿಣಾಮವನ್ನು ಪವಿತ್ರಪುರದ ಪೊಲೀಸಿನವರು ಅನುಭವಿಸಿತಕ್ಕ ಪ್ರಸಂಗ ಬರಬಹುದಾಗಿಯೂ ಎಚ್ಚರಿಸಿದರು.

ಪೊಲೀಸಿನವರು ಇಕ್ಕಟ್ಟಿನ ಪ್ರಸಂಗದಲ್ಲಿ ಸಿಲುಕಿದ್ದರು. ಕಲ್ಲಪ್ಪನು ಕಂಗಾಲಾದನು. ಕಲ್ಲಪ್ಪನ ಬೇಳೆ ನ್ಯಾಯಾಧೀಶರ ಬಳಿ ಬೇಯುವ ಹಾಗಿದ್ದರೆ ಅವರನ್ನು ತನ್ನ ಬುಟ್ಟಿಗೆ ಹಾಕಿಕೊಳ್ಳುತ್ತಿದ್ದನು. ಆದರೆ ಅದು ಸಾಧ್ಯವಾಗುವಂತಿರಲಿಲ್ಲ. ನ್ಯಾಯಾಧೀಶರ ಸ್ನೇಹವನ್ನು ಸಂಪಾದಿಸುವ ಪ್ರಯತ್ನವನ್ನೇನೋ ಅವನು ಮಾಡಿದ್ದನು. ಆದರೆ ನ್ಯಾಯಾಧೀಶರ ಸ್ನೇಹ ಲಭಿಸಲಿಲ್ಲ. ಸೆಷನ್ಸ್ ವಿಚಾರಣೆ ಪ್ರಾರಂಭವಾದ ನಂತರ ನ್ಯಾಯಾಧೀಶರು ಒಂದು ಭಾನುವಾರ ಪವಿತ್ರಪುರದ ಕ್ಲಬ್ಬಿಗೆ ಹೋಗಿದ್ದರು. ಈಚೆಗೆ ರಂಗನಾಥನೂ, ಕಲ್ಲಪ್ಪನೂ ಕ್ಲಬ್ಬಿಗೆ ಹೋಗುತ್ತಿದ್ದರು. ಆ ದಿನ ಅವರಿಬ್ಬರೂ ಕ್ಲಬ್ಬಿನಲ್ಲಿದ್ದರು. ಕ್ಲಬ್ಬಿನಲ್ಲದ್ದ ಲಂಚಕೋರ ಇನ್‌ಸ್ಪೆಕ್ಟರು ರಂಗನಾಥನನ್ನೂ, ಕಲ್ಲಪ್ಪನನ್ನೂ ನ್ಯಾಯಾಧೀಶರಿಗೆ ಪರಿಚಯ ಮಾಡಿಕೊಟ್ಟನು. ಪರಿಚಯ ಮಾಡಿಕೊಂಡಾಗ ಅವರಿಬ್ಬರೂ ಪವಿತ್ರಪುರ ತಾಲ್ಲೂಕಿನ ಹೆಗ್ಗಂಬಗಳಂತೆ ಇರುವ ನಾಯಕರೆಂದು ಹೇಳಿದರು. ಆ ಪರಿಚಯವನ್ನುಪಯೋಗಿಸಿ ಕೊಂಡು ಕಲ್ಲಪ್ಪನು ನ್ಯಾಯಾಧೀಶರೊಡನೆ ಮಾತನಾಡುತ್ತಿದ್ದಾಗ "ಸಾಹೇಬ್ರೀಗೆ ಪ್ರವಾಸಿ ಮಂದಿರ ಅಷ್ಟೊಂದು ಅನುಕೂಲ ಇಲ್ಲ ಅಂತ ಕಾಣ್ತದೆ. ನಮ್ಮ ಫ್ರೆಂಡು ರಂಗನಾಥಪ್ಪನವರ ಗೆಸ್ಟ್ ಹೌಸ್ ಬಹಳ ಕನ್ವೀನಿಯೆಂಟ್ ಆಗಿದೆ. ಮಿನಿಷ್ಟ್ರು, ದೊಡ್ಡ ದೊಡ್ಡ ಆಫೀಸರು ಅಲ್ಲೇ ಬಂದು ಇರ್ತಾರೆ. ಸಾಹೇಬ್ರೂ ಅಲ್ಲೇ ಇರ್ಬಹುದು ಎಲ್ಲಾ ಏರ್ಪಾಡು ಮಾಡ್ತೀವಿ. ಸಾಹೇಬರು ಸಂಕೋಚಪಡ್ಬೇಕಾಗಿಲ್ಲ" ಎಂದು ಹೇಳಿದನು. ನ್ಯಾಯಾಧೀಶರು ತಮಗೆ ಯಾರ ಆತಿಥ್ಯ ಬೇಕಾಗಿಲ್ಲವೆಂದು ಸ್ವಲ್ಪ ಕಠಿಣವಾಗಿ ಉತ್ತರ ಕೊಟ್ಟರು. ನ್ಯಾಯಾಧೀಶರು ಕುಡುಕರೋ ಅಥವಾ ಲಂಚಕೋರರೋ ಆಗಿದ್ದರೆ ಕಲ್ಲಪ್ಪ, ರಂಗನಾಥನೂ ಅವರನ್ನು ಸುಲಭವಾಗಿ ವಶಪಡಿಸಿಕೊಳ್ಳಲು ಸಾಧ್ಯವಾಗುತ್ತಿತ್ತು. ಆದರೆ ನ್ಯಾಯಾಧೀಶರು ನಿರ್ಮಲ ಜೀವನದವರಾದ್ದರಿಂದ ಅವರು ಆ ದುಷ್ಟರ ಬಲೆಗೆ ಬೀಳಲಿಲ್ಲ.

ನ್ಯಾಯಾಧೀಶರ ಕಟ್ಟಾಜ್ಞೆಯನ್ನು ಕೇಳಿದ ಇನ್‌ಸ್ಪೆಕ್ಟರಿಗೂ ಸಬ್‌ಇನ್‌ಸ್ಪೆಕ್ಟರಿಗೂ ಬೆಂಕಿಯೊಡನೆ ಸರಸವಾಡುವ ಧೈರ್ಯವಿರಲಿಲ್ಲ. ಆದ್ದರಿಂದ ಅವರಿಬ್ಬರೂ ಬಸಪ್ಪನನ್ನು

ದಸ್ತಗಿರಿ ಮಾಡುವುದೆಂದು ತೀರ್ಮಾನ ಮಾಡಿ, ಅವನನ್ನು ದಸ್ತಗಿರಿ ಮಾಡಿದರು. ದಸ್ತಗಿರಿ ಮಾಡಿದ ನಂತರ ಪೋಲಿಸ್ ಇನ್‌ಸ್ಪೆಕ್ಟರು ಬಸಪ್ಪನಿಗೆ ಎರಡು ಘಂಟೆಗಳ ಕಾಲ ಕಂಠಪಾಠ ಮಾಡಿಸಿ, ನ್ಯಾಯಾಲಯದಲ್ಲಿ ಯಾವ ರೀತಿ ಸಾಕ್ಷಿ ನುಡಿಯಬೇಕೆಂಬುದನ್ನು ಅವನಿಗೆ ವಿವರವಾಗಿ ಹೇಳಿಕೊಟ್ಟರು. ನ್ಯಾಯಾಧೀಶರು ಬಂದೂಕ್ ಲೈಸನ್ಸ್ ವಿಚಾರವನ್ನು ಕೇಳಿದರೆ ಅದು ಕಳೆದ ವರ್ಷ ತನ್ನ ಮನೆಗೆ ಬೆಂಕಿ ಬಿದ್ದಾಗ ಸುಟ್ಟುಹೋಯಿತೆಂದು ಹೇಳಬೇಕೆಂದು ತಿಳಿಸಿದ್ದರು.

ಹಿಯರಿಂಗಿನ ದಿನ ಹನ್ನೊಂದು ಘಂಟೆಗೆ ಸರಿಯಾಗಿ ಪೋಲಿಸಿನವರು ಬಸಪ್ಪನನ್ನು ನ್ಯಾಯಾಧೀಶ ಸಮ್ಮುಖದಲ್ಲಿ ಹಾಜರು ಮಾಡಿದರು. ನ್ಯಾಯಧೀಶರೇ ಅವನನ್ನು ಪ್ರಶ್ನಿಸಲಾರಂಭಿಸಿದರು. ನ್ಯಾಯಾಧೀಶರ ಉರಿಮುಖವನ್ನು ನೋಡಿದೊಡನೆ ಬಸಪ್ಪನು ಭಯದಿಂದ ನಡುಗಿದನು ಜೊತೆಗೆ ಆತ್ಮಸಾಕ್ಷಿ ಅವನನ್ನು ಚುಚ್ಚುತ್ತಿತ್ತು. ಕಂಠಪಾಠ ಮಾಡಿದ್ದೆಲ್ಲವೂ ಭಯದಿಂದ ಅಳಿಸಿ ಹೋಗುವಂತಿತ್ತು. ನ್ಯಾಯಾಧೀಶರು ಕೇಳಿದ ಪ್ರಶ್ನೆಗಳೂ, ಆ ಪ್ರಶ್ನೆಗಳಿಗೆ ಬಸಪ್ಪನು ಹೇಳಿದ ಉತ್ತರಗಳೂ ಈ ಕೆಳಗೆ ಕಂಡಂತೆ ಇದ್ದವು.

ಪ್ರಶ್ನೆ : ನಿನ್ನ ಬಂದೂಕು ಲೈಸನ್ಸ್ ತಂದಿದ್ದೀಯಾ?

ಉತ್ತರ : ಇಲ್ಲ ; ತರ್ಲ

ಪ್ರಶ್ನೆ : ಯಾಕೆ ತರಲಿಲ್ಲ?

ಉತ್ತರ : ಹೋದ ವರುಷ ಗದ್ದೆ ಕುಯ್ಲು ಸಮಯ, ನಮ್ಮನೀಗೆ ಬೆಂಕಿ ಬಿದ್ದು ಲೈಸಾನು ಬೆಂಕೀಲಿ ಸುಟ್ಟೋತು.

ಪ್ರಶ್ನೆ : ಸುಟ್ಟ ಹೋದ ವಿಚಾರವನ್ನು ಪೋಲಿಸಿನವರಿಗಾಗಲೀ, ಅಮಲ್ದಾರರಿಗಾಗಲೀ ರಿಪೋರ್ಟ್ ಮಾಡಿದ್ದೀಯಾ?

ಉತ್ತರ : ಇ.........ಇ.........ಲ್ಲ

ಪ್ರಶ್ನೆ : ಯಾಕೆ ರಿಪೋರ್ಟ್ ಮಾಡಲಿಲ್ಲ?

ಉತ್ತರ : ನಂಗೊತ್ತಾಗ್ಲ.

ಪ್ರಶ್ನೆ : ಈ ವರ್ಷ ಹೊಸ್ತಾಗಿ ಲೈಸನ್ಸ್ ತೆಗೆದುಕೊಂಡಿದ್ದೀಯಾ? ಅಥವಾ ಲೈಸನ್ಸ್ ಇಲ್ಲದೆ ಅಕ್ರಮ ಬಂದೂಕನ್ನು ಇಟ್ಟುಕೊಂಡಿದ್ದೀಯಾ? ತಿಳಿಸು.

ಉತ್ತರ : ಇ......ಇ......ಇ.....ಲ್ಲ............ ಹೌದು.

ಪ್ರಶ್ನೆ : ಏನಿಲ್ಲ; ಏನು ಹೌದು ; ಸರಿಯಾಗಿ ವದರು.

ಉತ್ತರ : ಹೊಸ ಲೈಸಾನ್ ಮಾಡ್ಸೀನಿ.

ಪ್ರಶ್ನೆ : ಹಾಗಾದರೆ ಆ ಲೈಸನ್ಸ್ ಏನಾಯಿತು?

ಉತ್ತರ : ಅದೇ ಸುಟ್ಟೋದ್ದು ಬುದ್ಧೀ.

ಪ್ರಶ್ನೆ : ಏ, ನಿನಗೆ ತಲೆ ನೆಟ್ಟಗಿದೆಯೋ ಇಲ್ಲವೋ? ಒಮ್ಮೆ ಹೇಳಿದೆ. ಲೈಸನ್ಸ್ ಸುಟ್ಟು ಹೋದ ಮೇಲೆ ಹೊಸ ಲೈಸನ್ಸ್ ತೆಗೆದುಕೊಂಡೀನಿ ಅಂತ. ಈಗ ಹೇಳ್ತಿಯ.

ಹೊಸ ಲೈಸನ್ಸ್ ಸುಟ್ಟು ಹೋಯಿತು ಅಂತ. ಇದರಲ್ಲಿ ಯಾವುದು ನಿಜ ; ಯಾವುದು ಸುಳ್ಳು? ನೀ ಎಲ್ಲಿದ್ದೀಯ ಗೊತ್ತೇ? ಸುಳ್ಳು ಹೇಳಿದರೆ ಏನಾಗುತ್ತದೆಯೆಂಬುದನ್ನು ನೀನು ತಿಳಿದು ಕೊಂಡಿದ್ದೀಯಾ?

ಉತ್ತರ : ತಪ್ಪಾಯಿತು ಸ್ವಾಮಿ, ಲೈಸಾನು ಸುಟ್ಟು ಹೋದ್ದು ಈ ವರ್ಸ

ಪ್ರಶ್ನೆ : ಹೋಗಲಿ ಬಿಡು. ಬಂದೂಕು ನಿನ್ನ ಹತ್ತಿರವೇ ಇದೆಯಲ್ಲವೆ?

ಉತ್ತರ : ಹೌದು, ನನ್ನ ಹತ್ರ ಅದೆ.

ಪ್ರಶ್ನೆ : ನಾಳೆ ಅದನ್ನು ಕೋರ್ಟಿಗೆ ಹಾಜರ್ಮಾಡುತ್ತೀಯಾ?

ಉತ್ತರ : ಗಾಬ್ರೀಲಿ ಮರ್ತದ್ದೆ ಬುದ್ದೀ. ಮಳಗಾಲ್ದಾಗೆ ನನ್ನ ತಮ್ಮ, ಅವನ ಹೆಣ್ತಿ ತವರು ಮನೀಗೆ ಕಲ್ಕೋಡಿಗೆ ಹೋಗಾಗ. ಕೋವಿಚಾಪು ರಿಪೀರಿ ಮಾಡೋಕೆ ಅಂತ ಕೋವಿನ ಕಲ್ಕೋಡಾಗೆ ಒಬ್ಬ ಕನ್ನಡಜಿಲ್ಲಿ ಆಚಾರಿಗೆ ಕೊಟ್ಟಂದಾನೆ.

ಪ್ರಶ್ನೆ : ಹೋಗ್ಲಿ ಬಿಡು ನಿನ್ನ ಲೈಸನ್ಸಾಗೆ ನಿನ್ನ ಕೋವಿಯ ಚಹರೆ ನಮೂದಾಗಿತ್ತಲ್ಲವೆ?

ಉತ್ತರ : ಬುದ್ಧೀ. ಉದ್ದ, ಗಿಡ್ಡಯೆಲ್ಲಾ ಲೈಸಾನಾಗೆ ಬರದಿತ್ತು. ಸುಟ್ಹೋಗ್ಬಿಡ್ತು ಬುದ್ಧೀ

ನ್ಯಾಯಾಧೀಶರು ಬಸಪ್ಪನ ವಿಚಾರಣೆಯನ್ನು ಪ್ರಾರಂಭ ಮಾಡುವ ಪೂರ್ವ, ನ್ಯಾಯಾಲಯದ ಗುಮಾಸ್ತರನ್ನು ಕರೆದು, ಪವಿತ್ರಪುರದ ತಾಲ್ಲೂಕ್ ಕಛೇರಿಯಲ್ಲಿರುವ ಬಂದೂಕು ಲೈಸನ್ಸ್ ರಿಜಿಸ್ಟರನ್ನು ಹಾಜರ್ಪಡಿಸಬೇಕೆಂದು ಅಮಲ್ದಾರರಿಗೆ ಸಮನ್ಸ್ ಕಳುಹಿಸಬೇಕೆಂದು ಆಜ್ಞಾಪಿಸಿದರು. ನ್ಯಾಯಾದೀಶರ ಆಜ್ಞೆಯ ಪ್ರಕಾರ ಅಮಲ್ದಾರರಿಗೆ ಸಮನ್ಸ್ ಜಾರಿ ಆಗಿ ಅವರು ಲೈಸನ್ಸ್ ರಿಜಿಸ್ಟರ್ ಸಮೇತ ಕೋರ್ಟಿನಲ್ಲಿ ಹಾಜರಿದ್ದರು. ಅಮಲ್ದಾರರು ಏತಕ್ಕೆ ಕೊರ್ಟಿಗೆ ಬಂದಿದ್ದರೆಂಬುದು ಉಳಿದವರಿಗೆ ಗೊತ್ತಾಗಿರಲಿಲ್ಲ.

ಪ್ರಶ್ನೆ : ಬಸಪ್ಪಾ, ಪೋಲಿಸಿನವರು ಕೋವಿಯನ್ನು ವಶಪಡಿಸಿಕೊಂಡಾಗ ನೀನು ಹಾಜರಿದ್ದೆಯಲ್ಲವೇ? ಅಂದರೆ ಮಹಜರ್ ಆದಾಗ ನೀ ಹಾಜರಿದ್ದೆಯಲ್ಲವೇ?

ಉತ್ತರ : ಹೌದು.

ಪ್ರಶ್ನೆ : ಇದೇ ಅಲ್ಲವೇ ನಿನ್ನ ರುಜು?

ಉತ್ತರ : ಹೌದು.

ಪ್ರಶ್ನೆ : ಮಹಜರು ಬರೆದಿದ್ದು ಎಲ್ಲಿ?

ಉತ್ತರ : ನಮ್ಮನೀಲಿ

ಪ್ರಶ್ನೆ : ಮಲ್ಲಪ್ಪನ ದಸ್ತಗಿರಿ ಮಾಡಿ ಎಷ್ಟು ದಿನಗಳನಂತರ ಮಹಜರ್ ಬರೆದಿದ್ದು?

ಉತ್ತರ : ಮಲ್ಲಪ್ಪ ಜೈಲೀಗೆ ಹೋದ ಮ್ಯಾಲೆ ಯಲ್ಡು ಮೂರು ದಿನ ಆದ ಮ್ಯಾಲೆ ಮಾಜರು ಮಾಡದ್ದು.

ಪ್ರಶ್ನೆ : ಮಹಜರು ಬರೆದಾಗ ಯಾರ್ಯಾರಿದ್ದರು?

ಉತ್ತರ : ನಾನು, ನನ್ನ ಭಾವ, ಇನೇಸ್‌ಭಟ್ಟರು ಮತ್ತೆ ಅದರಲ್ಲಿ ರುಜು ಹಾಕ್ದೋರು ಪಂಚಾಯತ್ದಾರು.

ಪ್ರಶ್ನೆ : ನಿನ್ನ ಭಾವ ಯಾರು?

ಉತ್ತರ : ಶೀತೂರು ಕಲ್ಲಪ್ಪನೋರು. ಅವರ ಮಂತ್ರಿಗೋಳಿಗೆಲ್ಲ ಗೆಣೆಗಾರ್ರು. ಇವರ ಇಚಾರ ತಮ್ಗೂ ಗೊತ್ತಿರ್ಬೇಕು.

ಪ್ರಶ್ನೆ : ಅವರ್ಯಾಕೆ ಬಂದಿದ್ರು?

ಉತ್ತರ : ಅವರು ಇನೇಸ್‌ಭಟ್ಟರ ಜೊತೀಗೆ ಬಂದಿದ್ರು. ಅವರೂ, ಇನೇಸ್‌ಭಟ್ರೂ ಗೆಣೆಗಾರ್ರು.

ಪ್ರಶ್ನೆ : ಹಾಗಾದರೆ ಇನ್‌ಸ್ಪೆಕ್ಟರು ಮಲ್ಲಪ್ಪನ ಮನೆಗೆ ಹೋಗಿರಲಿಲ್ಲ. ಅಲ್ಲವೆ?

ಉತ್ತರ : ಇಲ್ಲ.

ಪ್ರಶ್ನೆ : ನಿಮ್ಮ ಮನೆಯೂ, ಮಲ್ಲಪ್ಪನ ಮನೆಯೂ, ಅಕ್ಕಪಕ್ಕದಲ್ಲಿವೆಯಲ್ಲವೇ?

ಪ್ರಶ್ನೆ : ಯಲ್ಡು ಮನೆಯೂ ವುಂದೇ ಮಾರು ದೂರ್ದಾಗೆ ಅವೆ.

ಉತ್ತರ : ಬಂದೂಕನ್ನು ಯಾರು ಹಾಜರ್ಮಾಡಿದರು?

ಉತ್ತರ : ಮಲ್ಲಪ್ಪ

ಪ್ರಶ್ನೆ : ಬಂದೂಕು ಯಾರದ್ದು?

ಉತ್ತರ : ಅವನ್ದೆ, ಮಲ್ಲಪ್ಪಂದು.

ಪ್ರಶ್ನೆ : ಮಲ್ಲಪ್ಪನಿಗೆ ಲೈಸನ್ಸ್ ಇದೆಯೇನು?

ಉತ್ತರ : ಲೈಸಾನು ಇಲ್ಲ ಅದು ಕಳ್ಳಕೋವಿ ಬುದ್ಧೀ

ಪ್ರಶ್ನೆ : ಕಳ್ಳ ಕೋವಿ ಆಗಲಿ. ಅದನ್ನ ಎಲ್ಲಿ ಹಾಜರ್ಮಾಡಿದ್ದ?

ಉತ್ತರ : ನಮ್ಮನೇಲಿ ಹಾಜರ್ಮಾಡಿದ್ದ,

ಪ್ರಶ್ನೆ : ಅವನ್ಯಾಕೆ ನಿಮ್ಮನೇಕೆ ಬಂದೂಕು ತಂದಿದ್ದ?

ಉತ್ತರ : ಇನೇಸ್‌ಭಟ್ಟರು ಒಬ್ಬ ಪೊಲೀಸ್ನವನ್ನ ಮಲ್ಲಪ್ಪನ ಮನೀಗೆ ಕಳಿಸಿ ಮಲ್ಲಪ್ಪನ್ನ ಕರಕುಂಡು, ಕೋವಿ ತರಬೇಕು ಅಂತ ಹೇಳಿದ್ರು, ಅವ ಮಲ್ಲಪ್ಪನ್ನ ಕರಕುಂಡು, ಕೋವಿ ತಗುಂಡು ಬಂದ.

ಪ್ರಶ್ನೆ : ಇನ್‌ಸ್ಪೆಕ್ಟರ ಜೊತೆಯಲ್ಲಿ ಪವಿತ್ರಪುರದಿಂದ ಯಾರ್ಯಾರು ಬಂದಿದ್ರು

ಉತ್ತರ : ಇನ್‌ಸ್ಪೆಕ್ಟರು, ನಮ್ಮ ಭಾವ, ಯಲ್ಡು ಜನ ಪೊಲೀಸ್ನೋರು ಬಂದಿದ್ರು.

ಪ್ರಶ್ನೆ : ಹಾಗಾದರೆ ಮಲ್ಲಪ್ಪನನ್ನು ಇನ್‌ಸ್ಪೆಕ್ಟ್ರು ಕರೆದುಕೊಂಡು ಬರಲಿಲ್ಲ?

ಉತ್ತರ : ಮಲ್ಲಪ್ಪ ಮನೇಲೇ ಇದ್ದ.

ಪ್ರಶ್ನೆ : ಮಹಜರ್ ಮಾಡಿದಾಗ ಮಲ್ಲಪ್ಪ ಜೈಲಾಗೆ ಇದ್ದ ಅಲ್ಲವೆ?

ಉತ್ತರ : ನೀನು ರುಜುಮಾಡಿದ ಮಹಜರಿನಲ್ಲಿ ಇನ್‌ಸ್ಪೆಕ್ಟರು ಮಲ್ಲಪ್ಪನನ್ನು ಬಂದೀಖಾನೆಯಿಂದ ಗೊರಗೋಡಿಗೆ ಕರೆದುಕೊಂಡು ಬಂದಿದ್ದರೆಂದೂ, ಮಲ್ಲಪ್ಪನು ತನ್ನ ಮನೆಯಲ್ಲಿದ್ದ ಬಂದೂಕನ್ನು ಇನ್‌ಸ್ಪೆಕ್ಟರಿಗೆ ಕೊಟ್ಟನೆಂದೂ, ಬರೆದಿದೆಯಲ್ಲವೆ?

ಉತ್ತರ : ಇರ್ಬೇದು.

ನ್ಯಾಯಾಧೀಶರು ಸಾಕ್ಷಿಗಳ ವೇದಿಕೆಯಿಂದ ಬಸಪ್ಪನನ್ನು ಇಳಿಸಿ, ಒಂದು ಭೂತಗನ್ನಡಿಯನ್ನೂ, ಕೋರ್ಟಿನಲ್ಲಿದ್ದ ಬಂದೂಕನ್ನೂ, ತಮ್ಮ ಬಳಿಗೆ ತರಿಸಿಕೊಂಡರು. ಅನಂತರ ಅಮಲ್ದಾರರನ್ನು ಸಾಕ್ಷಿಗಳ ವೇದಿಕೆಗೆ ಕರೆಯಿಸಿ, ಬಂದೂಕು ಲೈಸನ್ಸ್‌ಗಳ ರಿಜಿಸ್ಟರಿನಲ್ಲಿ ಬಸಪ್ಪನ ಲೈಸನ್ಸ್ ವಿಚಾರ ನಮೂದಾಗಿರುವ ಪುಟವನ್ನು ತೋರಿಸಬೇಕೆಂದು ಕೇಳಿದರು. ಅಮಲ್ದಾರರು ಸಂಬಂಧಪಟ್ಟ ಹಾಳೆಯನ್ನು ತೋರಿಸಿದರು. ಅಮಲ್ದಾರರ ಹೇಳಿಕೆಯನ್ನು ಬರೆದುಕೊಂಡು, ರಿಜಿಸ್ಟರನ್ನೂ, ಸಂಬಂಧಪಟ್ಟ ಹಾಳೆಯನ್ನು ದಾಖಲೆ ಮಾಡಿಕೊಂಡು ಬಸಪ್ಪನ ವಿಚಾರಣೆಯನ್ನು ಮುಂದುವರಿಸಿದರು.

ಪ್ರಶ್ನೆ : ಬಸಪ್ಪಾ. ನಿನ್ನ ತಂದೆ ಹೆಸರೇನು?

ಉತ್ತರ : ಆಗಾವ್ನೆ ಹೇಳಿದ್ನಲ್ಲ. ವಾಸಪ್ಪ ಅಂತ.

ಪ್ರಶ್ನೆ : ನಿನ್ನ ಬಂದೂಕಿನ ಉದ್ದ ಐದು ಅಡಿ ಎರಡು ಅಂಗುಲ ಅದಕ್ಕೆ ಮೂರು ಹಿತ್ತಾಳೆ ಕಟ್ಟುಗಳಿವೆ. ಅದರ ಚಾಪಿನ ಮೇಲೆ ಗೊ।ವಾ। ಅಂತ ಎರಡು ಅಕ್ಷರ ಕೊರೆದಿವೆ. ಅಲ್ಲವೇ?

ಉತ್ತರ : ಇರ್ಬೇಕು ನಂಗೆ ನೆಂಪಿಲ್ಲ.

ಪ್ರಶ್ನೆ : ಬಸಪ್ಪಾ. ಈ ಭೂತಗನ್ನಡಿಯಲ್ಲಿ ನನ್ನ ಮುಂದೆ ಇರುವ ಬಂದೂಕಿನ ಚಾಪನ್ನು ನೋಡು. ಗೊ।ವಾ।ಅಂತ ಎರಡು ಅಕ್ಷರಗಳು ಕಾಣುತ್ತವೆ. ಅಲ್ಲವೇ? ಸರಿಯಾಗಿ ನೋಡು.

ಉತ್ತರ : ನನ್ನ ದೃಷ್ಟಿ ಸ್ವಲ್ಪ ಮಂದ. ನಂಗೆ ಕಾಣೂದಿಲ್ಲ.

ಪ್ರಶ್ನೆ : ನಿನಗೆ ದೃಷ್ಟಿ ಬರುವ ಹಾಗೆ ಮಾಡ್ತೀನಿ. ನೋಡು. ನನ್ನ ಮುಂದೆ ಇರುವ ಬಂದೂಕು ನಿನ್ನದು ಎಂದು ಹೇಳಲು ಸಾಕಾದಷ್ಟು ರುಜುವಾತು. ಇದೆ ಅದರ ಚಾಪಿನಲ್ಲಿರುವ ವಿಳಾಸ ನಿನ್ನ ತಂದೆಯ ವಿಳಾಸ. ಗೊ।ವಾ। ಎಂದರೆ ಗೊರಗೋಡು ವಾಸಪ್ಪ ಎಂದು ಅರ್ಥ. ಇದಕ್ಕೆ ನಿನ್ನ ಜವಾಬೇನು?

ಉತ್ತರ : (ಬಸಪ್ಪನು ಬೆದರಿ ನಡುಗುತ್ತಾ) ನಂಗುಂದೂ ಗೊತ್ತಿಲ್ಲ. ಯಲ್ಲಾ ನಂಭಾವಗೇ ಗೊತ್ತು.

ಪ್ರಶ್ನೆ : ಅಪರಾಧಿ ಮಲ್ಲಪ್ಪ ಬಂದೂಕು ಹಾರಿಸಿದಾಗ ನೀನು ಹಾಜರಿದ್ದಿಯೋ?

ಉತ್ತರ : ಇಲ್ಲ ಆಗಾವ ನಾ ಮನೇಲಿ ಇರ್ಲ. ಆಮ್ಯಾಲೆ ನಮ್ಮನೇಲಿ ಅದು ಹೇಳ್ತು, ಮಲ್ಲಪ್ಪ ಮತ್ತೆ ಮೋಹನ ಸೇರ್ಕುಂಡು ಕೊಲ್ಲನ್ನ ಕೋವೀಲಿ ಹೊಡ್ದ್ರು ಅಂತ.

ಪ್ರಶ್ನೆ : ಕೊಲ್ಲನ ಕೊಲೆಯಾದ ದಿವಸ ನೀನು ಗೊರಗೋಡಿನಲ್ಲಿ ಇದ್ದೆ ಅಲ್ಲವೆ?

ಉತ್ತರ : ಇ........ಇ........ಇಲ್ಲ. ನಾ ಶೀತೂರಿಗೆ ಹೋಗಿದ್ದೆ.

ಪ್ರಶ್ನೆ : ನೀನು ಕೊಲ್ಲ. ಸತ್ತದ್ದನ್ನೂ ನೋಡಲಿಲ್ಲ; ಅವನ ಹೆಣಾನೂ ನೋಡಲಿಲ್ಲ. ಅಲ್ಲವೆ?

ಉತ್ತರ : ನಾ ನೋಡಲಿಲ್ಲ.

ಪ್ರಶ್ನೆ : ಹೋಗ್ಲಿ ಬಿಡು. ನಿನ್ನ ಬಂದೂಕನ್ನು ನಾಳೆ ಕೋರ್ಟಿಗೆ ಹಾಜರ್‍ಮಾಡ್ತೀಯಾ?

ಉತ್ತರ : ನಾ ಆಗಾಲ್ಲೆ ಹೇಳಿದ್ನೆಲ್ಲಾ, ಕೋವಿ ಕಲ್ಗೊಡಾಗೆ ಆದೆ ಅಂತ, ತಾವು ಅಪ್ಣೆ ಕೊಟ್ರೆ ಇಂದೇ ಕಾಲ್ಗೋಡೀಗೆ ಹೋಗಿ ನೋಡ್ತಿನಿ. ಆ ಆಚಾರಿ ಅಲ್ಲಿದ್ರೆ ಕೋವಿ ತರ್ತೀನಿ. ಅವ ಎಲ್ಯಾರೂ ಕನ್ನಡ್ಜಿಲ್ಲೀಗೆ ಹೋಗಿದ್ರೆ ತರೂಕೆ ಆಗೂದಿಲ್ಲ

ಪ್ರಶ್ನೆ : (ನ್ಯಾಯಾಧೀಶರು ಮುಖವನ್ನು ಗಂಟು ಹಾಕಿಕೊಂಡು) ಬಸಪ್ಪಾ ನಾನು ಪುನಃ ಹೇಳುತ್ತೇನೆ. ಕೇಳು. ಮಲ್ಲಪ್ಪನಿಗೆ ಸೇರಿದ್ದೆಂಬುದಾಗಿ ಕೋರ್ಟಿಗೆ ಹಾಜರುಮಾಡಿರುವ ಬಂದೂಕು ನಿನಗೆ ಸೇರಿದ್ದು, ಈ ಬಂದೂಕಿನ ಚಹರೆಯೂ ಲೈಸನ್ಸ್ ರಿಜಿಸ್ಟರಿನಲ್ಲಿ ನಮೂದಾಗಿರುವ ನಿನ್ನ ಬಂದೂಕಿನ ಚಹರೆಯೂ ಒಂದೇ ಆಗಿದೆ. ನೀನೂ, ನಿನ್ನ ಭಾವ ಕಲ್ಲಪ್ಪನೂ ಪೊಲೀಸಿನವರೂ ಷರೀಕಾಗಿ ಸುಳ್ಳು ಮಹಜರ್ ಮಾಡಿಸಿರುತ್ತೀರಿ. ಎಂಬುದಾಗಿ ನಾನು ಹೇಳುತ್ತೇನೆ. ಇದಕ್ಕೆ ನಿನ್ನ ಜವಾಬೇನು?

ಉತ್ತರ : ಆ ಕಲ್ಗೋಡ ಆಚಾರಿ ನನ್ ಕೋವೀನ ಮಲ್ಲಪ್ಗೆ ಕೊಟ್ಟಿದ್ರೂ ಕೊಟ್ಟಿರ್ಬೇದು. ನಾ ಹ್ಯಾಂಗೆ ಹೇಳ್ಳಿ ಬುದ್ಧಿ? ನಾ ಕೋಲ್ಟು ಕಛೇರಿ ಇಂಕತಂಕ ಹತ್ತದವಲ್ಲ. ತಾವು ದೊಡ್ಡ ಧಣಿ, ಹಾಲಗಾರೂ ಹಾಕಿ; ನೀರಾಗಾರೂ ಹಾಕಿ. ನಾ ನಿರಪರಾಧಿ. ತಮ್ಗೆ ನನ್ಮಾತಾಗೆ ನಂಬ್ಕಿ ಸಾಲ್ದೆ ಇದ್ರೆ ತಾವು ನಮ್ಮ ಭಾವನ್ನ ಕೇಳಿ. ಅವ್ರ್ ಹೇಳ್ತಾರೆ.

ಪ್ರಶ್ನೆ : ಈ ಬಂದೂಕು ನಿನ್ನ ಬಂದೂಕು ಅಂತ ನಾನು ತೀರ್ಮಾನ ಮಾಡಿದರೆ ಕೊಲ್ಲನ ಕೊಲೆಗೆ ನೀನು ಕಾರಣನೆಂದು ಅನುಮಾನ ಉಂಟಾಗಲು ಅಸ್ಪದವಾಗುತ್ತದೆ. ಇದಕ್ಕೆ ನೀನೇನು ಹೇಳುತ್ತಿಯ?

ಉತ್ತರ : ಅಯ್ಯೋ ಸ್ವಾಮಿ, ನಾ ಅಂತ ಕೆಲ್ಸಾ ಮಾಡಾವನಲ್ಲ. ನಂಗೂ ಮಕ್ಕುಮರಿ ಅವೆ. ದೇವ್ರಾಣೆ ಅಂತಾಬದ್ಕು ನಾ ಮಾಡಲ್ಲ. ನಾ ಬೇಕಾದರೆ ಪರ್ಮಾಣ ಮಾಡ್ತೀನಿ.

"ಸಮಯ ಬಂದಾಗ ಪ್ರಮಾಣ ಮಾಡಬಹುದು. ನೀನು ಈಗ ಹೋಗಬಹುದು." ಎಂದು ನ್ಯಾಯಾಧೀಶರು ಹೇಳಿದರು.

ಫಿರ್ಯಾದಿಯ ಪರ ಸಾಕ್ಷಿಗಳ ಹೇಳಿಕೆಯನ್ನು ಕೇಳಿದಮೇಲೆ, ಅದರಲ್ಲೂ ಬಸಪ್ಪನ ಹೇಳಿಕೆಯಾದ ಮೇಲೆ, ಅಪರಾಧಿಗಳ ಪರವಾಗಿ ಯಾವ ಸಾಕ್ಷಿಗಳೂ ಬೇಕಾಗಿಲ್ಲವೆಂದು ಸೂರ್ಯನಾರಾಯಣರಾಯರು ತೀರ್ಮಾನ ಮಾಡಿದರು. ಅದೇ ರೀತಿ ನ್ಯಾಯಾಧೀಶರಿಗೂ ತಿಳಿಸಿದರು. ನ್ಯಾಯಾಧೀಶರು ಮೊಕದ್ದಮೆಯನ್ನು ವಾದ ವಿವಾದಗಳಿಗಾಗಿ ಮರುದಿನಕ್ಕೆ ಹಾಕಿದರು. ಬಸಪ್ಪನ ಹೇಳಿಕೆಯನ್ನು ಕೇಳಿದ ಪೊಲೀಸ್ ಇನ್ಸ್‌ಪೆಕ್ಟರಿಗೆ ಕೇಸಿನ ಭವಿಷ್ಯ ಗೊತ್ತಾಗಿತ್ತು. ಆದರೆ ಅವರು ರಂಗನಾಥ ಮತ್ತು ಕಲ್ಲಪ್ಪನೊಡನೆ ಮಾತನಾಡಿದಾಗ "ಪರ್‍ವಾ ಇಲ್ಲ, ಜೀವಾವಧಿ ಶಿಕ್ಷೆ ಆದ್ರೂ ಆಗಬಹುದು" ಎಂದಿದ್ದರು. ಅವರ ಮಾತನ್ನು ನಂಬಿ ರಂಗನಾಥನೂ, ಅವನ ಕೂಟದವರೂ ಮೋಹನನಿಗೆ ಶಿಕ್ಷೆ ಖಂಡಿತವೆಂದು ಭಾವಿಸಿದ್ದರು. ಅಪರಾಧಿಗಳಿಗೆ ಖುಲಾಸೆ ಆಗುವುದೆಂದು ಸೂರ್ಯನಾರಾಯಣರು ಮೂರ್ತಿಗೆ ತಿಳಿಸಿದ್ದರು. ಮೋಹನನು ಕೇಸಿನಲ್ಲಿ ಲಭಿಸುವ ಜಯಾಪಜಯಗಳ

ವಿಚಾರದಲ್ಲಿ ಕಿಂಚಿತ್ತೂ ಯೋಚಿಸುತ್ತಿರಲಿಲ್ಲ. ಕೇಸಿನ ವಿಚಾರದಲ್ಲಿ ಅವನ ಮನಸ್ಸು ಎಂದೂ ತಳಮಳಗೊಂಡಿರಲಿಲ್ಲ. ಅವನು ತನ್ನ ಸಾತ್ವಿಕ ಜೀವನದ ಸತ್ವ ಪರೀಕ್ಷೆಯ ಅಂತಿಮ ಫಲಿತಾಂಶಕ್ಕಾಗಿ ಕಾಯುತ್ತಿದ್ದನು. ಅವನ ಆರೋಗ್ಯ ಸಂಪೂರ್ಣ ಕೆಟ್ಟಿತ್ತು. ಜಗತ್ತಿನಲ್ಲಿ ಜೀವಿಸಿರಬೇಕೆಂಬ ಆಶೆ ಅವನಿಗಿರಲಿಲ್ಲ. ಸಾಕ್ಷಿಗಳ ವಿಚಾರಣೆಯಾಗುತ್ತಿದ್ದ ಕಾಲದಲ್ಲಿ ಅವನಿಗೆ ಕೇಸಿನ ವಿಚಾರದಲ್ಲಿ ಕುತೂಹಲವೂ ಇರಲಿಲ್ಲ; ಆಸಕ್ತಿಯೂ ಇರಲಿಲ್ಲ. ಬಸಪ್ಪನ ಹೇಳಿಕೆಯಾದ ದಿನವೇ ಅವನಿಗೆ ವಿಪರೀತ ಜ್ವರವಿತ್ತು. ಆದರೂ ಪೊಲೀಸಿನವರು ಅವನನ್ನು ಬಲತ್ಕಾರದಿಂದ ನ್ಯಾಯಾಲಯಕ್ಕೆ ಕರೆದುಕೊಂಡು ಬಂದಿದ್ದರು. ಆ ದಿನ ಜ್ವರವಿನ್ನೂ ಹೆಚ್ಚಾಯಿತು. ಮರುದಿನ ಅವನು ಮೇಲಕ್ಕೇಳುವಂತೆಯೇ ಇರಲಿಲ್ಲ. ಆದ್ದರಿಂದ ವಾದ ವಿವಾದಗಳ ದಿನ ಮೋಹನನು ನ್ಯಾಯಾಲಯಕ್ಕೆ ಹೋಗಲಾಗಲಿಲ್ಲ. ಅವನ ಪರವಾಗಿ ಸೂರ್ಯನಾರಾಯಣರಾಯರು ಹಾಜರಾಗಿದ್ದರು.

ಸೆಷನ್ಸ್ ಮೊಕದ್ದಮೆಯಲ್ಲಿ ನ್ಯಾಯಾಧೀಶರ ಸಮ್ಮುಖದಲ್ಲಿ ಮರುದಿನ ವಾದ ವಿವಾದಗಳು ಪ್ರಾರಂಭವಾದುವು. ಸರ್ಕಾರಿ ನ್ಯಾಯಾವಾದಿಗಳು ಫಿರ್ಯಾದಿಯ ಪರವಾಗಿ ಹೇಳಿಕೆಗಳೆಲ್ಲವನ್ನೂ ಎರಡು ಘಂಟೆಗಳ ಕಾಲ ವಿಮರ್ಶೆಮಾಡಿದ್ದರು. ಅವರು ತಮ್ಮ ವಾದದಲ್ಲಿ ಐವತ್ತು ಜನ ಸಾಕ್ಷಿಗಳು ಒಂದೇ ರೀತಿಯಲ್ಲಿ ಹೇಳಿರುವ ಸಾಕ್ಷ್ಯವನ್ನು ಅಲ್ಲಗಳೆಯುವುದು ಅಸಾಧ್ಯವೆಂದೂ, ಆ ಎಲ್ಲಾ ಸಾಕ್ಷಿಗಳೂ ಅಪರಾಧಿಗಳ ಮೇಲೆ ಸುಳ್ಳು ಸಾಕ್ಷಿ ಹೇಳಲು ಕಾರಣವೇ ಇಲ್ಲವೆಂದೂ, ಆದ್ದರಿಂದ ಅವರುಗಳು ಹೇಳಿಕೆಗಳನ್ನು ನಂಬಬೇಕಾದುದು ಅವಶ್ಯಕವೆಂದೂ, ಹಗಲು ಹೊತ್ತಿನಲ್ಲೇ ಕೊಲೆ ಮಾಡಿದವರನ್ನು ಖುಲಾಸೆ ಮಾಡಿದರೆ ಇನ್ನು ಮುಂದೆ ಜನರು ಸುರಕ್ಷಿತವಾಗಿರುವುದು ಅಸಾಧ್ಯವಾಗುವುದೆಂದೂ ಹೇಳಿದರು. ಅಪರಾಧಿಗಳ ಪರ ಸೂರ್ಯನಾರಾಯಣರಾಯರು ವಾದಮಾಡುತ್ತಾ, ಬಸಪ್ಪನ ಹೇಳಿಕೆಯನ್ನೂ ಇನ್ನುಳಿದ ಕೆಲವು ಸಾಕ್ಷಿಗಳ ಹೇಳಿಕೆಯನ್ನೂ ವಿಮರ್ಶೆ ಮಾಡಿ, ಪೊಲೀಸ್ ಇನ್ಸ್‌ಪೆಕ್ಟರೂ, ಬಸಪ್ಪನೂ, ಕಲ್ಲಪ್ಪನೂ, ಷರೀಕಾಗಿ ಅಪರಾಧಿಗಳ ಮೇಲೆ ಸುಳ್ಳು ಮೊಕದ್ದಮೆಯನ್ನು ಹೂಡಿದ್ದಾರೆಂದೂ, ಫಿರ್ಯಾದಿಯ ಪರವಾಗಿ ಸಾಕ್ಷಿ ನುಡಿದವರು ಒಪ್ಪಿಕೊಂಡಿರುವಂತೆ ಮೋಹನನಿಗೂ ರಂಗನಾಥನಿಗೂ ರಾಜಕೀಯದಲ್ಲಿ ಪೈಪೋಟಿ ಇದೆ ಎಂದೂ, ಈ ಪೈಪೋಟಿಯೇ ಈ ಕೇಸಿಗೆ ಮೂಲಕಾರಣವೆಂದೂ ಹೇಳಿದರು. ಸೂರ್ಯನಾರಾಯಣರಾಯರು ಮುಂದುವರಿದು ಲಂಚಕೋರ ರಾಜಕಾರಣಿಗಳೂ, ಲಂಚಕೋರ ಅಧಿಕಾರಿಗಳೂ, ಒಟ್ಟಾಗಿ ಸೇರಿದರೆ ಎಷ್ಟು ಅನ್ಯಾಯವನ್ನಾದರೂ ಮಾಡಲು ಸಾಧ್ಯವಿದೆಯೆಂದೂ, ಮೋಹನನಂತಹ ಆದರ್ಶ ದೇಶಭಕ್ತನ ಮೇಲೆ ಸುಳ್ಳು ಮೊಕದ್ದಮೆಯನ್ನು ಹೂಡಿರುವುದು ಪವಿತ್ರಪುರ ತಾಲ್ಲೂಕಿನ ಕಲುಷಿತ ರಾಜಕಾರಣಕ್ಕೆ ಕಳಶವನ್ನಿಟ್ಟಂತಾಗಿದೆಯೆಂದೂ ಹೇಳಿದರು.

# ೨೦. ಬಂಧನದಿಂದ ಬಿಡುಗಡೆ

ಇತ್ತ ಮೋಹನನಿಗೆ ಕಳೆದ ಎರಡು ದಿನಗಳಿಂದ ನೂರೈದು ನೂರಾರು ಡಿಗ್ರಿಗಳವರೆಗೆ ಜ್ವರ ಬರುತ್ತಾ ಇತ್ತು. ಎರಡು ದಿನಗಳಿಂದ ನೀರು ಮತ್ತು ಕಾಫಿ ವಿನಃ ಇನ್ನಾವ ಆಹಾರವನ್ನೂ ಅವನು ಸೇವಿಸಿರಲಿಲ್ಲ. ಅವನಿಗೆ ಬಂದಿದ್ದ ಜ್ವರ ಸಾಮಾನ್ಯ ಮಲೇರಿಯಾ ಜ್ವರವಿರಬಹುದೆಂದು ಭಾವಿಸಿ ಸೆರೆಮನೆಯ ಅಧಿಕಾರಿಗಳು ಆಸ್ಪತ್ರೆಯಿಂದ ಅವನಿಗೆ ಔಷಧವನ್ನು ತಂದು ಕೊಟ್ಟಿದ್ದರು. ಮೋಹನನು ಆ ಔಷಧವನ್ನೂ ಸಹ ಕುಡಿದಿರಲಿಲ್ಲ. ಮೋಹನನಿಗೆ ಬಂದಿದ್ದು ಸಾಮಾನ್ಯ ಮಲೇರಿಯಾ ರೋಗವಾಗಿರಲಿಲ್ಲ. ಅದು ಮೆದುಳನ್ನಾಕ್ರಮಿಸಿದ್ದ ಮಲೇರಿಯಾ ರೋಗವಾಗಿತ್ತು. ಮಲೇರಿಯಾ ಕ್ರಿಮಿಗಳು ಅವನ ಮೆದುಳನ್ನು ಆಕ್ರಮಿಸಿಕೊಂಡಿದ್ದರಿಂದ ಜ್ವರದ ತಾಪ ಹೆಚ್ಚಾಗಿತ್ತು. ವಾದ ವಿವಾದಗಳಾದ ದಿನ ಅವನು ಬಹಳ ನಿಶ್ಶಕ್ತನಾಗಿದ್ದನು. ಆ ದಿನ ರಾತ್ರಿ ಜ್ವರವೂ ಹೆಚ್ಚಾಯಿತು: ನಿಶ್ಶಕ್ತಿಯೂ ಹೆಚ್ಚಾಯಿತು.

ಮರುದಿನ ನ್ಯಾಯಾಧೀಶರು ತೀರ್ಪನ್ನು ಹೇಳಬೇಕಾಗಿತ್ತು. ತೀರ್ಪನ್ನು ಕೇಳಲು ಮೋಹನನು ನ್ಯಾಯಾಲಯಕ್ಕೆ ಹೋಗುವುದಿರಲಿ ಏಳಲೂ ಕೂಡ ಅಸಮರ್ಥವಾಗಿದ್ದನು. ಮಲ್ಲಪ್ಪನು ತೀರ್ಪನ್ನು ಕೇಳಲು ಹೋದನಂತರ ಮೋಹನನನ್ನು ವಿಚಾರಿಸಿಕೊಳ್ಳುವವರೇ ಇರಲಿಲ್ಲ. ಅವನಿಗೆ ಆಗಾಗ ಪ್ರಜ್ಞೆ ತಪ್ಪುತ್ತಿತ್ತು. ಉಳಿದ ಸಮಯಗಳಲ್ಲಿ ಅರೆ ಜಾಗ್ರತಾವಸ್ಥೆಯಲ್ಲಿ ಸೆರೆಮನೆಯಲ್ಲಿ ಮಲಗಿರುತ್ತಿದ್ದನು. ಸೆರೆಮನೆಯ ಸಿಪಾಯಿಗಳಿಗೆ ಮೋಹನನ ಮಹಿಮೆ ಹೇಗೆ ತಾನೆ ಗೊತ್ತಾಗಬೇಕು? ಉಳಿದ ಕ್ರಿಮಿನಲ್ ಕೈದಿಗಳಂತೆ ಮೋಹನನೂ ಒಬ್ಬ ಕೈದಿಯೆಂದು ಅವರು ಭಾವಿಸಿದ್ದರು. ಸಾಲದುದಕ್ಕೆ ಅವನು ಕೊಲೆ ಮೊಕದ್ದಮೆಯಲ್ಲಿ ಅಪರಾಧಿಯಾಗಿದ್ದುದರಿಂದ ಅವನ ವಿಚಾರದಲ್ಲಿ ಸಿಪಾಯಿಗಳಿಗೆ ಗೌರವವೂ ಇರಲಿಲ್ಲ. ಅವನು ಗಡ್ಡವನ್ನು ಬಿಟ್ಟು ಹುಚ್ಚನಂತೆ ಕಾಣುತ್ತಿದ್ದುದರಿಂದಲೂ ಅವನೊಬ್ಬ ಹುಚ್ಚನೆಂದು ಆ ಸಿಪಾಯಿಗಳು ತಿಳಿದಿದ್ದರು.

ನ್ಯಾಯಾಧೀಶರು ಹನ್ನೊಂದು ಘಂಟೆಗೆ ಸರಿಯಾಗಿ ನ್ಯಾಯಾಲಯಕ್ಕೆ ಬಂದು ತಮ್ಮ ಧೀರ್ಘವಾದ ತೀರ್ಪನ್ನು ಓದಲಾರಂಭಿಸಿದರು. ಅವರು ತಮ್ಮ ತೀರ್ಪಿನಲ್ಲಿ ಆಪಾದನೆಯ ಸಂಕ್ಷಿಪ್ತ ಸ್ವರೂಪವನ್ನು ಪ್ರಸ್ತಾಪಿಸಿ ಸಾಕ್ಷಿಗಳ ಹೇಳಿಕೆಗಳನ್ನು ಧೀರ್ಘವಾಗಿ ವಿಮರ್ಶಿಸಿ, ಅಪರಾಧಿಗಳ ಮೇಲಿನ ಆರೋಪಗಳು ಸುಳ್ಳೆಂದೂ, ರಾಜಕಾರಣದ ಪೈಪೋಟಿಯ ದೆಸೆಯಿಂದ ದ್ವೇಷಸಾಧನೆಗಾಗಿ ಕಲ್ಲಪ್ಪನೂ, ರಂಗನಾಥನೂ, ಪೋಲಿಸಿನವರೊಡನೆ ಷರೀಕಾಗಿ ಅನಾವಶ್ಯಕವಾಗಿ ಅಪರಾಧಿಗಳ ಮೇಲೆ ಸುಳ್ಳು ಮೊಕದ್ದಮೆಯನ್ನು ಹೂಡಿದ್ದೆಂದೂ, ಕೋರ್ಟಿಗೆ ಹಾಜರ್ಪಡಿಸಿದ್ದ ಬಂದೂಕು ಬಸಪ್ಪನಿಗೆ

ಸೇರಿದ್ದೆಂದೂ, ಮೊಕದ್ದಮೆಯಲ್ಲಿ ಯಾರಿಗಾದರೂ ಶಿಕ್ಷೆಯಾಕಬೇಕಾಗಿದ್ದರೆ, ಅದು ಕಲ್ಲಪ್ಪನಿಗೆಂದೂ, ಆದರೆ ಅವನು ಕೇಸಿನಲ್ಲಿ ಅಪರಾಧಿಯಾಗಿಲ್ಲದೆ ಇರುವುದರಿಂದ ಅವನಿಗೆ ಶಿಕ್ಷೆ ವಿಧಿಸುವ ಹಕ್ಕು ತಮಗಿಲ್ಲವೆಂದೂ, ಕೊನೆಯದಾಗಿ ಅನಾವಶ್ಯಕವಾಗಿ ಮಾನಸಿಕ ಯಾತನೆ, ತೊಂದರೆ, ಕಷ್ಟನಷ್ಟಗಳಿಗೆ ಗುರಿಯಾಗಿದ್ದ ಗಣ್ಯವ್ಯಕ್ತಿಯಾದ ಮೋಹನನ ವಿಚಾರದಲ್ಲಿ ತಮಗೆ ಸಂಪೂರ್ಣ ಸಹಾನುಭೂತಿ ಇದೆಯೆಂದೂ ಪ್ರಸ್ತಾಪಿಸಿದ್ದರು. ತೀರ್ಪನ್ನು ಕೇಳುವ ಸಲುವಾಗಿ ನ್ಯಾಯಾಲಯದ ಸುತ್ತಲೂ ಐದಾರು ಸಾವಿರ ಜನರು ಸೇರಿದ್ದರು.

ನ್ಯಾಯಾಧೀಶರು ನ್ಯಾಯಾಲಯದಲ್ಲಿ ತೀರ್ಪನ್ನು ಓದುತ್ತಿದ್ದ ಕಾಲದಲ್ಲಿ, ಸೆರೆಮನೆಯಲ್ಲಿ ಅರೆನಿದ್ದೆಯಲಿ ಮಲಗಿದ್ದ ಮೋಹನನಿಗೆ ಒಂದು ಆಶ್ಚರ್ಯವಾದ ಕನಸಾಗಿತ್ತು. ಕನಸಿನಲ್ಲಿ ತೇಜೋಮೂರ್ತಿಯೊಂದು ಮೋಹನನ ಎದುರು ಬಂದು ನಿಂತು, ಅವನನ್ನು ಕುರಿತು

"ಮೋಹನಾ, ಸತ್ಯಕ್ಕೆ ಸೋಲಾಯಿತೆಂದು ಅನಾವಶ್ಯಕವಾಗಿ ಸಂಕಟ ಪಡುತ್ತಿರುವೆ. ನಾಸ್ತಿಕವಾದದ ಸಂಶಯ ಪಿಶಾಚಿ ಅನಾವಶ್ಯಕವಾಗಿ ನಿನ್ನನ್ನು ಕಾಡುತ್ತಾ ಇದೆ. ಸತ್ಯಕ್ಕೆ ಸೋಲೆಂದೂ ಇಲ್ಲ. ಅಸತ್ಯ, ಅಧರ್ಮಗಳೊಡನೆ ನೀನು ಇದುವರೆಗೆ ನಡೆಸಿದ ಹೋರಾಟದಲ್ಲಿ ಜಯಶಾಲಿಯಾಗಿರುವೆ. ದೀನದಲಿತರಿಗಾಗಿ ಮರುಗುವವರು ಶ್ರೇಷ್ಠ ಜೀವಿಗಳು, ದೀನದಲಿತರಿಗಾಗಿ ದುಡಿಯುವವರು ಅತಿಶ್ರೇಷ್ಠ ಜೀವಿಗಳು. ಯೋಗಿಗಳಿಗೆ ಲಭಿಸುವ ಫಲ ಅವರಿಗೆ ಪ್ರಾಪ್ತಿಯಾಗುತ್ತದೆ. ನಿನ್ನ ಸಾಹಸ ತ್ಯಾಗಗಳಿಗಾಗಿ ನಾನು ಮೆಚ್ಚಿರುವೆನು. ಸಾವು ನೋವುಗಳಿಲ್ಲದ ಪದವಿ ನಿನಗಾಗಿ ಕಾಯುತ್ತಿದೆ. ನಾಸ್ತಿಕ ಪಿಶಾಚಿಯನ್ನು ಹೊಡೆದಟ್ಟಿ ಆಸ್ತಿಕನಾಗು. ಈಗ ತಾನೆ ನ್ಯಾಯಾಲಯದಲ್ಲಿ ನ್ಯಾಯಾಧೀಶರು ತಮ್ಮ ತೀರ್ಪನ್ನು ಓದಿ ಮುಗಿಸಿದರು. ಅವರು ನಿನ್ನನ್ನು ಸೆರೆಮನೆಯ ಬಂಧನದಿಂದ ಬಿಡುಗಡೆಮಾಡಿದ್ದಾರೆ. ನಾನು ನಿನ್ನನ್ನು ಇಹಲೋಕದ ಬಂಧನದಿಂದ ಬಿಡುಗಡೆ ಮಾಡಿದ್ದೇನೆ. ನಿನ್ನ ತಾಯಿ ಚೆನ್ನಮ್ಮ, ನಿನ್ನ ತಂದೆ ಸಿದ್ದಣ್ಣ, ನಿನಗಾಗಿ ಕಾಯುತ್ತಿದ್ದಾರೆ. ನೀನಿನ್ನು ಪಯಣಕ್ಕೆ ಸಿದ್ಧನಾಗು. ನಿನ್ನ ಹೆಸರು ಈ ದೇಶದಲ್ಲಿ ಅಚಂದ್ರಾರ್ಕವಾಗಿ ಉಳಿಯುತ್ತದೆ" ಎಂದು ಹೇಳಿತು.

ಮೋಹನನು ಸ್ವಪ್ನದಲ್ಲಿ ನೋಡುತ್ತಿದ್ದಂತೆಯೇ ಆ ತೇಜೋಮೂರ್ತಿ ಮಾಯಾವಾಗಿ ಅದಿದ್ದ ಸ್ಥಳದಲ್ಲಿ ಪ್ರಜ್ವಲಿಸುವ ಬೆಳಕೊಂದು ಕಾಣಿಸಿತು. ಕ್ರಮೇಣ ಆ ಬೆಳಕು ಮೋಹನನ ಶರೀರದೊಳಗೆ ಹೋದಂತಾಯಿತು. ಮೋಹನನು ಕಣ್ತೆರೆದು ನೋಡಿದನು. ಅವನಿಗಾದ ಅನುಭವ ನಿದ್ರಾವಸ್ಥೆಯಲ್ಲಿ ಸಂಭವಿಸಿದ ಸ್ವಪ್ನದಂತೆಯೂ ಇರಲಿಲ್ಲ; ಅಥವಾ ಜಾಗ್ರತಾವಸ್ಥೆಯಲ್ಲಿ ಜರುಗಿದ ವಾಸ್ತವಿಕ ಘಟನೆಯಂತೆಯೂ ಇರಲಿಲ್ಲ. ಮೋಹನನು ವಿಚಾರವಂತನಾಗಿ, ವೈಜ್ಞಾನಿಕ ದೃಷ್ಟಿಯುಳ್ಳವನಾಗಿದ್ದನು. ಮೂಢ ನಂಬಿಕೆಗಳನ್ನೂ, ಗೊಡ್ಡು ಆಚಾರಗಳನ್ನೂ, ಅವನು ಅಲ್ಲಗಳೆದವನಾಗಿದ್ದನು. ತನಗಾದ ಅನುಭವವನ್ನು ವಿಚಾರದ ಒರೆಗಲ್ಲಿಗೆ ಹಚ್ಚುವ ಪ್ರಯತ್ನವನ್ನು ಮಾಡಿದನು. ಆ ಅನುಭವವನ್ನು ಬರಿಯ

ಭ್ರಮೆ ಎಂದು ಅವನು ಮನಸ್ಸು ಸಾಧಿಸುತ್ತಿತ್ತು. ಆದರೆ ಅವನ ಅಂತರಾತ್ಮ ಭ್ರಮೆಯಲ್ಲವೆಂದು ಹೇಳುತ್ತಿತ್ತು. ಜ್ವರದ ತಾಪದಿಂದ ದೇಹ ಕಾಯುತ್ತಿದ್ದರೂ ಸ್ವಪ್ನದ ದೆಸೆಯಿಂದ ಮನಸ್ಸು ತಣ್ಣಗಾಗಿತ್ತು. ಏನೋ ಒಂದು ವಿಧವಾದ ಅಪೂರ್ವ ಶಾಂತಿ ದೊರಕಿತ್ತು.

"ನ್ಯಾಯಾಧೀಶರು ನನ್ನನ್ನು ಸೆರೆಮನೆಯ ಬಂಧನದಿಂದ ಬಿಡುಗಡೆ ಮಾಡಿದ್ದಾರೆಂದು ಸ್ವಪ್ನದ ಆ ವ್ಯಕ್ತಿ ಹೇಳಿದ್ದು ನಿಜವಾದರೆ, ಆ ವ್ಯಕ್ತಿ ಬರಿಯ ಕನಸಿನ ಕಲ್ಪನಾ ಮೂರ್ತಿಯಾಗಿರಲಾರನು. ನ್ಯಾಯಾಧೀಶರ ತೀರ್ಪಿನ ವಿಚಾರ ನನಗೇನೂ ಗೊತ್ತಿಲ್ಲ. ಸೆರೆಮನೆಯ ಸಿಪಾಯಿಗಳಿಗೆ ಗೊತ್ತಾಗಿದ್ದರೆ ಅವರು ನನಗೆ ತಿಳಿಸಬೇಕಾಗಿತ್ತು. ನನಗೆ ಗೊತ್ತಾಗದೆ ಇರುವುದು ಆ ಮೂರ್ತಿಗೆ ಗೊತ್ತಾಗಿದ್ದರೆ ನನಗಾದ ಅನುಭವವನ್ನು ಬರಿಯ ಕನಸೆಂದು ಹೇಗೆ ಕರೆಯಲಿ?" ಇವೇ ಮುಂತಾದ ವಿಚಾರಗಳು ಮೋಹನನ ಮನಸ್ಸಿನಲ್ಲಿ ಸುಳಿಯುತ್ತಿದ್ದವು.

ನ್ಯಾಯಾಧೀಶರು ತೀರ್ಪನ್ನು ಓದಿ ಅಪರಾಧಿಗಳ ಬಿಡುಗಡೆಯಾಗಿದೆಯೆಂದು ಹೇಳಿದೊಡನೆ ಹೊರಗಡೆ ಇದ್ದ ಜನಸ್ತೋಮ "ಮೋಹನ್ಕೀ ಜೈ" ಎಂಬ ಜಯಕಾರ ಹಾಕಿತು. ಈ ಮಧ್ಯೆ ತೀರ್ಪನ್ನು ಕೇಳಲು ಬಂದಿದ್ದ ಸಂಕಪೂಜಾರಿಯೂ, ರಂಗನಾಥನ ದಿನಪತ್ರಿಕೆಯ ಸಂಪಾದಕ ಮಂಗಳದಾಸನೂ, ಸಪ್ಪೆಮೋರೆ ಹಾಕಿಕೊಂಡು ಜನ ಸಮೂಹದ ಮಧ್ಯೆ ನುಣುಚಿಕೊಂಡು ಹೋಗುತ್ತಿದ್ದರು. ಅವರಿಬ್ಬರೂ ಕಾಂಗ್ರೆಸ್ಸನ್ನು ಬಿಟ್ಟಿದ್ದರೂ ಖಾದಿ ಟೋಪಿಗಳನ್ನು ಬಿಟ್ಟಿರಲಿಲ್ಲ. ಅವರು ಹಾಕಿದ್ದ ಬಿಳಿಯ ಟೋಪಿಗಳು ಜನರ ಗಮನವನ್ನು ಸೆಳೆಯದೆ ಇರಲಿಲ್ಲ. ಅಷ್ಟರಲ್ಲಿ ಪೋಲಿಸ್ ಇನ್‌ಸ್ಪೆಕ್ಟ್ರರೂ ಸಹ ನ್ಯಾಯಾಲಯದಿಂದ ಹೊರಗಡೆ ಬರುತ್ತಾ ಇದ್ದರು. ಜನರ ದೃಷ್ಟಿಯೆಲ್ಲವೂ ಆ ಮೂವರ ಮೇಲೆ ಕೇಂದ್ರೀಕೃತವಾಯಿತು. ಅವರಿಗೆ ಏನು ಮಾಡಬೇಕೆಂಬುದನ್ನು ಜನರು ಯೋಚಿಸುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ಗುಂಪಿನಲ್ಲಿದ್ದವರೊಬ್ಬರು "ಹಿಡಿಯಿರಿ ಕಳ್ಳಭಟ್ಟಿ ಸಂಕನ್ನ: ಹೊಡೆಯಿರಿ ಸುಳ್ಳು ಪತ್ರಿಕೆಯ ಸಂಪಾದಕನ್ನ: ಒದೆಯಿರಿ ಡೊಳ್ಳು ಹೊಟ್ಟೆಯ ಇನ್‌ಸ್ಪೆಕ್ಟ್ರನ್ನ" ಎಂದು ಕೂಗಿದರು. ಅಷ್ಟು ಕೂಗಿದ್ದೇ ತಡ ಗುಂಪಿನಲ್ಲಿದ್ದ ಜನರು ಆ ವಾಕ್ಯಗಳನ್ನೇ ಪುನಾರುಚ್ಚಾರ ಮಾಡುತ್ತಾ ಆ ಮೂವರಿದ್ದ ಕಡೆಗೆ ಮುನ್ನುಗ್ಗಿದರು.

ಸಂಪಾದಕನು ರಂಗನಾಥನ ದುಡ್ಡಿಗಾಗಿ ತನ್ನ ಪತ್ರಿಕೆಯಲ್ಲಿ ವಾಚಾಮ ಗೋಚರವಾಗಿ ಮೋಹನನನ್ನು ಕೆಲವು ವರ್ಷಗಳಿಂದ ಬಯ್ಯುತ್ತಿದ್ದನು. ತನ್ನ ಬೆಚ್ಚನೆಯ ಕೊಠಡಿಯಲ್ಲಿ ಕುಳಿತು, ಕಾಫಿಯನ್ನು ಕುಡಿಯುತ್ತಲೋ. ಸಿಗರೇಟನ್ನು ಸೇದುತ್ತಲೋ, ಮನಸ್ಸಿಗೆ ಬಂದಂತೆ ಪತ್ರಿಕೆಯಲ್ಲಿ ಬರೆಯಿಸುವುದಕ್ಕೂ, ಸಿಟ್ಟಿಗೆದ್ದ ಜನರನ್ನು ಎದುರಿಸುವುದಕ್ಕೂ ಬಹಳ ವ್ಯತ್ಯಾಸವಿದೆಯೆಂಬುದನ್ನು ಸಂಪಾದಕ ಮಹಾಶಯನು ಅಂದು ಅರಿತುಕೊಂಡನು. ಅವನ ಅವಸ್ಥೆ ಆಟಗಾರರ ಕೈಗೆ ಸಿಕ್ಕಿದ ಚೆಂಡಿನಂತೆ ಆಗಿತ್ತು. ಗುಂಪಿನಲ್ಲಿದ್ದವರು ಒಬ್ಬೊಬ್ಬರೂ ಸಹ ಒಂದೊಂದು ಏಟನ್ನು ಕೊಡಲಾರಂಭಿಸಿದರು. ಎಷ್ಟೊ ವರ್ಷಗಳಿಂದ ಅವನು ಮೋಹನನಿಗೆ ಕೊಟ್ಟಿದ್ದ ಕಿರುಕುಳಗಳನ್ನು ಅಂದು ಅವನಿಗೆ ಪವಿತ್ರಪುರದ ಜನರು ಚಕ್ರಬಡ್ಡಿ ಸಮೇತ

ಹಿಂತಿರುಗಿಕೊಟ್ಟಿದ್ದರು. ಹರಿಜನ ಕರಿಯಪ್ಪನು ಅಲ್ಲಿಲ್ಲದಿದ್ದರೆ ಸಂಪಾದಕನ ಜೀವ ಸಹಿತ ಉಳಿಯುವುದೂ ಕೂಡ ಕಷ್ಟವಾಗಿತ್ತು. ಕರಿಯಪ್ಪನು ಜನರನ್ನು ಸಮಾಧಾನಗೊಳಿಸಿ ಸಂಪಾದಕನ ಜೀವವನ್ನು ಉಳಿಸಿದನು. ಸಂಪಾದಕನಿಗೆ ಒದೆ ಬೀಳುತ್ತಿರುವುದನ್ನು ನೋಡಿದ ಸಂಕಪೂಜಾರಿಯೂ, ಪೋಲಿಸ್ ಇನ್‌ಸ್ಪೆಕ್ಟರೂ ಮೆಲ್ಲಗೆ ಹಿಂದಿರುಗಿ ನ್ಯಾಯಾಲಯದಲ್ಲಿ ಒಂದು ಕೊಠಡಿಗೆ ಸೇರಿಕೊಂಡರು. ಸೆಷನ್ಸ್ ಮೊಕದ್ದಮೆಗೋಸ್ಕರ ಬಂದಿದ್ದ ಪೋಲಿಸ್ ರಕ್ಷಣಾ ದಳದವರು ಅವರಿಬ್ಬರಿಗೂ ರಕ್ಷಣೆಯನ್ನು ನೀಡಿದರು. ಜನರು ಅವರಿಬ್ಬರನ್ನು ಬಾಯಿಗೆ ಬಂದಂತೆ ಬಯ್ಯುತ್ತಾ ಮೋಹನನ ದರ್ಶನಕ್ಕಾಗಿ ಸೆರೆಮನೆಯ ಕಡೆಗೆ ಹೊರಟರು.

ಮೂರ್ತಿಯೂ, ಸೂರ್ಯನಾರಾಯಣರಾಯರು ಮೊದಲೇ ಸೆರೆಮನೆಗೆ ಹೋಗಿದ್ದರು. ಅವರಿಬ್ಬರೂ ಸೆರೆಮನೆಗೆ ಹೋಗುವ ಹೊತ್ತಿಗೆ ಸರಿಯಾಗಿ ಮೋಹನ ಮತ್ತು ಮಲ್ಲಪ್ಪನ ಬಿಡುಗಡೆ ವಾರಂಟೂ ಸಹ ನ್ಯಾಯಾಲಯದಿಂದ ಸೆರೆಮನೆಗೆ ಹೋಗಿತ್ತು. ಮೋಹನನು ಮೇಲಕ್ಕೇಳುವ ಸ್ಥಿತಿಯಲ್ಲಿ ಇಲ್ಲದೆ ಇದ್ದುದರಿಂದ, ಸೆರೆಮನೆಯ ಅಧಿಕಾರಿಗಳ ಅಪ್ಪಣೆ ಪಡೆದು, ಸೂರ್ಯನಾರಾಯಣರಾಯರೂ, ಮೂರ್ತಿಯೂ ಸೆರೆಮನೆಯೊಳಗೆ ಮೋಹನನಿದ್ದ ಕೊಠಡಿಗೆ ಹೋದರು. ಮೋಹನನು ಹಾಸಿಗೆಯಲ್ಲಿ ಮಲಗಿದ್ದನು. ಮೂರ್ತಿಯು ಮೋಹನನನ್ನು ಕುರಿತು ಬಹಳ ಹಿಗ್ಗಿನಿಂದ "ಮೋಹನಾ ನಿನಗೆ ಬಿಡುಗಡೆಯಾಗಿದೆ" ಎಂದನು. ಮೋಹನನು ಯಾವ ವಿಧವಾದ ಉತ್ಸಾಹವನ್ನೂ ವ್ಯಕ್ತಪಡಿಸದೆ ಧ್ವನಿಯಲ್ಲಿ "ಹೌದು ನನಗದು ಅರ್ಧಘಂಟೆಯ ಹಿಂದೆಯೇ ಗೊತ್ತಾಗಿದೆ. ಮೂರ್ತೀ, ಸತ್ಯಕ್ಕೆ ಜಯವಿದೆ. ದೇವರಿದ್ದಾನೆ. ನೀನು ನಾಸ್ತಿಕನಾಗಿರಬೇಡ, ಸೂರಿ, ನಿನಗೆ ನನ್ನ ಧನ್ಯವಾದಗಳು. ನೀವಿಬ್ಬರೂ ನನಗಾಗಿ ಬಹಳ ಕಷ್ಟಪಟ್ಟಿದ್ದೀರಿ. ದೇವರು ನಿಮಗೆ ಒಳ್ಳೆಯದನ್ನು ಮಾಡಲಿ" ಎಂದು ನುಡಿದನು.

"ಮೋಹನಾ, ನೀನಿನ್ನು ಹೊರಡಲು ಸಿದ್ಧನಾಗು. ಸೆರೆಮನೆಯ ಹೊರಗಡೆ ಬಹಳ ಜನರು ನಿನ್ನ ದರ್ಶನಕ್ಕಾಗಿ ಕಾದಿದ್ದಾರೆ. ನಿನ್ನನ್ನು ಕರೆದುಕೊಂಡು ಹೋಗಲು ಟ್ಯಾಕ್ಸಿಯನ್ನು ತಂದಿದ್ದೇನೆ" ಎಂದು ಮೂರ್ತಿ ಹೇಳಿದನು.

ಮೂರ್ತೀ, ನನಗೆ ಸೆರೆಮನೆಯ ಬಂಧನದಿಂದಲೂ ಬಿಡುಗಡೆಯಾಗಿದೆ; ಅಂತೆಯೇ ಜಗತ್ತಿನ ಜಂಜಾಟದಿಂದಲೂ ಬಿಡುಗಡೆಯಾಗಿದೆ. ನನಗೇಕೆ ಇನ್ನು ಟ್ಯಾಕ್ಸಿ? ನನ್ನಲ್ಲಿ ಎದ್ದು ನಿಲ್ಲುವುದಕ್ಕೂ ಕೂಡ ಶಕ್ತಿಯಿಲ್ಲ. ಮೈಮುಟ್ಟಿ ನೋಡು ಎಷ್ಟು ತಾಪವಿದೆ. ನನಗಾಗಿ ಕಾದಿರುವ ಜನರನ್ನು ನೋಡುವ ಹಂಬಲವೇನೋ ಇದೆ. ನನ್ನನ್ನು ಹೇಗಾದರೂ ಎತ್ತಿಕೊಂಡು ಹೋದರೆ ಅವರ ದರ್ಶನವನ್ನು ಪಡೆಯುವೆನು" ಎಂದು ಮೋಹನ ನುಡಿದನು.

ಮೋಹನನು ಹೇಳಿದ ಮಾತುಗಳ ಅರ್ಥ ಮೂರ್ತಿಗಾಗಲಿ, ಸೂರ್ಯನಾರಾಯಣ ರಾಯರಿಗಾಗಲಿ ಹೊಳೆಯಲಿಲ್ಲ. ಜಿಗುಪ್ಸೆಯಿಂದ ಆ ರೀತಿ ಅವನು ಮಾತನಾಡಿರ ಬೇಕೆಂದು ಅವರು ಭಾವಿಸಿದ್ದರು. ಒಂದು ಕುರ್ಚಿಯನ್ನು ತರಿಸಿ ಅದರಲ್ಲಿ ಮೋಹನನನ್ನು

ಕುಳ್ಳಿರಿಸಿ ಸಿಪಾಯಿಗಳ ಸಹಾಯದಿಂದ ಆ ಕುರ್ಚಿಯನ್ನು ಸೆರೆಮನೆಯ ಹೊರಗಡೆ ನಿಧಾನವಾಗಿ ಹಿಡಿದುಕೊಂಡು ಬಂದರು. ಹೊರಗಡೆ ನೆರೆದಿದ್ದ ಜನಸ್ತೋಮ ಮೋಹನನನ್ನು ನೋಡಿ ಹರ್ಷೋದ್ಗಾರ ಮಾಡಿತು. ಮೋಹನನು ತನ್ನ ಎರಡು ಕೈಗಳನ್ನೂ ಮೇಲಕ್ಕೆತ್ತಿ ಮಹಾಜನರಿಗೆ ನಮಸ್ಕರಿಸಿದನು. ನಮಸ್ಕರಿಸಿದ ಕೈಗಳು ಕೆಳಕ್ಕೆ ಬರುತ್ತಿರುವಂತೆಯೇ ಅವನ ತಲೆ ಬಲ ಮಗ್ಗುಲಿಗೆ ಒರಗಿತು. ಮೂರ್ತಿ ತಲೆಯನ್ನೆತ್ತಿ ನೆಟ್ಟಗೆ ನಿಲ್ಲಿಸುವ ಪ್ರಯತ್ನಪಟ್ಟನು. ಆದರೆ ಅಷ್ಟರಲ್ಲಿಯೇ ಮೋಹನನು ಇಹಲೋಕವನ್ನು ಬಿಟ್ಟಿದ್ದನು. ಅಂಗಾಂಗಗಳ ಚಲನವಲನಗಳಿಗೆ ಚೈತನ್ಯವನ್ನು ನೀಡುವ ಜೀವಾತ್ಮ ಮೋಹನನ ದೇಹದಿಂದ ಹಾರಿಹೋಗಿದ್ದಿತು. ಆದ್ದರಿಂದ ತಲೆ ನೆಟ್ಟಗೆ ನಿಲ್ಲುವುದೆಂತು?

ಆ ದೃಶ್ಯವನ್ನು ನೋಡುತ್ತಿದ್ದ ಜನರು ತಬ್ಬಲಿಗಳಂತೆ ರೋದಿಸಿದರು. ಸುಮಾರು ಕಾಲು ಶತಮಾನದ ಕಾಲ ಆ ಜನರ ಬಾಳು ಮೋಹನನ ಬಾಳಿನೊಂದಿಗೆ ಹಾಸು ಹೊಕ್ಕುಗಳಂತೆ ಹೊಂದಿಕೊಂಡಿತ್ತು. ಮೋಹನನ ಮರಣಕ್ಕೆ ರಂಗನಾಥನೂ ಮತ್ತು ಆತನ ಸ್ನೇಹಿತರು ಕಾರಣರೆಂಬುದು ಜನತೆಗೆ ತಿಳಿದಿತ್ತು. ಆದ್ದರಿಂದ ಅವರ ಹೃದಯದಲ್ಲಿ ಶೋಕದ ಜೊತೆಗೆ ಕ್ರೋಧವು ಕುದಿಯುತ್ತಿತ್ತು. ರಂಗನಾಥ ಮತ್ತು ಅವನ ಮಿತ್ರರ ಮೇಲೆ ಯಾವ ರೀತಿಯ ಕ್ರಮ ಕೈಗೊಳ್ಳಬೇಕೆಂಬುದನ್ನು ಅವರು ಯೋಚಿಸುತ್ತಿದ್ದರು. ಒಬ್ಬೊಬ್ಬರೂ ಒಂದೊಂದು ವಿಧದಲ್ಲಿ ಯೋಚಿಸುತ್ತಿದ್ದರು. ರಂಗನಾಥನ ಅಂಗಡಿಯನ್ನು ಲೂಟಿ ಮಾಡಬೇಕೆಂದು ಕೆಲವರು ಯೋಚಿಸುತ್ತಿದ್ದರೆ. ಅವನ ಮನೆಗೆ ಬೆಂಕಿಯನ್ನು ಹಾಕಬೇಕೆಂದು ಕೆಲವರು ಯೋಚಿಸುತ್ತಿದ್ದರು. ಬಿಸಿರಕ್ತದ ಯುವಕರು ಕೆಲವರು ರಂಗನಾಥನನ್ನೂ, ಕಲ್ಲಪ್ಪನನ್ನೂ ಮತ್ತು ಸಂಕಪೂಜಾರಿಯನ್ನೂ ಪಂಜರವಳ್ಳಿಗೆ ಎಳೆದುಕೊಂಡು ಹೋಗಿ, ಮೋಹನನ ದೇಹವನ್ನು ಸುಡುವ ಕಾಲದಲ್ಲಿಯೇ ಅವರನ್ನು ಜೀವಸಮೇತ ಸುಡಬೇಕೆಂದು ಯೋಚಿಸುತ್ತಿದ್ದರು.

ಮೋಹನನ ಕಳೇಬರವನ್ನು ಸೆರೆಮನೆಯ ಆವರಣದಿಂದ ಪಂಜರವಳ್ಳಿಗೆ ಪವಿತ್ರಪುರದ ಮುಖ್ಯ ಬೀದಿಗಳ ಮೂಲಕ ಮೆರವಣಿಗೆಯಲ್ಲಿ ಕೊಂಡೊಯ್ಯತಕ್ಕ ದೆಂದೂ, ಅವನ ತಾಯಿ ಚನ್ನಮ್ಮನ ದೇಹವನ್ನು ದಹನ ಮಾಡಿದ ಸ್ಥಳದಲ್ಲಿಯೇ ಅವನ ದೇಹವನ್ನು ದಹನ ಮಾಡತಕ್ಕದ್ದೆಂದೂ, ಮೂರ್ತಿ ಮುಂತಾದವರು ಗೊತ್ತು ಮಾಡಿದರು.

ಮೂರ್ತಿ ಮುಂತಾದವರು ಮೋಹನನ ಸ್ಮಶಾನ ಯಾತ್ರೆಗೆ ಸಜ್ಜುಗೊಳಿಸು ತ್ತಿದ್ದಾಗ ಜನಸಮೂಹ ಮೂರ್ತಿಗೆ ಗೊತ್ತಾಗದೆ ರಂಗನಾಥನ ಮನೆಯ ಕಡೆ ಚಲಿಸುತ್ತಿತ್ತು. ಗುಂಪು ಚಲಿಸುವುದನ್ನು ಮೂರ್ತಿ ನೋಡಿರಲಿಲ್ಲ. ಜನರ ಗುಂಪು ರಂಗನಾಥನ ಮನೆಯ ಕಡೆಗೆ ನುಗ್ಗುತ್ತಿದೆಯೆಂದು ಅದೃಷ್ಟವಾಶಾತ್ ಯಾರೋ ಮೂರ್ತಿ ಕಿವಿಯಲ್ಲಿ ಹೇಳಿದರು. ಗುಂಪಿನ ಚಲನವನ್ನು ನಿಲ್ಲಿಸದಿದ್ದರೆ ಅನಾಹುತವೇ ಆಗುವುದೆಂದು ಮೂರ್ತಿಗೆ ಗೊತ್ತಾಯಿತು. ಆದ್ದರಿಂದ ಅವನು ಓಡಿದನು. ಅಷ್ಟು ಹೊತ್ತಿಗಾಗಲೇ ಗುಂಪು ರಂಗನಾಥನ ಮನೆಗೆ ಅತಿ ಸಮೀಪದಲ್ಲೇ ಹೋಗುತ್ತಿತ್ತು. ಗುಂಪನ್ನು ನೋಡಿದ

ರಂಗನಾಥನೂ, ಅವನ ಸ್ನೇಹಿತರೂ ಮನೆಯ ಹಿಂದಿನ ಬಾಗಿಲಿನಿಂದ ಕಾರಿನಲ್ಲಿ ಹೇಳದೆ ಕೇಳದೆ ಪರಾರಿಯಾದರು. ಗುಂಪನ್ನು ಚದುರಿಸಲು ಮೂರ್ತಿ ಒಂದು ದೊಡ್ಡ ಸಾಹಸವನ್ನೇ ಮಾಡಬೇಕಾಗಿಬಂತು. ಅವನೊಂದು ದೀರ್ಘವಾದ ಉಪನ್ಯಾಸವನ್ನು ಮಾಡಿ ಗುಂಪು ಚದುರುವಂತೆ ಮಾಡಿದರು. ತಮ್ಮ ನಾಯಕ ದಿವಂಗತ ಮೋಹನನು ಗಾಂಧೀಜಿಯವರ ನಿಜವಾದ ಶಿಷ್ಯನಾಗಿ ಸಂಪೂರ್ಣ ಅಹಿಂಸಾವ್ರತವನ್ನಾಚರಿಸಿದವನೆಂದೂ, ಅವನ ಆತ್ಮಕ್ಕೆ ಶಾಂತಿ ದೊರೆಯಬೇಕಾದರೆ ಅವನ ಹಿಂಬಾಲಕರೆನಿಸಿಕೊಂಡವರು ಹಿಂಸಾಕೃತ್ಯಕ್ಕೆ ಕೈ ಹಾಕಬಾರದೆಂದೂ, ಹೇಳಿದ ನಂತರ ಮಾತ್ರ ಗುಂಪು ಚದುರಿತು.

ದೇವರ ಉತ್ಸವದ ರೀತಿಯಲ್ಲಿ ಮೋಹನನ ಅಂತ್ಯ ಮೆರವಣಿಗೆ ನಡೆಯಿತು. ಸಾವಿರಾರು ಜನರು ಕಂಬನಿಗರೆದು ಗೌರವವನ್ನು ಸಲ್ಲಿಸಿದರು. ಪವಿತ್ರಪುರದಿಂದ ಪಂಜರವಳ್ಳಿಯವರೆಗೆ ದಾರಿ ಜನಸಂದಣಿಯಿಂದ ಕಿಕ್ಕಿರಿದು ಹೋಗಿತ್ತು. ಜನಸ್ತೋಮ ಪ್ರವಾಹದಂತೆ ಪಂಜರವಳ್ಳಿಯ ಕಡೆಗೆ ನುಗ್ಗುತ್ತಿತ್ತು. ಮೋಹನನ ಕಳೇಬರವನ್ನು ಅವನ ತಾಯಿಯನ್ನು ದಹನ ಮಾಡಿದ ಸ್ಥಳದಲ್ಲೇ ದಹನ ಮಾಡಿದರು. ಮೂರ್ತಿಯು ಮೊದಲು ಅಗ್ನಿ ಸ್ಪರ್ಶಮಾಡಿದನು.

ಮೋಹನನ ಭೌತಿಕ ದೇಹ ಅಗ್ನಿದೇವನ ಪಾಲಾಗುತ್ತಿದ್ದುದನ್ನು ಜನರು ಶೋಕ ಗೌರವಗಳಿಂದ ನೋಡುತ್ತಿದ್ದರು. ಅಲ್ಲಿ ಸೇರಿದ್ದ ಜನರಿಗೆ ಮೋಹನನಿಲ್ಲದ ಜಗತ್ತು ಶೂನ್ಯವಾಗಿ ಕಂಡಿತ್ತು. ಮೋಹನನು ನಿಜವಾಗಿಯೂ ಜನತೆಯ ಮೋಹನ ಮೂರ್ತಿಯಾಗಿದ್ದನು. ಮೋಹನನ ದೇಹವು ಭಸ್ಮವಾಗುತ್ತಿದ್ದಾಗ ಸಾಯಂಕಾಲವಾಗಿತ್ತು. ಪ್ರಕೃತಿದೇವಿಯು ದುಃಖದಿಂದ ನಿಟ್ಟುಸಿರು ಬಿಟ್ಟು ಅಳುತ್ತಿರುವಳೋ ಎಂಬಂತೆ, ಮೋಡ ಕವಿದು ತಂಗಾಳಿ ಸುಯ್ಯೆಂದು ಬೀಸುತ್ತಿತ್ತು. ತುಂತುರು ಮಳೆ ಪಳ ಪಳನೆ ಉದುರುತ್ತಿತ್ತು. ಮೋಹನನ ಪರಲೋಕ ಯಾತ್ರೆಗೆ ಬೆಳಕನ್ನು ಒದಗಿಸುತ್ತಿರುವನೋ ಎಂಬಂತೆ ಸೂರ್ಯನು ಸಹ್ಯಾದ್ರಿಯ ಪಡವಲ ದಿಕ್ಕಿನಲ್ಲಿ ಅಸ್ತಮಯವಾಗುವ ಮುನ್ನ ಕೆಂಡದಂತೆ ಉರಿಯುತ್ತಿದ್ದನು. ಕಾಲು ಶತಮಾನ ಜಾಜ್ವಲ್ಯಮಾನವಾಗಿ ಪ್ರಜ್ವಲಿಸಿ ಬೆಳಗಿದ ಪಂಜರವಳ್ಳಿಯ ಪಂಜು ನಂದಿ ಹೋಯಿತು. ಸತ್ಯಕ್ಕೆ ಸೋಲಾಯಿತೆಂದು ಪವಿತ್ರಪುರ ತಾಲ್ಲೂಕಿನ ಜನರು ನಿಟ್ಟುಸಿರು ಬಿಟ್ಟರು.

# ಅಭಿಪ್ರಾಯಗಳು

'ಪಂಜರವಳ್ಳಿಯ ಪಂಜು' ನಿಜವಾಗಿಯೂ ಸತ್ಯದ, ನ್ಯಾಯದ ಧರ್ಮದ, ಧೈರ್ಯದ, ಸ್ಥೈರ್ಯದ ಪಂಜಾಗಿದೆ.

**–ಬಸವರಾಜ ಕಟ್ಟೀಮನಿ**

ಮಾಜಿ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಕಡಿದಾಳ್ ಮಂಜಪ್ಪನವರ ಪ್ರಾಮಾಣಿಕತೆ, ಸತ್ಯ, ಶೀಲ, ಧರ್ಮ, ನ್ಯಾಯ ಮತ್ತು ನೀತಿಗಳಿಗೆ ಈ ಕ್ರಾಂತಿಕಾರಿ ಕಾದಂಬರಿ 'ಪಂಜರವಳ್ಳಿಯ ಪಂಜು' ಉದಾಹರಣೆಯಾಗಿದೆ. ಮೋಹನನ ಪಾತ್ರ ನನ್ನ ಮನಸ್ಸಿನ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಿದೆ ; ಭವಿಷ್ಯದಲ್ಲಿ ಸಂಪದ್ಭರಿತ ಭವ್ಯಭಾರತವನ್ನು ಪುನರ್ ನಿರ್ಮಾಣ ಮಾಡಲು ಬಿಸಿರಕ್ತದ ಯುವಕರಿಗೆ ಮಾರ್ಗದರ್ಶನವಾಗಿದೆ. ನಮ್ಮ ತಾಯ್ನಾಡಿಗೆ *'Constitution'* ಹೇಗೆ ಕಾಂಗ್ರೆಸ್ಸಿಗರಿಗೆ ಈ ಪಂಜು ಒಂದು 'ಕೈಕನ್ನಡಿ ; ಕೈಪಿಡಿ ; ಕಣ್ಣು !' ದಕ್ಷಿಣದ ಕನ್ಯಾಕುಮಾರಿಯಿಂದ ಉತ್ತರದ ಕಾಶ್ಮೀರದವರೆಗೂ ತಿಳಿಯುವ ಭಾಷೆಯಲ್ಲಿ ಭಾಷಾಂತರವಾಗಲಿ.

**–ಎಚ್.ಪಿ. ಮೂಡ್ಲಿ**

'ಬರವಣಿಗೆ ಚೆನ್ನಾಗಿದೆ. ಅದರಲ್ಲೂ ಮಲೆನಾಡಿನ ಜೀವನ ಚಿತ್ರ ಪ್ರಕೃತಿ ಓದುಗರ ಕಣ್ಣು ಕಟ್ಟಿ ನಿಲ್ಲುವುದು. ಶೈಲಿ ಸುಲಭವಾಗಿದೆ. ಸಂಭಾಷಣೆ ಮಲೆನಾಡಿನ ವೈಶಿಷ್ಟ್ಯಗಳಿಂದ ಸೊಗಸಾಗಿದೆ. ಕಿವಿಗೆ ಸಾಮಾನ್ಯವಾಗಿ ಇಂದಿನ ಕಾದಂಬರಿಗಳಲ್ಲಿ ಅನುಭವಿಸಲಾಗದ ಇಂಪನ್ನುಂಟು ಮಾಡುವಂತಹದಾಗಿದೆ. ಲಲಿತ ಸಾಹಿತ್ಯವೆನಿಸುವ ಕಾದಂಬರಿಗೆ ಬೇಕಿದ್ದ ಕೆಲವು ಗುಣಗಳು ಲೇಖಕರಲ್ಲಿ ಕಂಡು ಬರುವುವು.'

**–ಪ್ರಜಾವಾಣಿ**

'ಇದು ಸಾಮಾನ್ಯ ಜನತೆಗೆ ತಮ್ಮನ್ನಾಳುವವರ ಬಗೆಗೆ ಎಚ್ಚರವನ್ನು ನೀಡುವುದರಲ್ಲಿ ಸಫಲವಾಗಿದೆ.'

**–ಸಂಯುಕ್ತ ಕರ್ನಾಟಕ**

'ಶ್ರೀ ಕಡಿದಾಳ್ ಮಂಜಪ್ಪನವರು ತಮ್ಮ ಜೀವನಾನುಭವಗಳನ್ನು ಈ ಕಾದಂಬರಿಯಲ್ಲಿ ಭಟ್ಟಿ ಇಳಿಸಿದ್ದಾರೆನ್ನಬಹುದು.

**–ಶರಣ ಸಾಹಿತ್ಯ**

'ಸಮಾಜದ ಪ್ರತಿಬಿಂಬ ಸಾಹಿತ್ಯ ಎಂಬ ಮಾತು ಇಲ್ಲಿ ಸತ್ಯವಾಗಿದೆ.'

**–ಕನ್ನಡ ನುಡಿ**

'ಈ ಕಾದಂಬರಿ ರಾಜಕೀಯ, ಸಾಮಾಜಿಕ, ಸಾಹಿತ್ಯಗಳ ತ್ರಿವೇಣಿ ಸಂಗಮವಾಗಿದೆ. ಸಾಹಿತ್ಯದೇವಿ ಸರಸ್ವತಿಯಾಗಿದ್ದಾಳೆ. ಇದು ಕನ್ನಡದ *'Les Miserables'*

**–ಜೀವನ**

'ರಾಜಕೀಯದ ಬಗ್ಗೆ ಯಾರಾದರೂ ಬರೆಯಬಹುದು, ಬರಿಯುತ್ತಲೂ ಇದ್ದಾರೆ. ಆದರೆ ಅದೇ ಕ್ಷೇತ್ರದಲ್ಲಿ ಅದರಲ್ಲೇ ಮುಳುಗೇಳುತ್ತಿರುವ ಒಬ್ಬ ವ್ಯಕ್ತಿ ರಾಜಕೀಯದಲ್ಲಿನ ಹೊಲಸನ್ನು ತೊಡೆಯಲು, ಅಲ್ಲಿ ನಡೆಯುವ ಹೇಯ ಕೃತ್ಯಗಳನ್ನು ಹೊರಗೆಳೆಯಲು ಲೇಖನಿಯ ನೆರವನ್ನು ಬಯಸಿದಾಗ ಅದು ಪೂರ್ಣವಾಗಿ ಸ್ವಾಗತಾರ್ಹವಾದುದು. ತಮ್ಮ ಅನುಭವಗಳಿಗೆ ಕಾದಂಬರಿಯ ರೂಪ ಕೊಟ್ಟು ಕನ್ನಡಿಗರ ಕೈಗಿತ್ತಿರುವ ಶ್ರೀ ಕಡಿದಾಳರು ನಿಜವಾಗಿಯೂ ಅಭಿನಂದನಾರ್ಹರು.

**–ಗೋಕುಲ**

'ಪಂಜರವಳ್ಳಿಯ ಪಂಜು ರಾಜಕೀಯ ಕಾದಂಬರಿಯಾಗಿ ಹೊರಬಂದು ಕ್ರಾಂತಿಕಾರಿ ಸಾಹಿತ್ಯದ ಕೆಂಗಿಡಿಕಾರಿದೆ.'

**–ಜನಪ್ರಗತಿ**

ಕಾದಂಬರಿಯು ಶೃಂಗಾರ ವೀರ ಕರುಣಾರಸಗಳ ಉದ್ಯಾನವಲ್ಲ; ಆರ್ಥಿಕ, ಬಡತನ, ರಾಜಕೀಯಗಳ ಅಗ್ನಿಕುಂಡದಂತಿದೆ. ಇದೊಂದು ರಾಜಕೀಯ ಗ್ರಂಥವೆಂದೇ ಹೇಳಬಹುದು. ಇದು ವ್ಯಕ್ತಿಗಳ ಕಥೆಯಲ್ಲ; ಇಡೀ ದೇಶದ ಸುಖ ದುಃಖಗಳ ಚಿತ್ರಣ.

**–ಸೀತಾರಾಮ ಶಾಸ್ತ್ರಿ**

ಕಾದಂಬರಿಯ ಮೊದಲಿನಿಂದ ಕೊನೆಯವರೆಗೆ ಕಂಡುಬರುವುದು ಲೇಖಕರ ಅಸದೃಶ ಮಾನವಾಂತಃಕರಣ. ಕರುಣಾಜಲಭಿಷಿಕ್ತ ಲೇಖಕನಿಂದಲೇ ಉತ್ತಮ ಕೃತಿ ಹೊರಬರುವುದೆಂಬ ಸಿದ್ಧಾಂತವನ್ನು ನಾವು ಒಪ್ಪಿಕೊಳ್ಳುವುದಾದರೆ, ಈ ಕೃತಿ ಅಂಥ ವರ್ಗಕ್ಕೆ ಸೇರಿದುದಾಗಿದೆ.

ಶ್ರೀ ಮಂಜಪ್ಪನವರು ತಮ್ಮ ಮತ್ತು ತಮ್ಮವರ ಕಷ್ಟಸುಖಗಳನ್ನು ಚೆನ್ನಾಗಿ ಕಂಡುಂಡವರು. ಅವುಗಳನ್ನು ಪರಿಣಾಮಕಾರಿಯಾಗಿ ಬರೆಯಬಲ್ಲ ಸಾಮರ್ಥ್ಯವನ್ನು ಈ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ.

**–ಅ.ನ.ಕೃ.**

ಸ್ವತಃ ಕಾರ್ಯರಂಗದಲ್ಲಿ ಕರ್ಮಯೋಗಿಗಳಂತೆ ದುಡಿದು ಅನುಭವ ಪಡೆದು, ಶ್ರೀ ಮಂಜಪ್ಪನವರು ಭಾವ–ವಿಚಾರಗಳಿಂದ ತುಂಬಿದ ಹೃದಯದಿಂದ ಸಾಹಿತ್ಯ ನಿರ್ಮಾಣಕ್ಕೆ ಕೈಹಾಕಿದ್ದಾರೆ. ಈ ಪುಸ್ತಕದ ಅನುಪಮತ್ವ ಈ ಮಾತಿನಲ್ಲಿದೆ.

ಅವರು ಸ್ವಭಾವದಿಂದ ಧ್ಯೇಯವಾದಿಗಳು. ಆದರೆ ನಿತ್ಯ ವ್ಯವಹಾರದಲ್ಲಿ ನಡೆಯುವ ಚಿಲ್ಲರೆಗಳನ್ನು ನೋಡಿ ತಲ್ಲಣಗೊಂಡು ಹಲವಾರು ಮಾತುಗಳನ್ನು ಅವರು ಚೆನ್ನಾಗಿ ಬಣ್ಣಿಸಿದ್ದಾರೆ. ಅದೆಲ್ಲ ವಿಚಾರ ಪ್ರಚೋದಕವಾಗಿದೆ, ವಿವೇಕೋದಯಕ್ಕೆ ನಾಂದಿ ಇಡುವಂತಾಗಿದೆ.

ಮಲೆನಾಡಿನ ನಿಸರ್ಗದ ವರ್ಣನೆ ಅವರು ಕಾವ್ಯಮಯ ಭಾಷೆಯಲ್ಲಿ ಮಾಡಿದ್ದಾರೆ.

**–ರಂಗನಾಥ ದಿವಾಕರ**

ಶ್ರೀ ಮಂಜಪ್ಪನವರು ತಮ್ಮ ಬಿಡುವಿನಲ್ಲಿ ಸಾಹಿತ್ಯದ ಹವ್ಯಾಸಕ್ಕೆ ಬಿದ್ದು ಉತ್ತಮ ಕೃತಿ ಒಂದನ್ನು ಕನ್ನಡಕ್ಕೆ ನೀಡಿದ್ದಾರೆ. ಕನ್ನಡ ಕಾದಂಬರಿಗೆ ಸಾಧಾರಣವಾಗಿ ರೂಢಿಯಾದ ಪ್ರಣಯ–ಶೃಂಗಾರಗಳನ್ನು ಕೈಬಿಟ್ಟೂ ಕೂಡ ಕಥೆ ವೀರ್ಯವಂತವಾಗಿ ರಸವಂತವಾಗಿ ಇರಬಲ್ಲುದು ಎಂಬುದನ್ನು ಸಾಧಿಸಿದ್ದಾರೆ. ಇದರಲ್ಲಿ ನನಗೆ ಕಂಡುಬಂದದ್ದು ನಮ್ಮ ಇಂದಿನ ರಾಜಕೀಯ ಜೀವನದ ವಾಸ್ತವ ಚಿತ್ರ, ಸತ್ಯ ಚಿತ್ರ.

**–ಸಿದ್ಧವ್ವನಹಳ್ಳಿ ಕೃಷ್ಣಶರ್ಮ**

*'Panjaravallia Panju* turns its light on evils which today bedevil the congress : Jockeying for positions, gerrymanderign of elections, graft and corruption. Though the novelist's preoccupaion is politics, he pleases us as a story teller. The novelist is persuasive when his characters are in a philosophical mood ; compelling when they have visions of truth and speak in majestic phrases sanctified by the lips of Mahatma. It deserves a wide audience. For Congress-men it ought to be a T*ext Book.* We hope translations in other languages will be forthcoming'

**-Mysindia**

"To turn hard realities of politics into readable fiction is a rare achievement and to Mr. Kadidal Manjappa, a former Chief Minister of Mysore, goes this unique credit."

**-The Illustrated Weekly of India**



ಕಾದಂಬರಿಯ ಮೊದಲಿನಿಂದ ಕೊನೆಯವರೆಗೆ ಕಂಡುಬರುವುದು ಲೇಖಕರ ಅಸದೃಶ ಮಾನವಾಂತಃಕರಣ, ಕರುಣಾಜಲಭಿಷಿಕ್ತ ಲೇಖಕನಿಂದಲೇ ಉತ್ತಮ ಕೃತಿ ಹೊರಬರುವುದೆಂಬ ಸಿದ್ಧಾಂತವನ್ನು ನಾವು ಒಪ್ಪಿಕೊಳ್ಳುವುದಾದರೆ, ಈ ಕೃತಿ ಅಂಥ ವರ್ಗಕ್ಕೆ ಸೇರಿದುದಾಗಿದೆ.

- ಅ. ನ. ಕೃ.

ಸ್ವತಃ ಕಾರ್ಯರಂಗದಲ್ಲಿ ಕರ್ಮಯೋಗಿಗಳಂತೆ ದುಡಿದು ಅನುಭವ ಪಡೆದು, ಶ್ರೀ ಮಂಜಪ್ಪನವರು ಭಾವ-ವಿಚಾರಗಳಿಂದ ತುಂಬಿದ ಹೃದಯದಿಂದ ಸಾಹಿತ್ಯ ನಿರ್ಮಾಣಕ್ಕೆ ಕೈ ಹಾಕಿದ್ದಾರೆ. ಈ ಪುಸ್ತಕದ ಅನುಪಮತ್ವ ಈ ಮಾತಿನಲ್ಲಿದೆ.

- ರಂಗನಾಥ ದಿವಾಕರ

ಶ್ರೀ ಮಂಜಪ್ಪನವರು ತಮ್ಮ ಬಿಡುವಿನಲ್ಲಿ ಸಾಹಿತ್ಯದ ಹವ್ಯಾಸಕ್ಕೆ ಬಿದ್ದು ಉತ್ತಮ ಕೃತಿ ಒಂದನ್ನು ಕನ್ನಡಕ್ಕೆ ನೀಡಿದ್ದಾರೆ. ಕನ್ನಡ ಕಾದಂಬರಿಗೆ ಸಾಧಾರಣವಾಗಿ ರೂಢಿಯಾದ ಪ್ರಣಯ- ಶೃಂಗಾರಗಳನ್ನು ಕೈಬಿಟ್ಟೂ ಕೂಡ ಕಥೆ ವೀರ್ಯವಂತವಾಗಿ ರಸವಂತವಾಗಿ ಇರಬಲ್ಲುದು ಎಂಬುದನ್ನು ಸಾಧಿಸಿದ್ದಾರೆ. ಇದರಲ್ಲಿ ನನಗೆ ಕಂಡುಬಂದದ್ದು ನಮ್ಮ ಇಂದಿನ ರಾಜಕೀಯ ಜೀವನದ ವಾಸ್ತವ ಚಿತ್ರ, ಸತ್ಯ ಚಿತ್ರ.

- ಸಿದ್ದವ್ವನಹಳ್ಳಿ ಕೃಷ್ಣಶರ್ಮ



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು ೫೬೦೦೦೨